ಸಿದ್ಧವಿಲಾಸ ಗ್ರಂಥಮಾಲಾ ೮.

॥ ಓಂ ತತ್ಸತ್ ॥

॥ ಕೃಷ್ಣಂ ವಂದೇ ಜಗದ್ಗುರುಂ ॥

## ಸಮಾಹಾತ್ಮ್ಯ ಶ್ರೀಮದ್ಭಗವದ್ಗೀತಾ

# ಗೀತಾರ್ಥ ಪ್ರಬೋಧಿನೀ



ಸೀತಾರಾಮ ಶಾಂತಾನಂದ ಸ್ವಾಮಿಗಳು
ಇವರ ಬಳಿಯಲ್ಲಿ
ನಾರಾಯಣ.ಪ್ರಸಾದ್ ಮತ್ತು ಆದಿನಾರಾಯಣ ಅವರಿಂದ
[ ಶ್ರೀ ಸಂತೂರಾಮ್‌ಸ್ವಾಮಿಗಳ ಅನುಮತಿ ಪಡೆದು ]
ಸ್ವಕೀಯ

ಶ್ರೀ-ಸಿದ್ಧವಿಲಾಸ ಪ್ರಿಂಟರ್ಸ್,
೧೬೫, ಗಾಂಧೀನಗರ, ಬೆಂಗಳೂರು-೨.
ಇಲ್ಲಿ ಮುದ್ರಿಸಿ ಪ್ರಕಾಶಿಸಲ್ಪಟ್ಟಿರುತ್ತದೆ.

ಮೊದಲನೇ ಆವೃತ್ತಿ ೧೫೦೦ ಪ್ರತಿಗಳು.

1954

ಟಪಾಲುಖರ್ಚು ಪ್ರತ್ಯೇಕ ( ಬೆಲೆ ರೂ. ೧—೮—೦ )

॥ ಓಂ ॥

# ಪ್ರ ಸ್ತಾ ವ ನೆ.

ಶ್ರೀಮದ್ಭಗವದ್ಗೀತೆಯು ಶ್ರೀ ಕೃಷ್ಣಪರಮಾತ್ಮನ ಶ್ರೀ ಮುಖದಿಂದ ಹೊರಟ ಅಮರವಾಣಿಯು. ಇದರಲ್ಲಿ ಪರಮ ರಹಸ್ಯವಾದ ಅನೇಕ ಉಪದೇಶಗಳಿವೆ. ಸರ್ವಲೋಕಹಿತಾರ್ಥವಾಗಿ ಗೀತಾಚಾರ್ಯನಾದ ಶ್ರೀ ಕೃಷ್ಣಭಗವಂತನು ಸಮಸ್ತ ವೇದ ಶಾಸ್ತ್ರಪುರಾಣಾದಿಗಳ ಮಥಿತಾರ್ಥವನ್ನು ಇದರಲ್ಲಿ ಸಂಕ್ಷೇಪವಾಗಿ ನಿರೂಪಿಸಿದ್ದಾನೆ. ಕಲಿಯುಗದಲ್ಲಿ ಮನುಷ್ಯರು ಅಲ್ಪಾಯುಸ್ಸು, ಮನೋವಾಕ್ಕಾಯಗಳ ದುರ್ಬಲತೆ, ರೋಗಬಾಧೆ, ವಿಷಯಾಸಕ್ತಿ ಮತ್ತು ಅನೇಕಬಗೆಯ ಸಾಂಸಾರಿಕ ಚಿಂತನೆಗಳಿಂದ ಪೀಡಿತರಾಗಿ, ಸರ್ವ ಜಗನ್ನಿಯಾಮಕನಾದ ಪರಮೇಶ್ವರನನ್ನು ಮರೆತು, ಅವನಲ್ಲಿ ಶ್ರದ್ಧಾ ಭಕ್ತಿಗಳಿಲ್ಲದೆ ಅಧೋಗತಿಯನ್ನು ಹೊಂದುತ್ತಾರೆಂದು ತಿಳಿದು,ಪರಮ ಕಾರುಣಿಕನೂ ಭಕ್ತವತ್ಸಲನೂ ಭವಸಾಗರ ತಾರಕನೂ ಆದ ಶ್ರೀ ಕೃಷ್ಣಪರಮಾತ್ಮನು ಸರ್ವ ಜನರಿಗೆ ಆತ್ಮಕಲ್ಯಾಣವನ್ನುಂಟುಮಾಡಲೋಸುಗ ಅರ್ಜುನನ್ನು ನಿಮಿತ್ತ ಮಾಡಿಕೊಂಡು ಕರ್ಮ ಭಕ್ತಿ ಮತ್ತು ಜ್ಞಾನಕ್ಕೆ ಸಂಬಂಧಿಸಿದ ಅನೇಕ ಮಹತ್ತರವಾದ ಅಧ್ಯಾತ್ಮ ವಿಷಯಗಳನ್ನು ಕೂಲಂಕುಷವಾಗಿ ವಿಮರ್ಶಿಸಿರುವನು. ಮೋಹಗ್ರಸ್ತನಾದ ಅರ್ಜುನನ ಅಜ್ಞಾನಜನಿತ ಮೋಹವನ್ನು ಅಶೇಷವಾಗಿ ನಾಶಮಾಡಿ, ಜ್ಞಾನದೀಪವನ್ನು ಕೊಟ್ಟು ಕರ್ತವ್ಯಕರ್ಮದಲ್ಲಿ ತತ್ಪರತೆಯನ್ನುಂಟುಮಾಡಿ, ನಿಷ್ಕಾಮಕರ್ಮಯೋಗಾಚರಣೆಯ ಮೂಲಕ ತತ್ವಜ್ಞಾನವನ್ನುಂಟುಮಾಡಿದನು.

ವಿಶ್ವಸಾಹಿತ್ಯದ ವಾಙ್ಮಯದಲ್ಲೆಲ್ಲಾ ಗೀತೆಯು ಅತ್ಯುನ್ನತ ಸ್ಥಾನವನ್ನು ಅಲಂಕರಿಸಿದೆ. ಜನರಿಗೆ ಗೀತೆಯಮೇಲಿರುವಷ್ಟು ಅಪಾರವಾದ ಶ್ರದ್ಧಾ ಭಕ್ತಿ ಪೂಜ್ಯಭಾವ ಮತ್ತು ಗೌರವಾತಿಶಯಗಳು ಬೇರೆಯಾವ ಶಾಸ್ತ್ರಗಳಲ್ಲಿಯೂ ಇರುವಂತೆ ಕಂಡುಬರುವುದಿಲ್ಲ. ಏಕೆಂದರೆ, ಸಾಹಿತ್ಯವು ಅಲ್ಪಜ್ಞನಾದ ಮಾನವನ ರಚನೆ; ಗೀತೆಯಾದರೋ ಸರ್ವಜ್ಞನೂ ಪುರಾಣಪುರುಷೋತ್ತಮನೂ ಆದ ಸಾಕ್ಷಾತ್ ಶ್ರೀಹರಿಯ ವಾಗ್ರೂಪವಾದ ಅಮೃತ ಧಾರೆ! ಜ್ಞಾನ ಭಂಡಾರ!

ಗೀತೆಯು ಅನೇಕ ರಹಸ್ಯವಾದ ಆಧ್ಯಾತ್ಮಿಕ ವಿಷಯಗಳನ್ನು ಪ್ರತಿಪಾದಿಸಿದೆ. ಅನೇಕ ಜಟಿಲ ಪ್ರಶ್ನೆಗಳಿಗೆ ಅತ್ಯಂತ ಸಮಂಜಸವಾದ, ಭಾವಗರ್ಭಿತವಾದ ಉತ್ತರ ಕೊಟ್ಟಿದೆ. ವಿಷಯ ಇಷ್ಟು ಗಹನವಾದರೂ, ಗೀತೆಯ ಶೈಲಿ ಅತಿಸರಳ, ಸುಂದರ ಮತ್ತು ಸ್ಪಷ್ಟವಾಗಿದೆ. ಗೀತೆಯನ್ನು ಓದಿ ತಿಳಿಯಲು ಸಂಸ್ಕೃತದ ಹೆಚ್ಚು ಪಾಂಡಿತ್ಯವೇನೂ ಬೇಕಾಗಿರುವುದಿಲ್ಲ. ಇದರ ಭಾಷೆಯು ಆಬಾಲವೃದ್ಧರಿಗೂ ತಿಳಿಯುವಂತೆ ಅತಿ ಸರಳವಾಗಿ, ನೇರವಾಗಿ ಮನಮುಟ್ಟುವಂತೆ, ಮನೋಹರಯುಕ್ತವಾಗಿದೆ. ಇದನ್ನು ನಿತ್ಯ ಶ್ರದ್ಧಾ ಭಕ್ತಿ ಮತ್ತು ಏಕಾಗ್ರ ಚಿತ್ತದಿಂದ ಪಠಿಸಿ ವಿಚಾರಿಸಿದಲ್ಲಿ, ನಿತ್ಯವೂ ಹೊಸ ಹೊಸ ಭಾವಗಳು, ಅರ್ಥಗಳು ಪ್ರತಿ ಶ್ಲೋಕದಲ್ಲಿಯೂ ಕಂಡುಬಂದು ಬುದ್ಧಿ ವಿಕಸಿತವಾಗುವುದು. ಇದರಿಂದ ಗೀತೆಯು ನಿತ್ಯನವೀನವಾಗಿದೆ. ಸರ್ವ ದೇಶದ ಮತ್ತು ಸರ್ವ ಕಾಲದ ಮತ ಸಿದ್ಧಾಂತಗಳೂ ಇದರಲ್ಲಿ ಅಡಗಿವೆ. ಯಾರು ಇದನ್ನು ಯಾವ ಭಾವದಿಂದ ಓದುವರೋ ಅವರಿಗೆ ಆ ಭಾವವೇ ಇದರಲ್ಲಿರುವಂತೆ ತೋರಿ ಆ ಮೂಲಕವೇ ಅವರಿಗೆ ಸುಖ ಶಾಂತಿಯಾಗುವುದು. ಆದ್ದರಿಂದ ಸರ್ವ ಸಮನ್ವಯ ಮಾಡುವ ಅನುಪಮ ಗ್ರಂಥ ಗೀತೆ.

ಗೀತೆಯಲ್ಲಿ ಹೇಳಿರುವಂತೆ ತನ್ನ ಜೀವನವನ್ನು ನಡೆಸಿಕೊಂಡು ಹೋಗುವ ಮನುಷ್ಯನು ಇಹದಲ್ಲಿ ಸುಖಸಾಮ್ರಾಜ್ಯಗಳನ್ನೂ ಜ್ಞಾನದ ಮೂಲಕವಾಗಿ ಮೋಕ್ಷವನ್ನೂ ಹೊಂದುವುದರಲ್ಲಿ ಸಂಶಯವಿಲ್ಲ. ಮೋಕ್ಷಸ್ವರೂಪನಾದ ಭಗವಂತನನ್ನು ಸೇರುವುದಕ್ಕಾಗಿ ಗೀತೆಯಲ್ಲಿ ಅನೇಕವಾದ ಸಾಧನೆಗಳನ್ನು ತಿಳಿಸಿದ್ದಾರೆ. ಅಂದರೆ ಕರ್ಮಯೋಗ, ಭಕ್ತಿಯೋಗ, ಅಷ್ಟಾಂಗಯೋಗ, ಜ್ಞಾನಯೋಗ (ಸಾಂಖ್ಯಯೋಗ)—ಮುಂತಾದ ಎಲ್ಲಾ ಮಾರ್ಗಗಳಿಂದಲೂ ಭಗವಂತನನ್ನು ಹೊಂದಬಹುದು. ಆದರೆ ಅವರವರ ಧರ್ಮ, ಸ್ವಭಾವ, ಗುಣ, ಪೂರ್ವಸಂಸ್ಕಾರ, ಈಗಿನ ಅಭಿರುಚಿ ಪರಿಸ್ಥಿತಿ ಮತ್ತು ಸ್ವಶಕ್ತ್ಯಾದಿಗಳನ್ನನುಸರಿಸಿ, ಅವರಿಗಿಷ್ಟವಾದ ಮಾರ್ಗವನ್ನು ಅವಲಂಬಿಸಿ ಭಗವತ್ ಸಾಕ್ಷಾತ್ಕಾರವನ್ನು ಪಡೆಯಬಹುದು. ಯಾವ ಮಾರ್ಗದಿಂದಲಾದರೂ ಭಗವಂತನನ್ನು ಪಡೆಯುವಂತೆ ಮಾಡುವುದೇ ಗೀತೆಯ ಧ್ಯೇಯ. ಮಾನವನೂ ಇದೇ ಧ್ಯೇಯದಿಂದ ಶಾಸ್ತ್ರೋಕ್ತರೀತಿಯಲ್ಲಿ ಪ್ರವರ್ತಿಸಿದಲ್ಲಿ ಪರಮಪದವಿಯನ್ನು ಪಡೆಯುತ್ತಾನೆ.

## ಗೀತೆಯಲ್ಲಿ ಹೇಳಿರುವುದು ಎರಡೇ ಮಾರ್ಗ.

1. ಜ್ಞಾನಮಾರ್ಗ ( ಸಾಂಖ್ಯಯೋಗ ). 2. ಕರ್ಮಮಾರ್ಗ (ಕರ್ಮಯೋಗ ಅಥವಾ ಯೋಗನಿಷ್ಠೆ) ಭಕ್ತಿಯು ಯೋಗನಿಷ್ಠೆಯ ಅಂತರ್ಗತ ವಾಗಿದೆ. ಜ್ಞಾನ ಯೋಗಾಚರಣೆಯಲ್ಲಿ ಕರ್ಮವು ಭಾಧಕವಲ್ಲ. ಇನ್ನು ಕರ್ಮವೇ ಪ್ರಧಾನವಾಗಿ ಇರತಕ್ಕ ಕರ್ಮಯೋಗಾಚರಣೆಯಲ್ಲೂ ಕರ್ಮವು ಬಾಧಕವಲ್ಲ. ಬಾಧಕವಾದುದು ಕರ್ತೃತ್ವ ಭೋಕ್ತೃತ್ವರೂಪವಾದ ಅಭಿ ಮಾನ. ಆದುದರಿಂದ ಕರ್ತಾಭೋಕ್ತನೆಂಬ ಅಭಿಮಾನವನ್ನು ತೊರೆದು, ಭಗವಂತನಿಗಾಗಿಯೇ ಮಾಡಲ್ಪಟ್ಟ ಶಾಸ್ತ್ರವಿಹಿತ ಕರ್ಮಗಳು ಬಂಧನಕಾರಕ ವಾಗುವುದಿಲ್ಲ. ಸಕಾಮುಕರ್ಮಗಳಿಗೆ ಎರಡು ನಿಷ್ಠೆಯಲ್ಲೂ ಸ್ಥಾನವಿಲ್ಲ. ಇನ್ನು ಸ್ವರೂಪತಃ ಕರ್ಮಗಳತ್ಯಾಗವು ಸಾಧ್ಯವಿಲ್ಲ.

### (a) ಸಾಂಖ್ಯ ನಿಷ್ಠೆ ಮತ್ತು ಯೋಗನಿಷ್ಠೆಯ ಸ್ವರೂಪ.

ಚರಾಚರಾತ್ಮಕ ಜಗತ್ತು ಪ್ರಕೃತಿಯ ಕಾರ್ಯವಾದ್ದರಿಂದ ಪ್ರಕೃತಿಯ ಗುಣಗಳೇ ಸರ್ವದರಲ್ಲಿಯೂ ವರ್ತಿಸುತ್ತವೆ; ಮರುಮರುಚಿಕೆಯ ಜಲದಂತೆ ಅಥವಾ ಸ್ವಪ್ನ ಸೃಷ್ಟಿಯಂತೆ ಮಾಯಾಮಯವಾದ್ದರಿಂದ ಮಾಯೆಯ ಕಾರ್ಯ ವಾದ ಗುಣಗಳೇ ಗುಣಿಗಳಲ್ಲಿ ವರ್ತಿಸುವುವು, ನಾನುಕರ್ತನೂಅಲ್ಲ, ಭೋಕ್ತನೂ ಅಲ್ಲ, ಪರಂತು ದೃಷ್ಟ, ಸಾಕ್ಷಿ, ಕೂಟಸ್ಥನು-ಹೀಗೆಂದು ತನ್ನನ್ನು ತಿಳಿದವನಾಗಿ, ದೇಹೇಂದ್ರಿಯ ಮನೋಬುದ್ಧ್ಯಾದಿಗಳಿಂದಾಗುವ ಸಮಸ್ತ ಕರ್ಮಗಳಲ್ಲಿ ಕರ್ತೃತ್ವಾಭಿಮಾನವಿಲ್ಲದಿರುವಿಕೆ (5—8,9) ಮತ್ತು ಸಚ್ಚಿದಾನಂದ ಘನ ಸ್ವರೂಪಿಯಾದ ಪರಮಾತ್ಮನ ಸ್ವರೂಪದಲ್ಲಿ ಏಕೋಭಾವನೆಯಿಂದ ನಿತ್ಯ ನಿರಂತರ ನೆಲೆಸಿದ್ದು ಬ್ರಹ್ಮದ ವಿನಹ (ವಾಸುದೇವಃ ಸರ್ವಮಿತಿ) ಅನ್ಯ ಪದಾ ರ್ಥವೇ ಇಲ್ಲವೆಂಬಅಖಂಡ ಭಾವನೆಯಿಂದಿರುವಿಕೆ(13-27,28,29,30) —ಹೀಗಿರುವಸ್ಥಿತಿಯನ್ನು "ಸಾಂಖ್ಯ ನಿಷ್ಠೆ" ಎಂದೆನ್ನುವರು.

(b) ಕಾಣ್ಬರುವ ಈ ಸಂಪೂರ್ಣ ಜಗತ್ತಿನ ಒಳಹೊರಗೂ ಪರಮಾತ್ಮ ನೊಬ್ಬನೇ ಅಖಂಡವಾಗಿ ವ್ಯಾಪಿಸಿರುವನೆಂದು ತಿಳಿದು, ಸಿದ್ಧಿ ಅಸಿದ್ಧಿ ಗಳಲ್ಲಿ ಸಮಭಾವದಿಂದಿದ್ದು, ಆಸಕ್ತಿ ಮತ್ತು ಫಲೇಚ್ಛೆಯ ತ್ಯಾಗಮಾಡಿ, ಭಗವದಾಜ್ಞಾನುಸಾರ ಉಚಿತ ಯಜ್ಞದಾನ ತಪರೂಪ ಸತ್ಕರ್ಮಗಳನ್ನು

ಭಗವದರ್ಪಣಬುದ್ಧಿಯಿಂದ ಮಾಡುವಿಕೆ (ಅ 2—47ರಿಂದ 51), ಮತ್ತು ಶ್ರದ್ಧಾಭಕ್ತಿಪೂರ್ವಕ ಮನೋವಾಕ್ಕಾಯಗಳಿಂದ ಭಗವಂತನನ್ನು ಶರಣು ಹೊಂದಿ, ಆತನ ನಾಮಗುಣ ಪ್ರಭಾವ ಲೀಲೆ ಮತ್ತು ಸ್ವರೂಪಚಿಂತನೆಯನ್ನು ನಿತ್ಯ ಮಾಡುವಿಕೆ—ಇವುಗಳನ್ನು (6—47; 9—14) "ಯೋಗನಿಷ್ಠೆ" (ಕರ್ಮಯೋಗ) ಎನ್ನುವರು.

ಧ್ಯೇಯ ಬ್ರಹ್ಮದ ಚಿಂತನೆಯನ್ನು ಅಭೇದವೃತ್ತಿಯಿಂದ ಮಾಡಿದಲ್ಲಿ ಆ ಸಾಧನೆಯು ಸಾಂಖ್ಯನಿಷ್ಠೆಯ ಅಂತರ್ಗತವಾಗುವುದು. ಇದನ್ನೇ ಶಾಸ್ತ್ರಕಾರರು "ಅಹಂಗ್ರಹ" ಉಪಾಸನೆ ಎಂದು ಹೇಳಿದ್ದಾರೆ. ಈ ಎರಡು ನಿಷ್ಠೆಗಳಿಗೂ ಇರುವ ವ್ಯತ್ಯಾಸವಿಷ್ಟೇ. ಎರಡರಲ್ಲೂ ಭಕ್ತಿ, ಕರ್ಮಗಳು ಸಾಮಾನ್ಯ ರೂಪದಿಂದಲೋ ಅಥವಾ ಪ್ರಧಾನವಾಗಿಯೋ ಇದ್ದೇ ಇರುತ್ತದೆ. ಗೀತೋಕ್ತ ಯೋಗನಿಷ್ಠೆಯು ಭಕ್ತಿಶೂನ್ಯವಾಗಿಲ್ಲ. ದೇಹಕ್ಕೆ ಬೆನ್ನುಮೂಳೆಯಂತೆ, ಸರ್ವ ಸಾಧನೆಗಳಿಗೂ ಭಕ್ತಿಯೇ ಮುಖ್ಯಾಶ್ರಯವಾಗಿದೆ. ಭಕ್ತಿ ಶ್ರದ್ಧೆಗಳಿಲ್ಲದೆ ಯಾವ ಸಾಧನೆಯನ್ನು ಮಾಡಲೂ ಆಗುವುದಿಲ್ಲ. ಆದ್ದರಿಂದ ಜ್ಞಾನ ಪ್ರಾಪ್ತಿಯ ಪರ್ಯಂತ ಭಕ್ತಿಯು ಇರಲೇಬೇಕು. ಇದು ಅಪರಾಭಕ್ತಿ. ಜ್ಞಾನವಾದಮೇಲೂ ಇರುವ ಭಕ್ತಿ ಪರಾಭಕ್ತಿ (ಬ್ರಹ್ಮನಿಷ್ಠೆ) ಎನಿಸುವುದು.

ಜ್ಞಾನನಿಷ್ಠೆಯ ಸಾಧನೆಯನ್ನು ಸುಲಭವಾಗಿ ಗ್ರಹಿಸುವುದಕ್ಕಾಗಿ ಅದನ್ನು ಮುಖ್ಯ ನಾಲ್ಕು ಪಂಗಡಗಳಾಗಿ ವಿಂಗಡಿಸಬಹುದು. (1) ಎಲ್ಲವೂ ಬ್ರಹ್ಮವೇ(ಸರ್ವಂಖಲ್ವಿದಂ ಬ್ರಹ್ಮ). (2)ದೃಶ್ಯ ಪ್ರಪಂಚವು ಮಾಯಾಮಯವಾದುದು. ವಾಸ್ತವವಾಗಿ ಬ್ರಹ್ಮದ ವ್ಯತಿರಿಕ್ತ ಯಾವುದೂ ಇಲ್ಲ. ಬ್ರಹ್ಮವು ತಾನೇ ತಾನಾಗಿದೆ. (3) ಕಾಣ್ಬರುವುದೆಲ್ಲಾ ನನ್ನ ಸ್ವರೂಪವೇ. ನಾನೇ ಸರ್ವವೂ ಆಗಿದ್ದೇನೆ. (4) ಮಾಯಾ ಮತ್ತು ತತ್ಕಾರ್ಯವಾದ ಜಗತ್ತು ಉತ್ಪತ್ತಿಯೇ ಆಗಿಲ್ಲ. ಇರುವುದೆಲ್ಲಾ ಕೇವಲ ಚೇತನ ಆತ್ಮ—ನಾನೇ ಇದ್ದೇನೆ.

ಇಲ್ಲಿ 'ತತ್ವಮಸಿ' ಮಹಾವಾಕ್ಯದ "ತತ್" ಪದದ ಅರ್ಥವು ಮೊದಲಿನ ಎರಡು ಸಾಧನೆಗಳಿಂದಲೂ ಮತ್ತು "ತ್ವಂ" ಪದಶೋಧನೆಯು ಕೊನೆಯ ಎರಡು ಸಾಧನೆಗಳಿಂದಲೂ ವಿವಕ್ಷಿತವಾಗಿದೆ.

ಹೀಗೆಯೇ ಯೋಗನಿಷ್ಠೆಯೂ ಮೂರು ಬಗೆಯಾಗಿದೆ. (1) ಕೇವಲ ಕರ್ಮಯೋಗ. (2) ಭಕ್ತಿಮಿಶ್ರಿತ ಕರ್ಮಯೋಗ· (3) ಭಕ್ತಿಪ್ರಧಾನ ಕರ್ಮಯೋಗ. ಅಸ್ತು.

## ಗೀತೆಯಲ್ಲಿ ಭಕ್ತಿ

ದೇವರು ಯಾರಿಗೆ ಬೇಡ ? ಎಲ್ಲರಿಗೂ ಬೇಕು. ಆದರೆ ದೇವರು ಭಕ್ತಿಗೆ ಮಾತ್ರ ಬೇಗ ಒಲಿಯುತ್ತಾನೆ. "ಭಕ್ತ್ಯಾ ತುಷ್ಯತಿ ಕೇವಲಂ ನಚ-ಗುಣೈಃ ಭಕ್ತಿಪ್ರಿಯೋ ಮಾಧವಃ" ಎಂಬಂತೆ, ಭಗವಂತನು ವಯಸ್ಸು ವಿದ್ಯೆ ರೂಪ ಜಾತಿ ಕುಲಗೋತ್ರಗಳನ್ನು ನೋಡಿ ಒಲಿಯುವುದಿಲ್ಲ. ಭಕ್ತಿಯನ್ನು ನೋಡಿಯೇ ಒಲಿಯುತ್ತಾನೆ. ಭಕ್ತಿ ಎಂದರೆ ದೇವರಲ್ಲಿ ಇಟ್ಟಿರುವ ವಿಶುದ್ಧ ಪ್ರೇಮ, ಅನನ್ಯಭಾವ. ಅರ್ಜುನನ ಭಕ್ತಿಗೆ ಒಲಿದ ಭಗವಂತನು ಅರ್ಜುನನ ಇಚ್ಛಾನುಸಾರ ವಿಶ್ವರೂಪವನ್ನು ಅವನಿಗೆ ತೋರಿಸಿದನು. ಭಕ್ತಿಗೆ ಪರವಶನಾದ ಭಗವಂತನು ಭಕ್ತರಿಗಾಗಿ ಎಂತಹ ಕಾರ್ಯವನ್ನು ಮಾಡುವುದಕ್ಕಾದರೂ ಸೊಂಟಕಟ್ಟಿಕೊಂಡು ಸದಾ ಸರ್ವದಾ ಸಿದ್ಧನಾಗಿ ನಿಂತಿರುತ್ತಾನೆ. ಇದರಿಂದ ಭಕ್ತಿಯ ಮಹತ್ವವು ತಿಳಿದುಬರುತ್ತದೆ. ಗೀತೆಯಲ್ಲಿ ಭಗವಂತನು "ನಮೇಭಕ್ತಃ ಪ್ರಣಶ್ಯತಿ" ತನ್ನ ಭಕ್ತನಿಗೆ ಎಂದಿಗೂ ಅಶುಭವಾಗುವುದಿಲ್ಲವೆಂದು ಕೈಯೆತ್ತಿ ಘೋಷಣೆಮಾಡಿ ಹೇಳಿದ್ದಾನೆ. ಆರ್ತ, ಅರ್ಥಾರ್ಥೀ ಜಿಜ್ಞಾಸು ಮತ್ತು ಜ್ಞಾನಿ ಎಂದು ಭಕ್ತರನ್ನು ನಾಲ್ಕು ಬಗೆಯಾಗಿ ವಿಂಗಡಿಸಿದ್ದಾನೆ. ಇವರಲ್ಲಿ ಆರ್ತ ಅರ್ಥಾರ್ಥೀ ಭಕ್ತರನ್ನೂ ಸಹ ಸುಕೃತಿಗಳೆಂದೇ ಪ್ರಶಂಸೆಮಾಡಿದ್ದಾನೆ. ಒಂಭತ್ತು ಮತ್ತು ಹನ್ನೆರಡನೆಯ ಅಧ್ಯಾಯಗಳು ಭಕ್ತಿರಸಭರಿತವಾಗಿವೆ.

ಕೊನೆಯ ಅಧ್ಯಾಯದ " ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ", ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ (18—65, 66) ಈ ಶ್ಲೋಕಗಳಂತೂ ನವವಿಧ ಭಕ್ತಿಗಳಲ್ಲಿ ಅತ್ಯಂತ ಶ್ರೇಷ್ಠವಾದ ಆತ್ಮನಿವೇದನವೆಂಬ ಭಕ್ತಿಯನ್ನು ನಿರೂಪಣೆ ಮಾಡಿವೆ.

ಸಾಂಖ್ಯ ಮತ್ತು ಕರ್ಮಯೋಗಗಳ ಅನುಷ್ಠಾನಗಳು ಎಲ್ಲರಿಂದಲೂ ಆಚರಿಸಲಾಗುವುದಿಲ್ಲ. ನಿಷ್ಕಾಮ ಭಾವವೇ ಕರ್ಮಯೋಗದ ತಿರುಳು, ಅದ್ವೈತ ಭಾವವೇ ಜ್ಞಾನಯೋಗದ ಸಾರವಾದ್ದರಿಂದ ಇವುಗಳ ಸಾಧನೆಗೆ ಕೆಲವು ಕಟ್ಟಳೆ ಮತ್ತು ಯೋಗ್ಯತೆಗಳು ಬೇಕು. ಆದರೆ ಭಕ್ತಿ ಮಾರ್ಗವು ಸರಳವಾಗಿದೆ. ಎಲ್ಲರೂ ಭಗವಂತನನ್ನು ಭಜಿಸಬಹುದು, ಪೂಜಿಸಬಹುದು, ಸೇವಿಸಬಹುದು. ಭಗವಂತನಲ್ಲಿ ಭಕ್ತಿ ಮಾಡುವುದಕ್ಕೆ ಎಲ್ಲರಿಗೂ ಅಧಿಕಾರವಿದೆ. ಜಾತಿ ಕುಲ ಗೋತ್ರಾದಿಗಳನ್ನು ಇಲ್ಲಿ ಗಣನೆ ಮಾಡುವುದಿಲ್ಲ. ಯಾರಾದರೂ ಸರಿಯೇ ಭಗವಂತನನ್ನು ಭಜಿಸಿ ಭಗವಂತನ ಕೃಪೆಗೆ ಪಾತ್ರರಾಗಬಹುದು. ಮುಖ್ಯವಾಗಿ ಭಕ್ತಿಗೆ ಬೇಕಾಗಿರುವುದು ಅನನ್ಯಭಾವ, ವಿಶುದ್ಧ ಪ್ರೇಮ. ಶ್ರೀ ಭಗವಂತನು ತನ್ನ ಉಪದೇಶದಲ್ಲಿ ಅಲ್ಲಲ್ಲಿ "ನರಃ", "ದೇಹೀ", "ಮಾನವಃ", "ದೇಹಭೃತ್" ಎಂಬ ಪದಗಳನ್ನು ಪ್ರಯೋಗಿಸಿ ಭಕ್ತಿಗೆ ಮನುಷ್ಯಮಾತ್ರದವರೆಲ್ಲರೂ ಅಧಿಕಾರಿಗಳೆಂಬುದನ್ನು ಸೂಚಿಸಿದ್ದಾನೆ. ತಮ್ಮ ತಮ್ಮ ಧರ್ಮ ಕರ್ಮಗಳನ್ನು ಭಗವದಾರಾಧನ ಬುದ್ಧಿಯಿಂದ ಮಾಡಲು ಅದರಿಂದಲೇ ಅವರು ಪರಮ ಸಿದ್ಧಿಯನ್ನು ಪಡೆಯುವರೆಂದೂ (18—45,46), ಸ್ತ್ರೀ ಶೂದ್ರ ಪಾಪಯೋನಿಜರೂ ಭಗವಂತನಲ್ಲಿ ಭಕ್ತಿ ಮಾಡಿ ಪರಮಗತಿಯನ್ನು ಹೊಂದುವರೆಂದೂ (9—32,33) ಹೇಳಿರುವುದರಿಂದ ಭಕ್ತಿಯು ಅತ್ಯಂತ ಶ್ರೇಷ್ಠವಾದುದೆಂಬುದನ್ನು ತಿಳಿಸಿದಂತಾಯಿತು.

ಪ್ರಥಮ ಅಧ್ಯಾಯವಾದ ಅರ್ಜುನ ವಿಷಾದಯೋಗವು ಇಡೀ ಗೀತೆಗೆ ಪೀಠಿಕೆಯಾಗಿದೆ. ಉತ್ತಮಾಧಿಕಾರಿಯಲ್ಲಿ ಇರಬೇಕಾದ ಗುಣಗಳೆಲ್ಲವೂ ಈ ಅಧ್ಯಾಯದಿಂದ ತಿಳಿದು ಬರುತ್ತದೆ. ಆದ್ದರಿಂದಲೇ ಅರ್ಜುನನು ಗೀತೋಪದೇಶಕ್ಕೆ ಅರ್ಹನಾದುದು. ಗೀತೋಕ್ತ ಸ್ಥಿತಪ್ರಜ್ಞನ ಲಕ್ಷಣಗಳು (2—55ರಿಂದ 72 ವರೆಗೆ), ಭಕ್ತರ ಲಕ್ಷಣಗಳು (12—13ರಿಂದ 19 ವರೆಗೆ), ಅಮಾನಿತ್ವಾದಿ ಜ್ಞಾನಿಯ ಲಕ್ಷಣಗಳು (13—7ರಿಂದ 11 ವರೆಗೆ) ಗುಣಾತೀತ ಪುರುಷನ ಲಕ್ಷಣಗಳು (14—22ರಿಂದ 25 ವರೆಗೆ) ಮತ್ತು ದೈವೀ ಸಂಪತ್ತು (16—1ರಿಂದ 3)—ಈ ಗುಣಗಳು ಸರ್ವ ಮುಮುಕ್ಷುಗಳು ಸ್ವೀಕರಿಸಲು ಯೋಗ್ಯವಾದುವು ಮತ್ತು ಆಸುರೀ ಸಂಪತ್ತು (16—4, 7 ರಿಂದ 18 ವರೆಗೆ) ಸರ್ವರೂ ತ್ಯಜಿಸಲು ಯೋಗ್ಯವಾಗಿದೆ.

ಶೋಕಗ್ರಸ್ತನಾದ ಅರ್ಜುನನು ಎರಡನೆಯ ಅಧ್ಯಾಯದ ಸಪ್ತಮ ಶ್ಲೋಕದ ಉತ್ತರಾರ್ಧದಲ್ಲಿ "ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ" ಎಂದು ಹೇಳಿದ್ದಾನೆ. "ಹೇ ಕೃಷ್ಣಾ! ಈಗ ನಾನು ನಿನ್ನಲ್ಲಿ ಶಿಷ್ಯ ಭಾವದಿಂದ ಬಂದು ನಿನ್ನನ್ನು ಮರೆಹೊಕ್ಕಿದ್ದೇನೆ. ನನ್ನ ಮೇಲೆ ಶಾಸನ ಮಾಡುವ ಅಧಿಕಾರವನ್ನೂ ನಿನಗೆ ಕೊಟ್ಟಿದ್ದೇನೆ, ಎಂಬುದಾಗಿ ಹೇಳಿ ಅರ್ಜುನನು ತನ್ನ ಯೋಗಕ್ಷೇಮದ ಸೂತ್ರವನ್ನು ಶ್ರೀ ಕೃಷ್ಣಪರಮಾತ್ಮನಿಗೆ ಒಪ್ಪಿಸಿದ ಕೂಡಲೇ, "ಅಶೋಚ್ಯಾನನ್ವಶೋಚಸ್ತ್ವಂ" (2—11) ಎಂಬ ಶ್ಲೋಕದಿಂದ ಗೀತೋಪದೇಶವು ಪ್ರಾರಂಭವಾಯಿತು ಮತ್ತು "ಸರ್ವ ಧರ್ಮಾನ್ ಪರಿತ್ಯಜ್ಯ" (18—66) ಎಂಬಲ್ಲಿಗೆ ಉಪದೇಶ ಮುಕ್ತಾಯ ವಾಯಿತು. "ಅಶೋಚ್ಯ" (2—11) ಪದದಿಂದ ಉಪಕ್ರಮಿಸಿದ ಗೀತೋ ಪದೇಶವು "ಮಾಶುಚಃ" (18—66) ಪದದಿಂದಲೇ ಉಪಸಂಹಾರ ಮಾಡಿ ರುವುದು ತುಂಬ ಸಮಂಜಸವಾಗಿದೆ.

ಗೀತೆಯನ್ನು ಆರು ಅಧ್ಯಾಯಗಳಿಗೆ ಒಂದು ಷಟ್ಕದಂತೆ ಮೂರು ಭಾಗವಾಗಿ ವಿಂಗಡಿಸಿ ಅದನ್ನು ಕರ್ಮ, ಉಪಾಸನಾ ಮತ್ತು ಜ್ಞಾನವೆಂಬ ಕಾಂಡತ್ರಯಗಳಿಗೆ ಸಮನ್ವಯ ಮಾಡಿದೆ. ಈ ವಿಭಾಗವು ತತ್ವಮಸಿ ಮಹಾ ವಾಕ್ಯದ "ತತ್", "ತ್ವಂ", "ಅಸಿ" ಪದಗಳ ಅರ್ಥಕ್ಕೂ ಸುಂದರವಾಗಿ ಅನ್ವಯವಾಗುತ್ತದೆ.

ಇಂತು ಗೀತೆಯು ಸ್ವಯಮೇವ ಉಪನಿಷತ್ ಆಗಿದೆ. ಈ ಕಾರಣ ದಿಂದಲೇ ಗೀತೆಯ ಅಧ್ಯಾಯಾಂತದಲ್ಲಿ, ಶ್ರೀಮದ್ ಭಗವದ್ಗೀತಾ ಸೂಪನಿ ಷತ್ಸು, ಬ್ರಹ್ಮವಿದ್ಯಾಯಾಂ ಎಂಬ ಶಬ್ದಗಳಿವೆ. ಹೀಗಿದ್ದೂ ಗೀತೆಯು ಕೇವಲ ಯುದ್ಧವನ್ನು ಮಾಡಿಸುವುದಕ್ಕೂ, ಕೇವಲ ಕರ್ಮದಲ್ಲಿ ಪ್ರವರ್ತಿಸು ವುದಕ್ಕೂ ಬರೆಯಲ್ಪಟ್ಟಿದೆಯೆಂದು ತಿಳಿದುಕೊಳ್ಳುವರು.

ಈ. ಯುದ್ಧವನ್ನು ನಿವಾರಿಸುವುದಕ್ಕಾಗಿ ಶ್ರೀ ಕೃಷ್ಣಪರಮಾತ್ಮನು ಸ್ವಯಮೇವ ಪಾಂಡವರ ದೂತನಾಗಿ ಧೃತರಾಷ್ಟ್ರನ ಸನ್ನಿಧಾನಕ್ಕೆ ಹೋದನು. ವಿದುರನೂ, ಭೀಷ್ಮಪಿತಾಮಹನೂ, ಮುಂತಾದವರೆಲ್ಲರೂ ದುರ್ಯೋಧನನಿಗೆ ಎಷ್ಟೋವಿಧವಾಗಿ ಬೋಧಿಸಿದರು. ದುಷ್ಟಬುದ್ಧಿಯಾದ ದುರ್ಯೋಧನನು ಯುದ್ಧವನ್ನು ನಿಲ್ಲಿಸಲು ಒಪ್ಪಲಿಲ್ಲ. ಈ ರೀತಿ ಶಾಂತಿಯನ್ನು ರಕ್ಷಿಸುವ

ಯತ್ನಗಳೆಲ್ಲವೂ ವಿಫಲವಾಗಿ ಯುದ್ಧವೂ ಆರಂಭವಾಯಿತು. ಅರ್ಜುನನು ಅಜ್ಞಾನಜನ್ಯ ವ್ಯಾಮೋಹದ್ವಾರಾ ದುಃಖದಿಂದ ಬೆದರಿ ಯುದ್ಧವನ್ನು ಮಾಡುವುದಿಲ್ಲವೆಂದು ತನ್ನ ಧರ್ಮದಿಂದ ವಿಮುಖನಾದನು. ಆಗ ಅವನ ಶೋಕಕ್ಕೆ ಮೂಲಕಾರಣವಾದ ( ಅಜ್ಞಾನತನ, ಭ್ರಾಂತತನ, ಅನಾತ್ಮ ಪದಾರ್ಥಗಳಲ್ಲಿ ಮಮಕಾರ ) ಅವಿದ್ಯೆಯನ್ನು ದೂರೀಕರಿಸಿ ಆಯನಾ ಕಾಲಕ್ಕೆ ಒದಗಿಬರುವ ಕರ್ತವ್ಯ ಪಾರಾಯಣವನ್ನಾಗಿ ಮಾಡುವ ಉದ್ದೇಶದಿಂದಲೂ ಸಮಸ್ತ ಧರ್ಮಕರ್ಮಗಳನ್ನು ಮಾಡುತ್ತಿದ್ದರೂ ತಾನು ಕಿಂಚಿತ್ ಕರ್ಮವನ್ನಾದರೂ ಮಾಡುವವನಲ್ಲವೆಂತಲೂ, ತಾನು ಅಸಂಗ ನಿರ್ವಿಕಾರ ಸ್ವರೂಪನೆಂತಲೂ ಬೋಧಿಸುವ ಉಪನಿಷದಾರ್ಥವನ್ನು ಪ್ರಕಟಮಾಡಲು ಗೀತೋಪದೇಶವು ಪ್ರಾರಂಭವಾಯಿತು. ಆದುದರಿಂದ ಯುದ್ಧಕ್ಕೆ ಗೀತೆಯು ಪ್ರಧಾನ ಕಾರಣವಲ್ಲವೆಂದು ಸ್ಪಷ್ಟವು. "ಧರ್ಮಾಧರ್ಮಗಳನ್ನು ತಿಳಿಯದ ಮೂಢನೂ, ನಿನ್ನ ಶರಣು ಹೊಂದಿದವನನ್ನೂ, ಶಿಷ್ಯನನ್ನಾಗಿ ಸ್ವೀಕರಿಸಿ ಉತ್ತಮ ಮಾರ್ಗವನ್ನು ತೋರಿಸೆಂದೂ, ಸಮಸ್ತೈಶ್ವರ್ಯಗಳಿಂದ ಕೂಡಿದ ಸಾರ್ವಭೌಮ ಕಡೆಗೆ ದೇವರಾಜ್ಯವಾದ ಸ್ವರ್ಗಾಧಿಪತ್ಯವಾದರೂ ಈ ನನ್ನ ದುಃಖವನ್ನು ತೊಲಗಿಸಲಾರದು. ಈ ಮಾಯಾ ಮಯವಾದ ಘೋರ ವ್ಯಾಕುಲತೆಯಿಂದ ಕೂಡಿದ ಈ ಸಂಸಾರದ ಸ್ವರೂಪವನ್ನು ನೀನೇ ಬಲ್ಲವನು. ಇದನ್ನು ನಿವರ್ತಿಸುವುದಕ್ಕೆ ನೀನೇ ಸಮರ್ಥನು". ಎಂಬ ಅರ್ಜುನನ ಈ ವಾಕ್ಯಗಳೇ ಗೀತೋಪದೇಶಕ್ಕೆ ಮೂಲ ಕಾರಣವೆಂದು ಗೀತೆಯಲ್ಲಿಯೇ ಸ್ಪಷ್ಟವಾಗಿ ತಿಳಿಸಿರಲು, ಗೀತೋಪದೇಶವು ಕರ್ಮಪ್ರೇಕ ಶಾಸ್ತ್ರವೆಂದೂ, ಅನೇಕ ಉಪಾಯಗಳಿಂದ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿಯನ್ನುಂಟುಮಾಡುವ ಜ್ಞಾನಶಾಸ್ತ್ರವಲ್ಲವೆಂದೂ ತಿಳಿಯುವುದು ಅನುಚಿತವು.

ಅಂದರೆ ಗೀತೆಯು ಜೀವರ ಆತ್ಮಕಲ್ಯಾಣಕ್ಕಾಗಿ ಅತ್ಯಂತ ಆವಶ್ಯಕವಾದ ರಹಸ್ಯತಮ ಜ್ಞಾನೋಪದೇಶಗಳಿಂದ ಕೂಡಿದೆ ಎಂದು ತಿಳಿಯತಕ್ಕದ್ದು, ಇದನ್ನು ನಿತ್ಯವೂ ಪಾರಾಯಣ ಮಾಡಿ, ಅದರ ಅರ್ಥವನ್ನು ಬಲ್ಲವರಿಂದ ತಿಳಿದು, ಹೃದ್ಗತ ಮಾಡಿಕೊಂಡು, ಅಜ್ಞಾನ ಜನಿತ ಮೋಹವನು ನಾಶಮಾಡಿಕೊಂಡು, ಪುನರಾವೃತ್ತಿ ರಹಿತವಾದ ಮೋಕ್ಷವನ್ನು ಹೊಂದುವುದು ಮಾನವನ ಕರ್ತವ್ಯವಾಗಿರುತ್ತದೆ.

ಕನುತಂಪಲ್ಲಿ ಆನಂದಾಶ್ರಮದ ಶ್ರೀ ಸಂತೂರಾಂ ಸ್ವಾಮಿಗಳು ಆ ಮೂಲಾಗ್ರವಾಗಿ ಕನ್ನಡ ಭಾಷೆಯಲ್ಲಿ ಈ ಗೀತಾರ್ಥ ಪ್ರಬೋಧಿನಿಯನ್ನು ಬರೆದು ನಮ್ಮಲ್ಲಿ ಮುದ್ರಣ ಮಾಡಿಸುವ ಸಂದರ್ಭದಲ್ಲಿಯೇ ಇವರ ಇಂಗಿತ ನನ್ನು ಅರಿತವರಾಗಿ ಅವರ ಅನುಮತಿಯಿಂದ ಹೆಚ್ಚು ಪ್ರತಿಗಳನ್ನು ನಮ್ಮ ಸ್ವಂತಕ್ಕಾಗಿ ಪ್ರಿಂಟ್ ಮಾಡಿಸಿಕೊಂಡಿರುತ್ತೇವೆ. ಈ ಸ್ವಾಮಿಗಳಿಂದ ನಮಗೆ ಬಹಳ ಉಪಕಾರವಾಗಿರುವುದು. ಇಂತಹ ಸದ್ಹೃದಯ ಆತ್ಮರೂಪಿಗ ಳಾದ ಶ್ರೀ ಸಂತೂರಾಂ ಸ್ವಾಮಿಗಳಿಗೆ ನಮ್ಮ ವಂದನೆಗಳು.

ಇದರ ಮುದ್ರಣಕ್ಕಾಗಿ ಶ್ರೀಮಾನ್ ಯಾದಾಳಂ ಸುಬ್ಬಯ್ಯಶೆಟ್ಟಿ ಅಂಡ್ ಸನ್ಸ್‌ರವರು 150 ರೂಪಾಯಿಗಳನ್ನು, ಸಹಾಯ ಮಾಡಿರುವರು. ಈ ಮಹಾಶಯರಿಗೆ ಸಕಲ ಮಂಗಲಗಳನ್ನೀಯಲೆಂದು ಶ್ರೀ ಸಿದ್ಧಾರೂಢ ಸದ್ಗುರುವನ್ನೂ ಶ್ರೀ ಪರಮಾತ್ಮ ದೇವನನ್ನೂ ಪ್ರಾರ್ಥಿಸುತ್ತೇವೆ.

ಪ್ರಾಜ್ಞರು ಈ ಪುಸ್ತಕದಲ್ಲಿ ಕಂಡುಬರಬಹುದಾದ ಲೋಪ ದೋಷ ಗಳನ್ನು ಎಣಿಸದೆ ಹಂಸಕ್ಷೀರನ್ಯಾಯದಂತೆ ಕೇವಲ ಗುಣಗ್ರಾಹಿಗಳಾಗ ಬೇಕೆಂದು ಪ್ರಾರ್ಥಿಸುತ್ತೇವೆ.

ಪ್ರಕಾಶಕರು.



ಶ್ಲೋಕೈಕೋ ಧೃತರಾಷ್ಟ್ರಸ್ಯ । ನವ ದುರ್ಯೋಧನಸ್ಯ ಚ ।
ದ್ವಾತ್ರಿಂಶತ್ಸಂಜಯ ಪ್ರೋಕ್ತಾ । ವೇದಾಷ್ಟಾವರ್ಜುನಸ್ಯ ಚ ॥
ತತ್ಸ್ವಾವಬೋಧೆ ವೇದಾದ್ರಿ । ಪಂಚಕೇಶವ ನಿರ್ಮಿತಾಃ ।
ಏವಂ ಗೀತಾ ಪ್ರಮಾಣಂ ತು । ಶ್ಲೋಕ ಸಪ್ತ ಶತಾನಿ ಚ ॥

| | | |
|---|---|---|
| ಧೃತರಾಷ್ಟ್ರನಿಂದ | 1 | ಶ್ಲೋಕ |
| ದುರ್ಯೋಧನನಿಂದ | 9 | ,, |
| ಸಂಜಯನಿಂದ | 32 | ,, |
| ಅರ್ಜುನನಿಂದ | 84 | ,, |
| ಶ್ರೀ ಕೃಷ್ಣಪರಮಾತ್ಮನಿಂದ | 574 | ,, |
| ಒಟ್ಟು ಗೀತೆಯಲ್ಲಿ | 700 | ಶ್ಲೋಕಗಳು. |

## ನಮ್ಮಲ್ಲಿ ದೊರೆಯುವ ಗ್ರಂಥಗಳು

| | | | |
|---|---|---|---|
| ಶ್ರೀ ಪಕ್ಷಪಾತರಹಿತ ಅನುಭವ ಪ್ರಕಾಶ (ಪ್ರಥಮ ಭಾಗ) | 1 | 8 | 0 |
| ,, ೨ ಮತ್ತು ೩ ನೇ ಭಾಗ ಒಂದು ಸಂಪುಟದಲ್ಲಿ (ಅಚ್ಚಿನಲ್ಲಿದೆ) | | | |
| ಶ್ರೀ ಸಿದ್ಧಾರೂಢ ಕಥಾಮೃತ | 4 | 0 | 0 |
| ಭಾರತನೀತಿ ಸಂಗ್ರಹ | 0 | 8 | 0 |
| ಶ್ರೀ ಭಗವದ್ಗೀತಾ (ಗೀತಾರ್ಥಪ್ರಬೋಧಿನಿ) | 1 | 0 | 0 |
| ಶ್ರೀಮದ್ಭೋಗಮುಕುಂದಮಾಲಾ | 0 | 2 | 6 |

ವಿಳಾಸ :— ಶಾಂತಾನಂದ,

ಸಿದ್ಧವಿಲಾಸ, ೧೬೫, ಗಾಂಧೀ ನಗರ, ಬೆಂಗಳೂರು–೨.

## ಗೀತಾ ಸಾರ

**ಸೂಚನೆ :**–ಭಗವದುತ್ತಮ ಗೀತೆ ಸಾರವ | ಸೊಗಸೆನಿಸಿಪ ನಾಣ್ಣುಡಿಗಳಿಂದೀ |
ಜಗದೊಳಗೆ ಪದಿನೆಂಟು ಪದ್ಯಗಳಿಂದ ಧ್ಯಾನಿಪುದು ||

ಬಯಸಲಾರೆನು ರಾಜ್ಯ ಸಂಪದ | ಬಯಸಲಾರೆನು ವಿಜಯವನು ನಾಂ |
ಬಯಸಲಾರೆನು ಸಕಲ ಸುಖಗಳನೆಲೆ ಜನಾರ್ದನನೆ ||
ಬಯಸಿ ಫಲವೇನಖಿಳ ಸಂಪದ | ಬಯಸಿ ಜೀವಿಪುದೇಕೆ ಪಂಕಜ |
ನಯನನೇ ಯೆಂದಳಲುತಿರ್ದನು ಪಾಂಡವಾತ್ಮಜನು ||೧||

ಎಲೆ ಧನಂಜಯನಾತ್ಮನೆಂಬನು | ಸಲೆ ಸ್ವರೂಪಾನಂತ ಕೇಳ್ನಿ |
ಶ್ಚಲನು ನಿರವಯ ನಿತ್ಯ ನಿರ್ಮಲ ನಿರ್ವಿಕಾರ ಕಣಾ ||
ತಿಳಿಯಲೀದೇಹಕ್ಕೆ ಬರುವುದು | ಪ್ರಳಯವಿದು ಸಾಂಖ್ಯಾರ್ಥ ಸಾರವು |
ಘಳಿಲನೇ ಯುದ್ಧವನು ಮಾಡೈ ಯಾತ್ಮನವಿನಾಶಿ ||೨||
ಎಲ್ಲಕರ್ಮಗಳನ್ನು ಬಯಸುವ | ವೆಲ್ಲ ಕರ್ಮಗಳನ್ನು ಮಾಡುವ |
ವೆಲ್ಲವಿಷಯಗಳಲ್ಲಿಧಾವಿಪವಿಂದ್ರಿಯಗಳೈಸೆ ||
ಎಲ್ಲ ಕರ್ಮಗಳರಿಯುವಾತ್ಮನ | ಬಲ್ಲವರು ಕರ್ತೃತ್ವಭಾವನೆ |
ಯಲ್ಲಿ ನಿಲ್ಲರು ಕರ್ಮಯೋಗದ ಸಾರವಿದು ಪಾರ್ಥ ||೩||

ಯಜ್ಞಸಂವಿತ್ತುಗಳು ಮತ್ತಾ | ಯಜ್ಞಕಂ ಬೇಕಾದ ವನ್ಹಿಯು |
ಯಜ್ಞಕರ್ತನು ಹವನ ಕ್ರಿಯಗಳು ಯಜ್ಞವೆಂಬುದದು ||
ಯಜ್ಞಕರ್ತನಿಗಪ್ಪ ಫಲವದು ಅರ್ಜುನನೆ ಕೇಳೆಲ್ಲ ಬ್ರಹ್ಮವು |
ಸೂಜ್ಞಭಾವದೊಳರಿಯಲಿದು ಜ್ಞಾನಾಖ್ಯ ಯೋಗವೆಲೈ ||೪||
ವಿದ್ಯ ವಿನಯಾದಖಿಳ ಸುಗುಣ | ಗಳಿದ್ದ ಬ್ರಾಹ್ಮಣದಲ್ಲಿ ಮಾಂಸದ |
ಮುದ್ದೆಯುಣ್ಣುವ ಶ್ವಪಚನಲ್ಲಿ ಮದೇಭದಲಿ ಮತ್ತೇ ||
ಬುದ್ಧಿಯಿಲ್ಲದ ನಾಯಿಯಲಿ ಸಮ | ಬುದ್ಧಿಯುಳ್ಳವ ಪಂಡಿತನು ಕೇಳ್ |
ಮಧ್ಯಪಾಂಡವ ಕರ್ಮಸನ್ಯಾಸಾಖ್ಯ ಯೋಗವಿದು ||೫||
ಆತುಮೇತರ ವಸ್ತುವಿಲ್ಲೆಂ | ದೀತೆರಾಂತರ ದೊಳಗೆ ನಿಶ್ಚೈ |
ಸ್ಯಾತುಮನೊಳುರೆ ಚಿತ್ತವನು ಧೃತಿಯಿಂದ ನೆಲೆಗೊಳಿಸಿ ||
ಓತುಧ್ಯಾನಿಸಲಿದಕೆ ಬಲ್ಲವ | ರಾತ್ಮಸಂಯಮಯೋಗವೆನ್ನುತ |
ಪ್ರೀತಿಯಿಂದುಸುರುವರು ಕೇಳೈ ಪಾಂಡವಾತ್ಮಜನೇ ||೬||

Funding: Tattva Heritage Foundation,Kolkata. Digitization: eGangotri.



ಅಷ್ಟವಿಧದಿಂತೋರ್ಪ ಪ್ರಕೃತಿಯು । ಹುಟ್ಟಿತೆನ್ನೊಳು ತೋರಿ ಕಡೆಗದು।
ನಷ್ಟವಪ್ಪುದು ನನ್ನೊಳಗೆ ನಾನಿದಕೆ ಬೇರೆನಿಸಿ ॥
ದ್ರಷ್ಟರೂಪದೊಳಿರುವೆನೆನಗಿನ । ರಿಷ್ಟವೇತಕ್ಕೆಂದು ಜ್ಞಾನದ ।
ನಿಷ್ಠೆಯಿಂದಿರಲಿದುವೆ ವಿಜ್ಞಾನಾಖ್ಯ ಯೋಗವೆಲ್ಯೆ ॥೭॥
ಪ್ರಣವ ಮಂತ್ರಾಕ್ಷರವ ಪಠಿಸುತ । ಪ್ರಣವವೇ ನನ್ನಾತ್ಮವೆನ್ನುತ ।
ಪ್ರಣವಕಂ ಮತ್ತೊಂದು ಬೇರಿಲ್ಲೆನ್ನುತೆಡೆಬಿಡದೆ ॥
ಮನನವಮಾಡುತ ತನುವನಳಿದವ । ಘನಮುಕ್ತಿಯ ಪೊಂದುತಿಪ್ಪನು ।
ರ್ಜುನನೆ ಕೇಳಿದು ತಾರಕಾಖ್ಯ ಸುಬ್ರಹ್ಮಯೋಗವೆಲ್ಯೆ ॥೮॥
ಅನ್ಯದೈವತೆಗಳನು ಸ್ಮರಿಸದೆ । ಅನ್ಯಪೂಜೆಗಳನ್ನು ಮಾಡದೆ ।
ನನ್ನನೇ ನನ್ನಾತ್ಮವೆನ್ನುತ್ತನಿಶ ಸ್ಮರಿಸಿದೊಡೆ ॥
ನನ್ನಿಯಿಂದವನನ್ನು ಪೊರೆಯುವೆ । ನಿನ್ನಿದಕೆ ಬೇರಿಲ್ಲ ತಿಳಿನೀ ।
ನುನ್ನತೋನ್ನತ ರಾಜವಿದ್ಯಾಯೋಗವಿದು ಪಾರ್ಥ ॥೯॥
ಪಾರ್ಥ ಕೇಳ್ ಕಂಗಳಿಗೆ ಕಾಣ್ಬುದ । ಗತ್ತು ನನ್ನೇಕಾಂಶದಲ್ಲಿ ತೋ ।
ರುತ್ತಲಿಹುದದು ನಾನದರೊಳಿಹೆ ನನ್ನೊಳಗದಿಲ್ಲಾ ॥
ಮತ್ತೆ ನನ್ನಿಂದೀಜಗತ್ತಿಗ । ಗಾಸ್ತಿಕತ್ವವು ಬಂದಿಹುದು ದೃಢ ।
ಚಿತ್ತದಿಂದರಿ ಇದುವೆ ಪರಮ ವಿಭೂತಿಯೋಗ ಕಣಾ ॥೧೦॥
ವಿಶ್ವಕಾನೇಕಾರಣನು ಮೇ । ಣ್ವಿಶ್ವವೇ ನನ್ನಯ ಶರೀರವು ।
ವಿಶ್ವವೇ ನನ್ನಾತ್ಮರೂಪವು ಪಾರ್ಥನೇ ಮತ್ತೆ ॥
ವಿಶ್ವಕೆನಗಂ ಭೇದವಿಲ್ಲವು । ವಿಶ್ವದರ್ಶನ ಯೋಗವಿದು ನೀಂ ।
ದರ್ಶನಾನುದವಲಿ ನಿಶ್ಲೆಂದೊರೆದನಾಕೃಷ್ಣ ॥೧೧॥
ಪಕ್ಷಪಾತಗಳಿಲ್ಲದವನಾ । ಪೇಕ್ಷಶೂನ್ಯನು ಸಕಲ ಕರ್ಮಗ ।
ಳಕ್ಷಿಯಿಂ ತಾಂನೋಡ ಮೇಣದನೆಸಗದನವರತ ॥
ಪಕ್ಷಿಗಮನನೆ ನೀನೆ ನನ್ನಂ । ರಕ್ಷಿಸೆನ್ನುತ ನಂಬಿದವನಂ ।
ರಕ್ಷಿಸುವೆನಿದು ಭಕ್ತಿಯೋಗದ ಸಾರವೆಲೆ ಪಾರ್ಥ ॥೧೨॥
ಮಲದೊಳಗೆ ತಾನಿದ್ದು ನಭತಾಂ । ಮಲವನಂಟದ ತೆರದೊಳೀತನು ।
ಮಲದೊಳಿರುತಂಟದಲೆ ಸತತದೊಳಿರುವನೀಯಾತ್ಮ ॥
ತಿಳಿಯೆ ಕರ್ಮಗಳಂಟದಿರುತಿಹ । ಸಲೆಸ್ವರೂಪಾನಿರುವೆನೆನ್ನುತ ।
ತಿಳಿಯಲಿದು ತಾಂ ಪ್ರಕೃತಿ ಪುರುಷ ವಿವೇಕ ಯೋಗವೆಲ್ಯೆ ॥೧೩॥

ಸತ್ವ ರಾಜಸ ತಾಮಸೆಂಬ ಗು | ಣತ್ರಯಗಳಿಂ ಮತ್ತಮವುಗಳ |
ವೃತ್ತಿಯೆನಿಸುವ ಶಾಂತಿ ಘೋರವು ಮೌಢ್ಯವಿವುಗಳನು ||
ಸತ್ಯದಿಂದರಿಯುತ್ತಲಿಹ ಸ | ಚ್ಚಿತ್ಸ್ವರೂಪಾನಿರುವೆನೆಂದು ಸು |
ಚಿತ್ತದರಿಯಲು ಗೌಣತ್ರಯ ವೈಭಾಗಯೋಗಕಣಾ ||೧೪||

ಪ್ರಾಣಿವರ್ಗದ ದೇಹದೊಳು ವೈ | ಶ್ವಾನರಾಖ್ಯ ಸುನಾಮದಿಂದಂ |
ಪ್ರಾಣಿಗಳ ಸಂರಕ್ಷಿಸುತ್ತಂ ಮತ್ತಮಾನುಮಹಾ ||
ಪ್ರಾಣರೂಪವೊಳಿರುವೆನಿದನಂ | ಜಾಣತನದರಿಯುತ್ತ ನನ್ನಂ |
ಕಾಣಲಿದುತಾಂ ಪೌರುಷೋತ್ತಮಪ್ರಾಪ್ತಿಯೋಗವೆಲೈ ||೧೫||

ಇದನೆಸಗಬೇಕಿದನು ಬಿಡಬೇ | ಕಿದುವಿಧಿಯು ಮತ್ತಿದು ನಿಷೇಧಂ |
ಬಿದನು ತಿಳಿಯುತ ವೇದಶಾಸ್ತ್ರಗಳಲ್ಲಿ ಪೇಳಿರುವ ||
ವಿಧಿಯನಾವೋದಿಸುತ ನಡೆಯು | ಲ್ಕಿದುವೆ ನಿರ್ಜರ ದಿತಿತನಯ ಸಂ |
ಪದವಿಭಾಗದ ಯೋಗ ಕೇಳೈ ಪಾಂಡವಾತ್ಮಜನೇ ||೧೬||

ಮೂರು ಕರಣಗಳನ್ನು ಒಳ್ಳೆಯ | ದಾರಿಯಲಿ ದಣಿಸುತ್ತ ಸತ್ಸವಿ |
ಚಾರವನು ದಿನವೆಸಗಲಿದಕಂ ತ್ರೈತಪಸ್ಸೆನುತ ||
ಸಾರುವವು ಶೃತ್ಯಾದಿಗಳು ಕೇಳ್ | ಪಾರಥನೆ ತ್ರೈತಪಗಳೆಸಗಲು |
ಧಾರುಣಿಯಲಿದು ಶ್ರದ್ಧೆತ್ರಯಸುವಿಭಾಗ ಯೋಗವೆಲೈ ||೧೭||

ಸರುವ ಧರ್ಮಗಳನ್ನು ಬಿಡುತಂ | ನಿರುತ ನನ್ನಂ ಪೊಂದು ನಿನ್ನಂ |
ಪರಿಪರಿಯ ಕಷ್ಟಗಳಿಂ ಪಾಲಿಸುತಲಂತ್ಯಕ್ಕೆ ||
ಮರಳಿ ಜನ್ಮಿಸದಂತ ಮೋಕ್ಷವ | ಕರುಣಿಸುವೆ ಫಲಗುಣನೆ ಕೇಳಿದು |
ಪರಮ ಪರತರ ಮೋಕ್ಷಸಂನ್ಯಾಸಾಖ್ಯ ಯೋಗವೆಲೈ ||೧೮||

ಅವನಿಸುರ ಗೋಪಾಲ ಸ್ತ್ರೀಯರ | ನವಘಡಿಸಿ ಸಂಹರಿಸಿದಘವನು |
ಭುವಿಯೊಳಗೆ ಮತ್ತುಳಿದ ನಾನಾಪಾಪಗಳು ಪೋಗಿ ||
ದಿವಿ ಭು ಪಾತಾಳಾದಿ ಸುಖಗಳು | ಸವೆಯದಾನಂದೆಂಬ ಮುಕುತಿಯು |
ಜವದೊಳಹುದಿದನುದಯ ಸಮಯದೊಳೋದಿ ಕೇಳ್ವರ್ಗೆ ||೧೯||

ಅಪರೋಕ್ಷಾನುಭವಿ ಬ್ರ|| ಶ್ರೀ|| ಸಕ್ರಪ್ಪ ಸ್ವಾಮಿಗಳ ವಿರಚಿತ.

# ಶ್ರೀಮದ್ಭಗವದ್ಗೀತೆಯ ವಿಷಯಾನುಕ್ರಮಣಿಕೆ.

ಓಂ ತತ್ಸತ್

ಶ್ರೀಕೃಷ್ಣ ಪರಬ್ರಹ್ಮಣೇ ನಮಃ



## ಮಂಗಳಾಚರಣೆ.

ಶ್ಲೋ॥ ಪೀತಂ ವಾಸೋ ದಧಾನಂ । ವಿಜಯರಥಗತಂ । ಬ್ರಹ್ಮ
ರುದ್ರಾದಿವಂದ್ಯಂ। ಭೂಮೇರ್ಭಾರಂ ಜಿಹೀರ್ಷುಂ। ನವಜಲ
ದರುಚಂ । ಶಂಖಚಕ್ರಾಬ್ಜಹಸ್ತಮ್ ॥ ಪಾರ್ಥವ್ಯಾಜೇನ
ಲೋಕಂ। ನಿಗಮ ಮತಸೃತಾ । ಯೋಜಯಂತಂಮಹೇಶಂ।
ಧ್ಯಾಯೇನ್ನಿತ್ಯಂ ಸುಸೇವ್ಯಂ । ಸುಜನ ಮತಿಗೃಹಂ। ಕೃಷ್ಣ
ಮಾನಂದಕಂದಂ ॥೧॥

ಪೀತಾಂಬರಧಾರಿಯಾಗಿಯೂ, ಪಾರ್ಥನ ಸಾರಥಿಯಾಗಿಯೂ, ಬ್ರಹ್ಮರುದ್ರಾದಿಗಳಿಂದ ವಂದಿತನಾಗಿಯೂ, ಭೂಭಾರ ಹರಣಮಾಡುವ ಇಚ್ಛೆಯುಳ್ಳವನಾಗಿಯೂ, ನೀಲಮೇಘದ ಕಾಂತಿಯುಳ್ಳವನಾಗಿಯೂ, ಶಂಖಚಕ್ರ ಕಮಲಗಳಿಂದ ಸುಶೋಭಿತವಾದ ಹಸ್ತವುಳ್ಳವನಾಗಿಯೂ, ಅರ್ಜುನನನ್ನು ನಿಮಿತ್ತಮಾಡಿಕೊಂಡು ಇಡೀ ಲೋಕವನ್ನು ವೇದಸಮ್ಮತಮಾರ್ಗದೊಳು ಸ್ಥಾಪಿಸುತ್ತಿರುವವನಾಗಿಯೂ, ಶಿವಾದಿಗಳಿಗೂ ನಿಯಾಮಕನಾದುದರಿಂದ ಸರ್ವರಿಂದಲೂ ಸುಸೇವ್ಯನಾಗಿಯೂ, ಜ್ಞಾನಿಗಳ ಬುದ್ಧಿಯಲ್ಲಿ ವಾಸಿಸುವವನಾಗಿಯೂ ಆದ ಆನಂದಕಂದನಾದ ಶ್ರೀ ಕೃಷ್ಣಪರಮಾತ್ಮನನ್ನು ನಾನು ಸದಾ ಧ್ಯಾನಿಸುವೆನು.

ನಾರಾಯಣಃ ಪರೋಽವ್ಯಕ್ತಾತ್ । ಅಂಡಮವ್ಯಕ್ತ ಸಂಭವಮ್ ।
ಅಂಡಸ್ಯಾಂತಸ್ತ್ವಿಮೇಲೋಕಾಃ । ಸಪ್ತದ್ವೀಪಾಚ ಮೇದಿನೀ ॥ ೨ ॥

ಸಮಸ್ತ ಭುವನಂಗಳೂ, ಸಪ್ತದ್ವೀಪಗಳಿಂದ ಕೂಡಿದ ಪೃಥ್ವಿ ಆದಿಗಳೆಲ್ಲಾ ಬ್ರಹ್ಮಾಂಡದೊಳಗೇ ಅಡಗಿರುತ್ತವೆ. ವಿರಾಟ್ ರೂಪವಾದ ಈ

ಬ್ರಹ್ಮಾಂಡವು ಅವ್ಯಕ್ತದಿಂದ (ಮೂಲಪ್ರಕೃತಿಯಿಂದ) ಉತ್ಪನ್ನವಾಗಿದೆ. ಅವ್ಯಕ್ತಕ್ಕೂ ಕಾರಣನಾಗಿಯೂ, ಪರ(ಶ್ರೇಷ್ಠ)ನಾಗಿಯೂ ಇರುವ ಶ್ರೀಮನ್ನಾರಾಯಣನನ್ನು ನಾನು ಭಜಿಸುತ್ತೇನೆ.

**ಯದ್ಭಕ್ತಿಂ ನ ವಿನಾಮುಕ್ತಿಃ। ಯಃ ಸೇವ್ಯಂ ಸರ್ವಯೋಗಿನಾಂ।**
**ತಂ ವಂದೇಪರಮಾನಂದ। ಘನಂ ಶ್ರೀನಂದನಂದನಂ ॥೩॥**

ಯಾರ ಭಕ್ತಿ ಇಲ್ಲದೆ ಮುಕ್ತಿಲಭಿಸುವುದಿಲ್ಲವೋ, ಸಮಸ್ತ ಯೋಗಿಗಳಿಂದಲೂ ಯಾರು ಸೇವಿಸಲ್ಪಡುವನೋ, ಅಂತಹ ಪರಮಾನಂದ ಘನನಾದ ನಂದನಂದನನಾದ ಶ್ರೀಕೃಷ್ಣಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ.

**ಸರ್ವೇಶ್ವರಂ ಹರಿಂ ಕೃಷ್ಣಂ। ಭಕ್ತಿಗಮ್ಯಂ ಪರಾತ್ಪರಂ। ವಂದೇ ಭಕ್ತಿಪ್ರದಂ ನಿತ್ಯಂ। ಮಾಯಾಧ್ವಾಂತ ನಿವಾರಕಂ ॥೪॥**

ಮಾಯೆ ಎಂಬ ಅಜ್ಞಾನಾಂಧಕಾರವನ್ನು ನಿವಾರಣಗೈಯುವ, ಭಕ್ತಿಗೆ ಮಾತ್ರ ಗೋಚರನಾಗುವ, ಪರಾತ್ಪರನೂ, ಭಕ್ತಿದಾತನೂ ಸರ್ವೇಶ್ವರನೂ ಆದ ಶ್ರೀಕೃಷ್ಣಪರಮಾತ್ಮನನ್ನು ನಾನು ನಿತ್ಯವೂ ವಂದನ ಮಾಡುತ್ತೇನೆ.

**ಸ್ವಧರ್ಮ ಜ್ಞಾನ ವೈರಾಗ್ಯ। ಸಾಧ್ಯ ಭಕ್ತ್ಯೇಕ ಗೋಚರಃ। ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ। ಸಮೀರಿತಃ ॥೫॥**

ಸ್ವಧರ್ಮ, ಜ್ಞಾನ ಮತ್ತು ವೈರಾಗ್ಯಾದಿ ಸಾಧನೆಗಳಿಂದ ಸಾಧಿಸಲ್ಪಡುವ ಪರಾಭಕ್ತಿಗೆ ಮಾತ್ರ ಗೋಚರನಾಗುವ ಪರಬ್ರಹ್ಮವಾದ ಶ್ರೀಮನ್ನಾರಾಯಣನ ಸ್ವರೂಪವನ್ನೇ ಗೀತಾಶಾಸ್ತ್ರವು ಪ್ರತಿಪಾದಿಸಿದೆ.

**ವೇದೋ ದಧಿ ಪ್ರಮಥಿತಂ। ವಾಸುದೇವ ಸಮುದ್ಧೃತಮ್। ಸಂತಃ ಪಿಬಂತಿ ಸತತಂ। ಗೀತಾಮೃತರಸಾಯನಮ್ ॥೬॥**

ವೇದವೆಂಬ ಸಮುದ್ರ ಮಥನದ್ವಾರಾ ಭಗವಂತನಾದ ವಾಸುದೇವನಿಂದ ಪ್ರಕಟಿತವಾದ ಗೀತಾಶಾಸ್ತ್ರವೆಂಬ ಅಮೃತಮಯ ರಸಾಯನವನ್ನು ಸತ್ಪುರುಷರು ಸದಾ ಪಾನಮಾಡುತ್ತಾರೆ.

**ಕಾಂಡತ್ರಯಾತ್ಮಕಂ ಶಾಸ್ತ್ರಂ। ಗೀತಾಖ್ಯಂ ಯೇನ ನಿರ್ಮಿತಮ್। ಆದಿಮಧ್ಯಾಂತ ಷಟ್ಕೇಷು। ತಸ್ಮೈ ಭಗವತೇ ನಮಃ ॥೭॥**

ಆರು ಆರು ಅಧ್ಯಾಯಗಳ ಒಂದೊಂದು ಷಟ್ಕದಲ್ಲಿಯೂ ಕ್ರಮವಾಗಿ ಕರ್ಮಕಾಂಡ, ಉಪಾಸನಾಕಾಂಡ ಮತ್ತು ಜ್ಞಾನಕಾಂಡವನ್ನು ಪ್ರತಿಪಾದಿಸಿರುವಂತಹ ಗೀತಾ ಶಾಸ್ತ್ರವನ್ನು ನಿರ್ಮಿಸಿದ ಭಗವಂತನಾದ ಶ್ರೀಕೃಷ್ಣಪರಮಾತ್ಮನಿಗೆ ನಮಸ್ಕಾರಗಳು.

ಇದಂ ಗೀತಾಶಾಸ್ತ್ರಂ ಪರಮಪುರುಷಾರ್ಥೈಕ ನಿಲಯಂ। ತ್ರಿಕಾಂಡಂ ವೇದಾರ್ಥಂ ಸಕಲಮಿಹ ಸಂಗೃಹ್ಯ ಕಥಿತಮ್॥ ಸ್ವಯಂ ಶ್ರೀಕೃಷ್ಣೇನ ಶ್ರುತಿವಿಶದತತ್ವೇನ ವಿಭುನಾ। ಜಪಾತ್ ಧ್ಯಾನಾತ್ ಜ್ಞಾನಾತ್ ಶ್ರುತ ಮಪಿ ಫಲತ್ಯೇವ ಸುಧಿಯಾಮ್ ॥೮॥

ಈ ಗೀತಾಶಾಸ್ತ್ರವು ಪರಮ ಪುರುಷಾರ್ಥ (ಮೋಕ್ಷ)ದ ಮನೆಯಾಗಿದೆ. ಈ ಗೀತೆಯ ಸೇವನೆಯಿಂದಲೇ ಪರಮ ಪುರುಷನಾದ ಪರಮೇಶ್ವರನ ಪ್ರಾಪ್ತಿಯಾಗುತ್ತದೆ. ವೇದಗಳ ಪರಮ ಪ್ರತಿಪಾದ್ಯ ವಸ್ತುವಾದ ಪರಬ್ರಹ್ಮದ ಸ್ವರೂಪವನ್ನು ಈ ಗೀತಾಶಾಸ್ತ್ರವು (ಕರ್ಮ, ಉಪಾಸನಾ ಮತ್ತು ಜ್ಞಾನವೆಂಬೀ ಕಾಂಡ ತ್ರಯಗಳ ಮೂಲಕ) ಸಂಗ್ರಹವಾಗಿ ನಿರೂಪಿಸಿದೆ. ಇದರ ಪಾಠದಿಂದ, ಅರ್ಥ ಚಿಂತನೆಯಿಂದ, ಜ್ಞಾನದಿಂದ, ಮತ್ತು ಶ್ರವಣದಿಂದ ವಿವೇಕಿ ಪುರುಷನಿಗೆ ಅಭೀಷ್ಟ ಫಲವು ಪ್ರಾಪ್ತಿಯಾಗುತ್ತದೆ.

ವಾರ್ಷ್ಣೇಯ ಬ್ರಹ್ಮಶೈಲಾತ್। ಋಜುಶತಪಥಗಾ। ಜ್ಞಾನವಿಜ್ಞಾನ ಕೂಲಾ। ಪಾರ್ಥಸ್ಯ ಪ್ರಾರ್ಥನಾತಶ್ಚಿರ ಮಮೃತವಹಾ। ಪ್ರತ್ಯಗಾನಂದ ಸಿಂಧುಂ॥ಸಂಪ್ರಾಪ್ತಾರ್ಥ ಪ್ರವಾಹಪತಿತ। ವಿತತಾಶ್ವತ್ಥಮುನ್ಮೂಲಯಂತೀ। ಗೀತಾ ಸ್ಫೀತಾ ನಿಮಂಕ್ತೂಃ। ಸಕಲಕಲಿಮಲಂ ಸ್ವರ್ಧುನೀಯಂ ಧುನೀತೇ ॥೯॥

ಅರ್ಜುನನ ಪ್ರಾರ್ಥನೆಯಿಂದ ಈ ಗೀತೆಯೆಂಬ ಗಂಗಾನದಿಯು ಶ್ರೀಕೃಷ್ಣನೆಂಬ ಬ್ರಹ್ಮಗಿರಿಯಲ್ಲಿ ಉದ್ಭವಿಸಿತು. ಜ್ಞಾನ-ವಿಜ್ಞಾನಗಳೆಂಬ ದಡಗಳ ಮಧ್ಯೆ ನೂರಾರು ಸರಳಮಾರ್ಗದಲ್ಲಿ ಪ್ರವಹಿಸಿ, ಚಿರಕಾಲ ಎಲ್ಲರಿಗೂ ಅಮೃತ ರಸಪಾನವನ್ನೇ ಮಾಡಿಸುತ್ತಾ, ತನ್ನ ಮಾರ್ಗದಲ್ಲಿದ್ದ ಜಗತ್ತೆಂಬ ವಿಶಾಲವಾದ ಅಶ್ವತ್ಥವೃಕ್ಷದ ಬುಡವನ್ನೇ ಕಿತ್ತೊಗೆದು ಆತ್ಮಾನಂದವೆಂಬ ಸಮುದ್ರದಲ್ಲಿ ಹೋಗಿ ಸೇರುತ್ತದೆ. ಇದು ತನ್ನಲ್ಲಿ ಮುಳುಗಿ ಸ್ನಾನ ಮಾಡುವವರ ಕಲಿಮಲವನ್ನು ಹೋಗಲಾಡಿಸಿ ಪವಿತ್ರಮಾಡುತ್ತದೆ.

ಭಾವಾರ್ಥ:-ಗೀತೆಯ ಮಹತ್ವವು ಗಂಗಾನದಿಗಿಂತಲೂ ಅತಿಶಯವಾದುದೆಂದು ಇಲ್ಲಿ ಅಲಂಕಾರ ರೂಪವಾಗಿ ವರ್ಣಿಸಿದೆ. ಹೇಗೆಂದರೆ:-ಗಂಗಾನದಿಯು ಕೇವಲ ತ್ರಿಪಥಗಾಮಿನೀ, ಆದರೆ ಗೀತಾ ಗಂಗೆಯು "ಶತಪಥಗಾ". ಗಂಗೆಯಮಾರ್ಗ ಕುಟಿಲ (ವಕ್ರ). ಆದರೆ ಇದರ ಮಾರ್ಗ ಋಜು (ನೇರ). ನದಿಯ ದಡವು ಜಡವಾದ ಮಣ್ಣಿನದು; ಆದರೆ ಗೀತೆ ಎಂಬ ನದಿಯು

ಡಡವು ಜ್ಞಾನ-ವಿಜ್ಞಾನಗಳು. ಗಂಗೆಯ ಸಂಗಮ ಉಪ್ಪುನೀರಿನ ಜಲರಾಶಿ ಅಥವಾ ಜಡರಾಶಿಯಲ್ಲಿ (ಸಮುದ್ರದಲ್ಲಿ). ಆದರೆ ಗೀತೆಯ ಸಂಗಮ ಆತ್ಮಾನಂದ ಸಾಗರದಲ್ಲಿ. ನೀರುಉಕ್ಕಿ ಬಂದಾಗ ಮರಳು, ಧೂಳಿನಿಂದ ಕೂಡಿದ ನದಿಯನೀರು ಕದಾಚಿತ್ ಮಲಿನವಾಗಬಹುದು. ಆದರೆ ಗೀತೆ ಎಂಬ ನದಿಯನೀರು ಸದಾ ಸ್ಫೀತ-ಉಜ್ವಲವಾಗಿ (ಪರಿಶುದ್ಧವಾಗಿ) ಇರುತ್ತದೆ. ಗಂಗೆಯು ಭಗೀರಥನ ದೀರ್ಘಕಾಲದ ತಪಸ್ಸಿನಿಂದ ಪ್ರಾಪ್ತವಾದಳು. ಆದರೆ ಗೀತಾಗಂಗೋದಕವು ಯಾವ ಭಗೀರಥ ಪ್ರಯತ್ನವೂ ಇಲ್ಲದೆ ಕೇವಲ ಪ್ರಾರ್ಥನೆಯ ಮಾತ್ರದಿಂದಲೇ ಅರ್ಜುನನಿಗೆ ತಕ್ಷಣ ಲಭಿಸಿತು. ಗಂಗಾ ಜಲವು ದೇಹದ ಮೇಲಿನ ಕೊಳೆಯನ್ನು ಹೋಗಲಾಡಿಸುವುದೇ ಹೊರತು ಒಳಗಿನ ಅಜ್ಞಾನವೆಂಬ ಮಲಿನವನ್ನು ಹೋಗಲಾಡಿಸುವುದಿಲ್ಲ. ಆದರೆ ಗೀತೆಯುಹೃದಯದೊಳಗಿನ ಅಜ್ಞಾನ(ಅವಿದ್ಯೆ)ವನ್ನೂ ಸಹ ನಿವರ್ತಿಸಿ ನಿತ್ಯಾನಂದ ಸೌಖ್ಯವನ್ನು ಕೊಡುವಂಥಾದ್ದಾಗಿರುತ್ತದೆ.

**ಮಂಗಳಂ**



# ಅಥ ಗೀತಾಮಾಹಾತ್ಮ್ಯಮ್



## ಧರೋವಾಚ

**ಭಗವನ್ ಪರಮೇಶಾನ। ಭಕ್ತಿರವ್ಯಭಿಚಾರಿಣೀ॥ ಪ್ರಾರಬ್ಧಂ ಭುಜ್ಯಮಾನಸ್ಯ। ಕಥಂ ಭವತಿ ಹೇ ಪ್ರಭೋ ॥೧॥**

ಭೂಲೋಕದಲ್ಲಿ ಪ್ರಾರಬ್ಧಕರ್ಮವಶರಾಗಿ ಅನೇಕ ದುಃಖಗಳನ್ನು ಅನುಭವಿಸುತ್ತಿರುವ ಜನರನ್ನು ಭೂದೇವಿಯು ನೋಡಿ ಅತ್ಯಂತ ದಯೆಯಿಂದ ಕೂಡಿದವಳಾಗಿ, ಅವರ ದುಃಖನಿವಾರಿಸುವ ಸದುದ್ದೇಶದಿಂದ ವೈಕುಂಠಕ್ಕೆ ಹೋಗಿ, ಭಗವಂತನಾದ ಶ್ರೀಮಹಾವಿಷ್ಣುವನ್ನು ಕುರಿತು, ಎಲೈ ಷಡ್ಗುಣೈಶ್ವರ್ಯಸಂಪನ್ನನೇ! ಸರ್ವನಿಯಾಮಕನೇ! ಪ್ರಭುವೇ! ಪ್ರಾರಬ್ಧಕರ್ಮವನ್ನು ಅನುಭವಿಸುತ್ತಿರುವ ಪುರುಷನಿಗೆ ಭಗವಂತನಾದ ನಿನ್ನಲ್ಲಿ ಅನನ್ಯ ಭಕ್ತಿಯು ಹೇಗೆ ಉಂಟಾಗುವುದೋ ಅದನ್ನು ಹೇಳಬೇಕೆಂದು ಕೇಳಿದಳು.

## ಶ್ರೀ ವಿಷ್ಣುರುವಾಚ

**ಪ್ರಾರಬ್ಧಂ ಭುಜ್ಯಮಾನೋಹಿ। ಗೀತಾಭ್ಯಾಸ ರತಸ್ಸದಾ॥ ಸಮುಕ್ತಸ್ಸಸುಖೀ ಲೋಕೇ। ಕರ್ಮಣಾ ನೋಪಲಿಪ್ಯತೇ ॥೨॥**

ಶ್ರೀವಿಷ್ಣು ಭಗವಂತ ನಿಂತೆಂದನು:—ಎಲೈ ಧರಣಿಯೇ! ಪ್ರಾರಬ್ಧಕರ್ಮವನ್ನು ಅನುಭವಿಸುತ್ತಿದ್ದರೂ, ಯಾರು ನಿತ್ಯವೂ ಗೀತಾಭ್ಯಾಸದಲ್ಲಿ ನಿರತನಾಗಿರುವನೋ ಅವನು ಕರ್ಮದೋಷದಿಂದ ಲಿಪ್ತನಾಗುವುದಿಲ್ಲ. ಆದ್ದರಿಂದ ಲೋಕದಲ್ಲಿ ಅವನೇ ಸುಖಿ ಮತ್ತು ಅವನೇ ಮುಕ್ತನು.

**ಮಹಾಪಾಪಾದಿಪಾಪಾನಿ। ಗೀತಾಧ್ಯಾನಂ ಕರೋತಿಚೇತ್॥ ಕ್ವಚಿತ್ ಸ್ಪರ್ಶಂ ನ ಕುರ್ವಂತಿ। ನಲಿನೀದಲ ಮಂಬುವತ್ ॥೩॥**

ಯಾವ ಪುರುಷನು ಗೀತಾ ಧ್ಯಾನವನ್ನು ಮಾಡುವನೋ ಅವನಿಗೆ ದೈವವಶಾತ್ ಪ್ರಮಾದದಿಂದ ಆದ ಮಹಾಪಾಪಗಳೂ ತಗಲುವುದಿಲ್ಲ. ಎಂತೆಂದರೆ:—ಕಮಲ ಪತ್ರಕ್ಕೆ ನೀರು ಅಂಟದಿರುವಂತೆ ಅಂಟುವುದಿಲ್ಲ.

**ಗೀತಾಯಾಃ ಪುಸ್ತಕಂ ಯತ್ರ। ಯತ್ರ ಪಾಠಃ ಪ್ರವರ್ತತೇ॥ ತತ್ರ**
**ಸರ್ವಾಣಿ ತೀರ್ಥಾನಿ। ಪ್ರಯಾಗಾದೀನಿ ತತ್ರ ವೈ ॥೪॥**

ಎಲ್ಲಿ ಗೀತಾ ಪುಸ್ತಕವಿರುವುದೋ ಮತ್ತು ಎಲ್ಲಿ ಅದರ ಪಾಠಪ್ರವಚನಾದಿಗಳು ನಡೆಯುತ್ತಿರುವುದೋ ಅಲ್ಲಿ ಪ್ರಯಾಗಾದಿ ಸಮಸ್ತ ಪುಣ್ಯತೀರ್ಥಗಳೂ ಇರುವುವು.

**ಸರ್ವೇದೇವಾಶ್ಚ ಋಷಯೋ। ಯೋಗಿನಃ ಪನ್ನಗಾಶ್ಚಯೇ॥ ಗೋಪಾ**
**ಲಾ ಗೋಪಿಕಾ ವಾಪಿ। ನಾರದೋದ್ಧವ ಪಾರ್ಷದೈಃ ॥೫॥**
**ನಿವಸಂತಿ ಸದಾ ತತ್ರ। ಯತ್ರ ಗೀತಾ ಪ್ರವರ್ತತೆ ॥೬॥**

ಯಾವ ಸ್ಥಳದಲ್ಲಿ ಗೀತೆಯ ಪುಸ್ತಕವಿರುವುದೋ ಅಲ್ಲಿ ಸಮಸ್ತ ದೇವತೆಗಳೂ, ಋಷಿಗಳೂ, ಯೋಗಿಗಳೂ, ಅನಂತ, ವಾಸುಕಿ ಮುಂತಾದ ನಾಗಪ್ರಮುಖರೂ, ಗೋಪಾಲರೂ, ಗೋಪಿಕಾ ಸ್ತ್ರೀಯರೂ ಮುಂತಾದ ಮಹಾತ್ಮರೆಲ್ಲರೂ ನಾರದಉದ್ಧವಾದಿ ಭಗವತ್ಪಾರ್ಶ್ವವರ್ತಿಗಳೊಡನೆ ಸರ್ವದಾ ವಾಸಿಸುತ್ತಾರೆ.

**ಯತ್ರ ಗೀತಾವಿಚಾರಶ್ಚ। ಪಠನಂ ಪಾಠನಂ ಶ್ರುತಮ್॥ ತತ್ರಾಹಂ**
**ನಿಶ್ಚಿತಂ ಪೃಥ್ವಿ। ನಿವಸಾಮಿ ಸದೈವ ಹಿ ॥೭॥**

ಹೇ ಭೂದೇವಿಯೇ! ಎಲ್ಲಿ ಗೀತಾರ್ಥ ವಿಚಾರವೂ, ಪಠನ(ಓದುವುದು) ಪಾಠನ (ಓದಿಸುವುದು) ಮತ್ತು ಶ್ರವಣವೂ ನಡೆಯುವುದೋ, ಅಲ್ಲಿ ನಿಶ್ಚಯವಾಗಿಯೂ ಸದಾ ನಾನು ವಾಸಿಸುತ್ತೇನೆ.

**ಗೀತಾಶ್ರಯೇಹಂ ತಿಷ್ಠಾಮಿ। ಗೀತಾ ಮೇ ಚೋತ್ತಮಂ ಗೃಹಮ್।**
**ಗೀತಾಜ್ಞಾನಮುಪಾಶ್ರಿತ್ಯ। ತ್ರೀನ್ ಲೋಕಾನ್ ಪಾಲಯಾಮ್ಯಹಮ್॥**

ನಾನು ಗೀತೆಯನ್ನು ಆಶ್ರಯಿಸಿಕೊಂಡಿರುವೆನು. ಗೀತೆಯೇ ನನಗೆ ಉತ್ತಮವಾದ ಮನೆಯು ಮತ್ತು ಗೀತೆಯಲ್ಲಿ ಅಡಕವಾಗಿರುವ ಜ್ಞಾನವನ್ನು ಆಶ್ರಯಿಸಿಕೊಂಡು ನಾನು ಮೂರು ಲೋಕಗಳನ್ನೂ ಪರಿಪಾಲಿಸುತ್ತಿರುವೆನು.

**ಗೀತಾ ಮೇ ಪರಮಾ ವಿದ್ಯಾ। ಬ್ರಹ್ಮರೂಪಾ ನ ಸಂಶಯಃ। ಅರ್ಧ**
**ಮಾತ್ರಾಕ್ಷರಾ ನಿತ್ಯಾ। ಸ್ವಾನಿರ್ವಾಚ್ಯ ಪದಾತ್ಮಿಕಾ ॥೯॥**

ಗೀತೆಯು ಬ್ರಹ್ಮರೂಪವಾಗಿಯೂ, ಪ್ರಣವಸ್ವರೂಪವಾಗಿಯೂ, ಅನಿರ್ವಾಚ್ಯವಾಗಿಯೂ, ನಿತ್ಯವಾಗಿಯೂ ಇರುವುದರಿಂದ ಗೀತೆಯೇ ನನ್ನ ಪರಮ ವಿದ್ಯೆಯು.

**ಚಿದಾನಂದೇನ ಕೃಷ್ಣೇನ। ಪ್ರೋಕ್ತಾ ಸ್ವಮುಖತೋಽರ್ಜುನಮ್।**
**ವೇದತ್ರಯೀ ಪರಾನಂದಾ। ತತ್ತ್ವಾರ್ಥ ಜ್ಞಾನಸಂಯುತಾ ॥೧೦॥**

ಋಗ್ಯಜುಸ್ಸಾಮ ವೇದಗಳ ಸಾರವಾಗಿಯೂ, ಪರಮಾನಂದ ರೂಪವಾಗಿಯೂ, ತತ್ವ ಜ್ಞಾನ ಗರ್ಭಿತವಾಗಿಯೂ ಇರುವ ಈ ಗೀತೆಯನ್ನು ಚಿದಾನಂದ ಸ್ವರೂಪನಾದ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಉಪದೇಶಿಸಿರುವನು.

**ಯೋಽಷ್ಟಾದಶಜಪೋ ನಿತ್ಯಂ। ನರೋ ನಿಶ್ಚಲಮಾನಸಃ॥ ಜ್ಞಾನಸಿದ್ಧಿಂ ಸ ಲಭತೇ। ತತೋ ಯಾತಿ ಪರಂ ಪದಮ್ ॥೧೧॥**

ಯಾವ ಮನುಷ್ಯನು ಹದಿನೆಂಟು ಅಧ್ಯಾಯಗಳುಳ್ಳ ಈ ಗೀತೆಯನ್ನು ನಿತ್ಯವೂ ಏಕಾಗ್ರ ಚಿತ್ತದಿಂದ ಜಪಿಸುವನೋ ಅಂದರೆ ಮನನ ಮಾಡುವನೋ ಅವನು ಜ್ಞಾನ ಸಿದ್ಧಿಯನ್ನು ಹೊಂದಿ ಅಲ್ಲಿಂದ ಪರಮಪದವಿಯನ್ನು (ಮೋಕ್ಷವನ್ನು) ಹೊಂದುವನು.

**ಪಾಠೇಽಸಮರ್ಥಸ್ಸಂಪೂರ್ಣೇ, ತತೋಽರ್ಧಂ ಪಾಠಮಾಚರೇತ್।**
**ತದಾಗೋದಾನಜಂ ಪುಣ್ಯಂ, ಲಭತೇ ನಾತ್ರ ಸಂಶಯಃ ॥೧೨॥**

ಒಂದು ವೇಳೆ ಹದಿನೆಂಟು ಅಧ್ಯಾಯಗಳನ್ನೂ ಸಂಪೂರ್ಣವಾಗಿ ಪಠಿಸುವುದಕ್ಕೆ ಆಗದಿದ್ದರೆ, ಅರ್ಧವಾದರೂ ಅಂದರೆ ಒಂಬತ್ತು ಅಧ್ಯಾಯಗಳನ್ನಾದರೂ ಪಠಣಮಾಡಬೇಕು. ಇದರಿಂದ (ನಿತ್ಯ) ಗೋದಾನ ಮಾಡಿದಷ್ಟು ಪುಣ್ಯಫಲವು ಲಭಿಸುವುದು. ಇದರಲ್ಲಿ ಸಂಶಯವಿಲ್ಲ.

**ತ್ರಿಭಾಗಂ ಪಠಮಾನಸ್ತು, ಗಂಗಾಸ್ನಾನಫಲಂ ಲಭೇತ್। ಷಡಂಶಂ ಜಪಮಾನಸ್ತು, ಸೋಮಯಾಗಫಲಂ ಲಭೇತ್ ॥೧೩॥**

ಗೀತೆಯ ಮೂರುಭಾಗಗಳಲ್ಲಿ ಒಂದುಭಾಗ ಅಂದರೆ ಆರು ಅಧ್ಯಾಯಗಳನ್ನು ಪಠಣ ಮಾಡುವವನಿಗೆ ಗಂಗಾಸ್ನಾನದ ಫಲವು ಉಂಟಾಗುವುದು. ಆರನೇ ಒಂದು ಭಾಗವನ್ನು ಅಂದರೆ ಮೂರು ಅಧ್ಯಾಯಗಳನ್ನು ಪಾರಾಯಣ ಮಾಡುವವನಿಗೆ ಸೋಮಯಾಗದ ಫಲವು ಪ್ರಾಪ್ತವಾಗುವುದು.

**ಏಕಾಧ್ಯಾಯಂ ತು ಯೋ ನಿತ್ಯಂ, ಪಠತೇ ಭಕ್ತಿಸಂಯುತಃ। ರುದ್ರಲೋಕಮವಾಪ್ನೋತಿ, ಗಣೋಭೂತ್ವಾ ವಸೇಚ್ಚಿರಮ್ ॥೧೪॥**

ಭಕ್ತಿಯಿಂದ ನಿತ್ಯವೂ ಒಂದು ಅಧ್ಯಾಯವನ್ನಾದರೂ ಯಾರು ಪಠಿಸು

ವನೋ, ಅವನು ರುದ್ರಲೋಕವನ್ನು ಹೊಂದಿ, ಅಲ್ಲಿ ರುದ್ರಗಣಗಳಲ್ಲಿ ಒಬ್ಬನಾಗಿ, ದೀರ್ಘಕಾಲವಿರುವನು.

**ಅಧ್ಯಾಯಶ್ಲೋಕಪಾದಂ ವಾ, ನಿತ್ಯಂ ಯಃ ಪಠತೇ ನರಃ। ಸ ಯಾತಿ ನರತಾಂ ಯಾವ, ನ್ಮನ್ವಂತರಂ ವಸುಂಧರೆ ॥೧೫॥**

ಎಲೈ ಭೂದೇವಿಯೇ! ಯಾವನು ಒಂದು ಅಧ್ಯಾಯದ ನಾಲ್ಕನೆ ಒಂದು ಭಾಗವನ್ನಾದರೂ ನಿತ್ಯವೂ ಪಠಿಸುವನೋ, ಅವನು ಒಂದು ಮನ್ವಂತರದವರೆವಿಗೂ ಮನುಷ್ಯ ಜನ್ಮವನ್ನೇ ಪಡೆಯುತ್ತಾನೆ.

**ಗೀತಾಯಾಃ ಶ್ಲೋಕದಶಕಂ, ಸಪ್ತ ಪಂಚ ಚತುಷ್ಟಯಮ್।ದ್ವೌತ್ರೀ ನೇಕಂ ತದರ್ಧಂ ವಾ, ಶ್ಲೋಕಾನಾಂ ಯಃ ಪಠೇನ್ನರಃ ॥೧೬॥**

**ಚಂದ್ರಲೋಕಮವಾಪ್ನೋತಿ, ವರ್ಷಾಣಾಮಯುತಂ ಧ್ರುವಮ್। ಗೀತಾಪಾಠಸಮಾಯುಕ್ತೋ, ಮೃತೋ ಮಾನುಷತಾಂ ವ್ರಜೇತ್**

ಇನ್ನು ಯಾವ ಮನುಷ್ಯನು ಕೊನೆಪಕ್ಷ ಹತ್ತು ಶ್ಲೋಕಗಳನ್ನಾಗಲೀ ಅಥವಾ ಏಳು, ಐದು, ನಾಲ್ಕು, ಮೂರು, ಎರಡು ಅಥವಾ ಒಂದನ್ನಾಗಲೀ, ಅದೂ ಆಗದಿದ್ದರೆ ಕೊನೆಗೆ ಅರ್ಧ ಶ್ಲೋಕವನ್ನಾದರೂ ಓದುವನೋ, ಅವನು ಚಂದ್ರಲೋಕವನ್ನು ಸೇರಿ, ಅಲ್ಲಿ ಹತ್ತುಸಾವಿರ ವರ್ಷಗಳು ಸ್ಥಿರವಾಗಿ ಇರುವನು. ಗೀತಾ ಪಾರಾಯಣ ಮಾಡುತ್ತಾ ಮೃತನಾದರೆ, ಮುಂದೆಯೂ ಮನುಷ್ಯ ಜನ್ಮವನ್ನೇ ಹೊಂದುತ್ತಾನೆ.

**ಗೀತಾಭ್ಯಾಸಂ ಪುನಃ ಕೃತ್ವಾ, ಲಭತೇ ಮುಕ್ತಿ ಮುತ್ತಮಾಮ್। ಗೀತೇತ್ಯುಚ್ಚಾರಸಂಯುಕ್ತೋ, ಮ್ರಿಯಮಾಣೋ ಗತಿಂ ಲಭೇತ್॥**

ಪುನಃ ಅವನು ಈ ಮನುಷ್ಯ ಜನ್ಮದಲ್ಲಿಯೂ ಗೀತಾಭ್ಯಾಸವನ್ನು ಮಾಡಿ ಉತ್ತಮವಾದ ಮುಕ್ತಿಯನ್ನು ಪಡೆದುಕೊಳ್ಳುತ್ತಾನೆ. ಯಾವನು ಮರಣಕಾಲದಲ್ಲಿ "ಗೀತಾ ಗೀತಾ" ಎಂದು ಉಚ್ಚರಿಸುತ್ತಾ ಪ್ರಾಣವನ್ನು ಬಿಡುವನೋ, ಅವನು ಸದ್ಗತಿಯನ್ನು ಹೊಂದುವನು.

**ಗೀತಾರ್ಥಶ್ರವಣಾಸಕ್ತೋ, ಮಹಾಪಾಪ ಯುತೋಽಪಿ ವಾ। ವೈಕುಂಠಂ ಸಮವಾಪ್ನೋತಿ, ವಿಷ್ಣುನಾ ಸಹ ಮೋದತೇ ॥೧೯॥**

ಮಹಾಪಾಪಗಳಿಂದ ಕೂಡಿದವನಾದರೂ, ಗೀತಾರ್ಥವನ್ನು ಕೇಳುವುದರಲ್ಲಿ ತುಂಬ ಆಸಕ್ತಿಯುಳ್ಳವನು ವೈಕುಂಠಲೋಕವಂ ಸೇರಿ ಅಲ್ಲಿ ವಿಷ್ಣುವಿನ ಸಂಗಡ ಕಲೆತು ಆನಂದದಿಂದ ಇರುವನು.

**ಗೀತಾರ್ಥಂ ಧ್ಯಾಯತೇ ನಿತ್ಯಂ, ಕೃತ್ವಾ ಕರ್ಮಾಣಿ ಭೂರಿಶಃ।**
**ಜೀವನ್ಮುಕ್ತಸ್ಸ ವಿಜ್ಞೇಯೋ, ದೇಹಾಂತೇ ಪರಮಂ ಪದಮ್ ॥೨೦॥**

ಯಾವನು ವಿವಿಧ ಕರ್ಮಗಳಲ್ಲಿ ತೊಡಗಿದ್ದರೂ, ನಿತ್ಯದಲ್ಲೂ ಗೀತಾರ್ಥವನ್ನು ಮನಸ್ಸಿನಲ್ಲಿ ಅನುಸಂಧಾನ ಮಾಡುತ್ತಿರುವನೋ ಅವನಿಗೆ ಕರ್ಮಬಂಧನವಿಲ್ಲ. ಆದ್ದರಿಂದ ಅವನು ಜೀವಿಸಿರುವಾಗಲೇ ಮುಕ್ತನು. ಇದೇ ಜೀವನ್ಮುಕ್ತಿ ದೆಶೆಯು. ಇನ್ನು ದೇಹಪಾತವಾದ ಮೇಲೆ ವಿದೇಹ ಕೈವಲ್ಯವನ್ನು ಹೊಂದುವನು.

**ಗೀತಾಮಾಶ್ರಿತ್ಯ ಬಹವೋ, ಭೂಭುಜೋಜನಕಾದಯಃ। ನಿರ್ಧೂತ**
**ಕಲ್ಮಷಾ ಲೋಕೇ, ಗೀತಾ ಯಾತಾಃ ಪರಂಪದಮ್ ॥೨೧॥**

ಜನಕಾದಿ ಬಹುಜನ ರಾಜರು 'ಗೀತೆಯನ್ನು ಆಶ್ರಯಿಸಿದವರಾಗಿ, ಪಾಪರಹಿತರಾಗಿ, ಈ ಲೋಕದಲ್ಲಿ ವಿಶೇಷಕೀರ್ತಿಯನ್ನುಗಳಿಸಿ, ಕೊನೆಯಲ್ಲಿ ಪರಮ ಪದವಿಯನ್ನು ಹೊಂದಿದರು.

**ಗೀತಾಯಾಃ ಪಠನಂ ಕೃತ್ವಾ, ಮಾಹಾತ್ಮ್ಯಂ ನೈವ ಯಃ ಪಠೇತ್।**
**ವೃಥಾ ಪಾಠೋ ಭವೇತ್ತಸ್ಯ, ಶ್ರಮ ಏವ ಹ್ಯುದಾಹೃತಃ ॥೨೨॥**

ಯಾರು ಗೀತೆಯನ್ನು ಪಠನಮಾಡಿ ಅದರ ಮಾಹಾತ್ಮ್ಯವನ್ನು ಓದದಿರುವರೋ, ಅವರ ಗೀತಾಪಠನವು ನಿರ್ದಿಷ್ಟ ಫಲವನ್ನು ಕೊಡುವುದಿಲ್ಲವಾದ್ದರಿಂದ ಶ್ರಮಮಾತ್ರದ್ದಾಗುತ್ತದೆ ಎಂದು ವಿಜ್ಞರಿಂದ ಹೇಳಲ್ಪಟ್ಟಿರುವುದು.

**ಏತನ್ಮಾಹಾತ್ಮ್ಯ ಸಂಯುಕ್ತಂ, ಗೀತಾಭ್ಯಾಸಂ ಕರೋತಿ ಯಃ। ಸ**
**ತತ್ಫಲಮವಾಪ್ನೋತಿ, ದುರ್ಲಭಾಂ ಗತಿಮಾಪ್ನುಯಾತ್ ॥೨೩॥**

ಮಾಹಾತ್ಮ್ಯದಿಂದ ಕೂಡಿದ ಗೀತಾಭ್ಯಾಸವನ್ನು ಮಾಡುವವನಿಗೆ ಪೂರ್ವೋಕ್ತ ಫಲಗಳು ಲಭಿಸುವುದಲ್ಲದೆ ದುರ್ಲಭವಾದ ಮೋಕ್ಷರೂಪ ಸದ್ಗತಿಯೂ ಉಂಟಾಗುವುದು.

**ಸೂತ ಉವಾಚ**

**ಮಾಹಾತ್ಮ್ಯಮೇತದ್ಗೀತಾಯಾ, ಮಯಾಪ್ರೋಕ್ತಂ ಸನಾತನಮ್।**
**ಗೀತಾಂತೇ ಚ ಪಠೇದ್ಯಸ್ತು, ಯದುಕ್ತಂ ತತ್ಫಲಂ ಲಭೇತ್ ॥೨೪॥**

**ಇತಿ ಶ್ರೀ ವಾರಾಹಪುರಾಣೇ ಶ್ರೀ ಮದ್ಭಗವದ್ಗೀತಾ**
**ಮಾಹಾತ್ಮ್ಯಂ ಸಂಪೂರ್ಣಮ್**

ಶೌನಕಾದಿಗಳನ್ನು ಕುರಿತು ಸೂತ ಪೌರಾಣಿಕನು ಇಂತೆಂದನು—ನಾನು ಸನಾತನವಾದ ಈಗೀತೆಯ ಮಾಹಾತ್ಮ್ಯವನ್ನು ನಿಮಗೆ ಹೇಳಿರುವೆನು.

ಗೀತೆಯ ಪಾಠದ ಕೊನೆಯಲ್ಲಿ ಇದನ್ನು ಪಠಿಸುವವನಿಗೆ, ಮಾಹಾತ್ಮ್ಯದಲ್ಲಿ ಹೇಳಿರತಕ್ಕ ಸರ್ವಫಲಗಳೂ ಲಭಿಸುತ್ತವೆ.

ಇಂತು ಶ್ರೀ ವಾರಾಹಪುರಾಣದಲ್ಲಿ ಗೀತಾಮಾಹಾತ್ಮ್ಯವು ಸಂಪೂರ್ಣವು.

## ಲಘು ಮಾಹಾತ್ಮ್ಯಂ

೧. ಗೀತಾಶಾಸ್ತ್ರಮಿದಂ ಪುಣ್ಯಂ, ಯಃ ಪಠೇತ್ ಪ್ರಯತಃ ಪುಮಾನ್। ವಿಷ್ಣೋಃ ಪದಮವಾಪ್ನೋತಿ, ಭಯಶೋಕಾದಿ ವರ್ಜಿತಃ ॥೧॥

೨. ಗೀತಾಧ್ಯಯನ ಶೀಲಸ್ಯ, ಪ್ರಾಣಾಯಾಮ ಪರಸ್ಯ ಚ। ನೈವ ಸಂತಿ ಹಿ ಪಾಪಾನಿ, ಪೂರ್ವಜನ್ಮ ಕೃತಾನಿ ಚ ॥೨॥

೩. ಮಲ ನಿರ್ಮೋಚನಂ ಪುಂಸಾಂ, ಜಲಸ್ನಾನಂ ದಿನೇ ದಿನೇ। ಸಕೃತ್ ಗೀತಾಂಭಸಿ ಸ್ನಾನಂ, ಸಂಸಾರ ಮಲನಾಶನಂ ॥೩॥

೪. ಗೀತಾ ಸುಗೀತಾ ಕರ್ತವ್ಯಾ, ಕಿಮನ್ಯೈಃ ಶಾಸ್ತ್ರ ವಿಸ್ತರೈಃ। ಯಾ ಸ್ವಯಂ ಪದ್ಮನಾಭಸ್ಯ, ಮುಖಪದ್ಮಾದ್ವಿನಿಃ ಸೃತಾ ॥೪॥

೫. ಭಾರತಾಮೃತ ಸರ್ವಸ್ವಂ, ವಿಷ್ಣೋರ್ವಕ್ತ್ರಾದ್ವಿನಿಃ ಸೃತಂ। ಗೀತಾ ಗಂಗೋದಕಂ ಪೀತ್ವಾ, ಪುನರ್ಜನ್ಮ ನ ವಿದ್ಯತೇ ॥೫॥

೬. ಶ್ರೀ ಕೃಷ್ಣಶೈಲ ಸಂಜಾತಾ, ವೇದಾಂತಾರ್ಣವ ಸಂಗತಾ। ಗೀತಾ ಜ್ಞಾನಮಯೀ ಗಂಗಾ, ಪುನಾತಿ ಭುವನ ತ್ರಯಂ ॥೬॥

೭. ಸಂಸಾರ ಸಾಗರಂ ಘೋರಂ, ತರ್ತುಮಿಚ್ಛತಿ ಯೋ ಜನಃ। ಗೀತಾನಾವಂ ಸಮಾರಹ್ಯ, ಸುಖೇನ ಪಾರಂ ಯಾತಿ ಸಃ ॥೭॥

೮. ಭಾರತೋ ದಧಿ ನಿರ್ಮಥ್ಯ, ಗೀತಾ ನಿರ್ಮಥಿತಸ್ಯ ಚ। ಸಾರಮುದ್ಧೃತ್ಯ ಕೃಷ್ಣೇನ, ಅರ್ಜುನಸ್ಯ ಮುಖೇ ಧೃತಂ ॥೮॥

೯. ಏಕಂ ಶಾಸ್ತ್ರಂ ದೇವಕೀಪುತ್ರ ಗೀತಂ। ಏಕೋ ದೇವೋ ದೇವಕೀಪುತ್ರ ಏವ॥ ಏಕೋ ಮಂತ್ರಸ್ತಸ್ಯನಾಮಾನಿ ಯಾನಿ। ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ॥ ॥೯॥



# ಅಥ ಶ್ರೀಮದ್ಭಗವದ್ಗೀತಾ ನ್ಯಾಸಾದಿಃ

ಅಥ ಅಂಗನ್ಯಾಸಃ:—ಓಂ ಅಸ್ಯ ಶ್ರೀಮದ್ಭಗವದ್ಗೀತಾ ಮಾಲಾ ಮಂತ್ರಸ್ಯ । ಭಗವಾನ್ ವೇದವ್ಯಾಸಋಷಿಃ । ಅನುಷ್ಟುಪ್ ಛಂದಃ । ಶ್ರೀಕೃಷ್ಣ ಪರಮಾತ್ಮಾ ದೇವತಾ । 'ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ' ಇತಿ ಬೀಜಮ್ । 'ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜೇತಿ' ಶಕ್ತಿ । 'ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚ' ಇತಿ ಕೀಲಕಮ್ ॥

ಅಥ ಕರನ್ಯಾಸಃ:—'ನೈನಂ ಛಿಂದಂತಿ ಶಸ್ತ್ರಾಣಿ ನೈನಂದಹತಿ ಪಾವಕ' ಇತ್ಯಂಗುಷ್ಠಾಭ್ಯಾಂ ನಮಃ । 'ನ ಚೈನಂಕ್ಲೇದಯನ್ತ್ಯಾಪೋ ನಶೋಷಯತಿ ಮಾರುತ' ಇತಿ ತರ್ಜನೀಭ್ಯಾಂನಮಃ । 'ಅಚ್ಛೇದ್ಯೋಽಯ ಮದಾಹ್ಯೋಽಯಮಕ್ಲೇದ್ಯೋಽಶೋಷ್ಯಏವ ಚೇತಿ' ಮಧ್ಯಮಾಭ್ಯಾಂ ನಮಃ । 'ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನ' ಇತ್ಯನಾಮಿ ಕಾಭ್ಯಾಂ ನಮಃ । 'ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶ' ಇತಿ ಕನಿಷ್ಠಿಕಾಭ್ಯಾಂ ನಮಃ । 'ನಾನಾವಿಧಾನಿ ದಿವ್ಯಾನಿ ನಾನಾವರ್ಣಾ ಕೃತೀನಿ ಚೇತಿ' ಕರತಲ ಕರಪೃಷ್ಠಾಭ್ಯಾಂ ನಮಃ ॥

ಅಥ ಹೃದಯಾದಿನ್ಯಾಸಃ:—'ನೈನಂ ಛಿಂದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕ' ಇತಿ ಹೃದಯಾಯ ನಮಃ । 'ನ ಚೈನಂ ಕ್ಲೇದಯನ್ತ್ಯಾ ಪೋ ನಶೋಷಯತಿ ಮಾರುತ' ಇತಿ ಶಿರಸೇ ಸ್ವಾಹಾ । 'ಅಚ್ಛೇದ್ಯೋಽಯ ಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವಚೇತಿ' ಶಿಖಾಯೈ ವಷಟ್ । 'ನಿತ್ಯಸ್ಸರ್ವಗತಃ ಸ್ಥಾಣುರಚಲೋಽಯಂ ಸನಾತನ' ಇತಿ ಕವಚಾಯ ಹುಮ್ । 'ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶ' ಇತಿ ನೇತ್ರತ್ರಯಾಯ ವೌಷಟ್ । 'ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚೇತಿ' ಅಸ್ತ್ರಾಯ ಫಟ್ । ಶ್ರೀ ಕೃಷ್ಣಪ್ರೀತ್ಯರ್ಥೇ ಪಾಠೇ ವಿನಿಯೋಗಃ ॥

**ಅಥ ಧ್ಯಾನಮ್:—**

**ಪಾರ್ಥಾಯ ಪ್ರತಿಬೋಧಿತಾಂ| ಭಗವತಾ ನಾರಾಯಣೇನ ಸ್ವಯಮ್|**
**ವ್ಯಾಸೇನ ಗ್ರಥಿತಾಂ ಪುರಾಣ| ಮುನಿನಾ ಮಧ್ಯೇ ಮಹಾಭಾರತಮ್ ||**
**ಅದ್ವೈತಾಮೃತವರ್ಷಿಣೀಂ | ಭಗವತೀಮಷ್ಟಾದಶಾಧ್ಯಾಯಿನೀ |**
**ಮಂಬ ತ್ವಾಮನು ಸಂದಧಾಮಿ | ಭಗವದ್ಗೀತೇ ಭವದ್ವೇಷಿಣೀಮ್ ||**

ಹೇ ತಾಯಿ ಭಗವದ್ಗೀತೆಯೇ! ಸಾಕ್ಷಾತ್ ಭಗವಂತನಾದ ಶ್ರೀಮನ್ನಾರಾಯಣ ರೂಪನಾದ ಶ್ರೀ ಕೃಷ್ಣಪರಮಾತ್ಮನೇ ನಿನ್ನನ್ನು ಅರ್ಜುನನಿಗೆ ಬೋಧಿಸಿದನು. ಬಳಿಕ ಪುರಾಣಗಳ ಕರ್ತೃವಾದ ಶ್ರೀ ವೇದವ್ಯಾಸ ಮಹರ್ಷಿಗಳು ನಿನ್ನನ್ನು ಮಹಾಭಾರತದ ಮಧ್ಯದಲ್ಲಿ ಸೇರಿಸಿದರು. ನೀನು ಕೇವಲ ಅದ್ವೈತವೆಂಬ ಅಮೃತದ ಮಳೆಯನ್ನೇ ಸುರಿಸುತ್ತಲಿದ್ದಿಯೇ! ನೀನು ಸಮಸ್ತ ಕಲ್ಯಾಣಗುಣಗಳಿಂದಲೂ ಮತ್ತು ಷಡ್ಗುಣೈಶ್ವರ್ಯಗಳಿಂದಲೂ ಪರಿಶೋಭಿಸುತ್ತಲಿರುವೆ! ಹದಿನೆಂಟು ಅಧ್ಯಾಯಗಳ ರೂಪದಿಂದ ಜಗತ್ತನ್ನೇ ಪ್ರಕಾಶಪಡಿಸುತ್ತಲಿದ್ದೀಯೆ! ಮತ್ತು ನೀನು ಜನ್ಮ ಮರಣರೂಪವಾದ ಸಂಸಾರದ ಭ್ರಾಂತಿಯನ್ನು ನಿವಾರಿಸುವಳಾಗಿದ್ದೀಯೆ! ಅರ್ಥಾತ್, ನಿನ್ನ ಸ್ಮರಣೆ ಮಾಡಿದವರಿಗೆ ಸಂಸಾರದ ಕೋಟಲೆಗಳನ್ನು ತಪ್ಪಿಸಿ ಅವರನ್ನು ಮುಕ್ತರಾಗಿ ಮಾಡಿಬಿಡುವೆ! ಇಂತಹ ಮಹಿಮೆಯುಳ್ಳ ಹೇ ತಾಯಿಯೇ! ನಾನು ನಿನ್ನನ್ನು ಮನಸ್ಸಿನಿಂದ ಧ್ಯಾನಿಸುವೆನು.

**ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ, ಫುಲ್ಲಾರವಿಂದಾಯತಪತ್ರನೇತ್ರ | ಯೇನ ತ್ವಯಾ ಭಾರತ ತೈಲಪೂರ್ಣಃ, ಪ್ರಜ್ವಾಲಿತೋ ಜ್ಞಾನಮಯ ಪ್ರದೀಪಃ ||೨||**

ವಿಶಾಲ ಬುದ್ಧಿಯುಳ್ಳವರಾಗಿ, ಅರಳಿದ ಕಮಲ ಪತ್ರದಂತೆ ದೀರ್ಘವಾದ ನೇತ್ರಗಳುಳ್ಳ ಹೇ ವ್ಯಾಸರೇ, ನಾನು ನಿಮಗೆ ನಮಸ್ಕರಿಸುವೆನು. ಯಾಕೆಂದರೆ—ತಾವು ಭಾರತವೆಂಬ ಎಣ್ಣೆಯಿಂದ ತುಂಬಿದಂಥಾ ಜ್ಞಾನವೆಂಬ ದೀಪವನ್ನು ಪ್ರಜ್ವಲಿತಗೊಳಿಸಿದಿರಿ. (ಇದರಿಂದ ನನ್ನ ಹೃದಯಮಂದಿರದ ಅಜ್ಞಾನಾಂಧಕಾರವು ದೂರವಾಯಿತು.)

**ಪ್ರಪನ್ನಪಾರಿಜಾತಾಯ, ತೋತ್ರವೇತ್ರೈಕ ಪಾಣಯೇ| ಜ್ಞಾನಮುದ್ರಾಯ ಕೃಷ್ಣಾಯ, ಗೀತಾಮೃತದುಹೇ ನಮಃ ||೩||**

ಶರಣಾಗತ ಜನರಿಗೆ ಕಲ್ಪವೃಕ್ಷ ರೂಪನಾಗಿ, ಒಂದು ಕೈಯಲ್ಲಿ ಚಾಟಿಯನ್ನು ಹಿಡಿದುಕೊಂಡವನಾಗಿ, ಮತ್ತೊಂದರಿಂದ ಜ್ಞಾನ ಮುದ್ರೆಯನ್ನು

Funding: Tattva Heritage Foundation,Kolkata. Digitization: eGangotri.



ಹಿಡಿದು, ಗೀತಾರೂಪವಾದ ಅಮೃತವನ್ನು ಕರೆಯುವಂಥಾ ಶ್ರೀಕೃಷ್ಣಭಗವಂತನಿಗೆ ನಮಸ್ಕಾರವು.

**ಸರ್ವೋಪನಿಷದೋ ಗಾವೋ, ದೋಗ್ಧಾ ಗೋಪಾಲ ನಂದನಃ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ, ದುಗ್ಧಂ ಗೀತಾಮೃತಂ ಮಹತ್**

ಉಪನಿಷತ್ತುಗಳೇ ಹಸುಗಳು! ಹಾಲು ಕರೆಯತಕ್ಕವನು ಗೋಪಾಲಕನ ಮನೆಯಲ್ಲಿ ಹುಟ್ಟಿ ಬೆಳೆದ ಶ್ರೀಕೃಷ್ಣನೇ! (ಹಾಲು ಕರೆಯುವ ತಮ್ಮ ಕುಲ ವೃತ್ತಿಯಲ್ಲಿ ಅತ್ಯಂತ ನಿಪುಣ, ದಕ್ಷನೆಂಬ ಭಾವ.) ನಿರ್ಮಲ ಬುದ್ಧಿಯುಳ್ಳ, ಅಧಿಕಾರಿಗಳಾದ ಮುಮುಕ್ಷುಗಳಂತಿರುವ ಅರ್ಜುನನೇ ಎಳೆಯ ಕರುವು. ತಾಯಿಯ ಸ್ತನ್ಯಪಾನ ಮಾಡುವುದರಲ್ಲಿ ಕರುವಿಗೆ ಎಂತಹ ಪ್ರೇಮ ಮತ್ತು ಉತ್ಸುಕತೆ ಇರುವುದೋ, ಅದರಂತಿರುವ ಅರ್ಜುನನೇ ಎಳೆ ಕರುವು. ತಾಯಿಯ ಸ್ತನ್ಯದಲ್ಲಿರುವ ಹಾಲನ್ನು ಕುಡಿಯಲು ಅದರ ಮಗುವಿಗೇ ಸಂಪೂರ್ಣ ಅಧಿಕಾರ (ಹಕ್ಕು) ಉಂಟು, ಇತರರಿಗಿಲ್ಲ. ಅರ್ಜುನನಂತಹ ಶ್ರೇಷ್ಠ ಬುದ್ಧಿಯುಳ್ಳವರೇ ಸರ್ವ ಶ್ರೇಷ್ಠವೂ ಮತ್ತು ಮಹತ್ವಪೂರ್ಣವೂ ಆದ ಈ ಗೀತಾಮೃತವನ್ನು ಪಾನಮಾಡತಕ್ಕವರು. ಇಂತು ಗೀತಾಮೃತವು ಅತಿ ಮಹತ್ವವಾದದ್ದು.

(ಗೀತಾರೂಪಿ ಅಮೃತವು ಸ್ವರ್ಗಲೋಕದ ಅಮೃತಕ್ಕಿಂತ ಅತ್ಯಂತ ಶ್ರೇಷ್ಠವಾದುದು. ಹೇಗೆಂದರೆ:—ದೇವತೆಗಳ ಅಮೃತವು ಪುಣ್ಯವಿರುವವರೆವಿಗೂ ಭೋಗಗಳನ್ನು ಕೊಟ್ಟು, ಪುಣ್ಯಕ್ಷೀಣವಾದೊಡನೆಯೇ ಅಲ್ಲಿಂದ ಪತನಮಾಡಿಸಿ, ನರಲೋಕದಲ್ಲಿ ಜನ್ಮತಾಳುವಂತೆ ಮಾಡುತ್ತದೆ. ಆದರೆ ಗೀತೆ ಎಂಬ ಈ ಮಹತ್ತರವಾದ ಅಮೃತವು ಭೋಕ್ತಾ ಪುರುಷನನ್ನು ನಿಜವಾಗಿಯೂ ಅಮರನನ್ನಾಗಿ ಮಾಡುತ್ತದೆ. ಆದ್ದರಿಂದ ಇದನ್ನು "ಗೀತಾ-ಮೃತಂ ಮಹತ್" ಎಂದು ಕರೆದಿರುವುದು ತುಂಬ ಯುಕ್ತವಾಗಿದೆ.)

**ವಸುದೇವ ಸುತಂ ದೇವಂ, ಕಂಸ ಚಾಣೂರ ಮರ್ದನಮ್। ದೇವಕೀ**
**ಪರಮಾನಂದಂ, ಕೃಷ್ಣಂ ವಂದೇ ಜಗದ್ಗುರುಂ ॥೫॥**

ಕಂಸ ಚಾಣೂರರೆಂಬ (ಅಹಂಕಾರ, ಮಮಕಾರಗಳೆಂಬ) ದುಷ್ಟರನ್ನು ಸಂಹರಿಸಿದ, ದೇವಕೀ ದೇವಿಗೆ (ಬಂಧನ ಬಿಡಿಸಿದ ಅಥವಾ ತನ್ನ ಅಲೌಕಿಕ ಬಾಲ ಲೀಲೆಗಳಿಂದ) ಪರಮಾನಂದವನ್ನುಂಟು ಮಾಡಿದ, ಸಮಸ್ತ

ಜಗತ್ತಿಗೆ ಗೀತೋಪದೇಶಮಾಡಿ ಜಗದ್ಗುರುವೆನಿಸಿದ, ಗೀತಾಚಾರ್ಯನಾದ, ವಸುದೇವನ ಪುತ್ರನಾದ, ಶ್ರೀಕೃಷ್ಣಪರಮಾತ್ಮನನ್ನು ವಂದಿಸುವೆನು.

**ಭೀಷ್ಮದ್ರೋಣ ತಟಾ,ಜಯದ್ರಥಜಲಾ,ಗಾಂಧಾರ ನೀಲೋಪಲಾ,(x) ಶಲ್ಯಗ್ರಾಹವತೀ ಕೃಪೇಣವಹನೀ, ಕರ್ಣೇನ ವೇಲಾಕುಲಾ॥ ಅಶ್ವತ್ಥಾಮ ವಿಕರ್ಣ ಘೋರಮಕರಾ, ದುರ್ಯೋಧನಾವರ್ತಿನೀ। ಸೋತ್ತೀರ್ಣಾ ಖಲು ಪಾಂಡವೈ, ರಣನದೀ ಕೈವರ್ತಕಃ ಕೇಶವಃ ॥೬॥**

ಭಾರತ ಯುದ್ಧದ ರಣನದಿಯು ಎಂತಿದ್ದಿತೆಂದರೆ:-ಭೀಷ್ಮ ದ್ರೋಣರೇ ಎರಡು ಪಕ್ಕದ ದಡಗಳಂತಿದ್ದರು. ಜಯದ್ರಥನೇ ಅದರಲ್ಲಿದ್ದ ನೀರು; ಶಕುನಿಯೇ ಕರಿಬಂಡೆ. ಶಲ್ಯನೇ ಮೊಸಳೆ. ಕೃಪಾಚಾರ್ಯರೇ ಪ್ರವಾಹದ ರಭಸ (ವೇಗ), ಕರ್ಣನೇ ಭೋರ್ಗರೆಯುತ್ತ ಬರುತ್ತಿದ್ದ ಅಲೆಗಳ ಸಮೂಹ. ಅಶ್ವತ್ಥಾಮ, ವಿಕರ್ಣರೇ ಭಯಂಕರವಾದ ಮಹಾಮತ್ಸ್ಯಗಳು (ಜಲಚರ ಜಂತು ವಿಶೇಷ-ತಿಮಿಂಗಿಲ ಇತ್ಯಾದಿ). ದುರ್ಯೋಧನನೇ ನೀರಿನ ಸುಳಿ. ಈ ಪ್ರಕಾರವಾಗಿರುವ ಅತ್ಯಂತ ಭಯಂಕರವಾದ ರಣನದಿಯನ್ನು ಪಾಂಡವರು ಅಂಬಿಗನಾದ ಶ್ರೀಕೃಷ್ಣನ ಸಹಾಯದಿಂದ ಅನಾಯಾಸವಾಗಿ ದಾಟಿದರು.

**ಪಾರಾಶರ್ಯ ವಚಃ, ಸರೋಜ ಮಮಲಂ। ಗೀತಾರ್ಥಗಂಧೋತ್ಕಟಂ, ನಾನಾಖ್ಯಾನಕ ಕೇಸರಂ। ಹರಿಕಥಾ ಸಂಬೋಧನಾ ಬೋಧಿತಮ್॥ ಲೋಕೇ ಸಜ್ಜನ, ಷಟ್ಪದೈರಹರಹಃ, ಪೇಪೀಯಮಾನಂ ಮುದಾ। ಭೂಯಾತ್ ಭಾರತ ಪಂಕಜಂ, ಕಲಿಮಲ ಪ್ರಧ್ವಂಸಿ ನಃ ಶ್ರೇಯಸೇ**

ಇಲ್ಲಿ ಭಾರತ ಗ್ರಂಥವನ್ನು ಕಮಲದ ಹೂವಿಗೆ ಹೋಲಿಸಿದೆ. ಭಾರತವೆಂಬ ಕಮಲವು ಎಂತಿರುವುದೆಂದರೆ:—ಪರಾಶರ ಪುತ್ರರಾದ ವೇದವ್ಯಾಸ ಮಹರ್ಷಿಯ ದಿವ್ಯವಾಣಿ ಎಂಬ ನಿರ್ಮಲವಾದ ಸರೋವರದಿಂದ ಉದ್ಭವಿಸಿದೆ. ಗೀತಾರ್ಥವೆಂಬ ಉತ್ಕಟವಾದ ಸುಗಂಧದಿಂದ ಘಮಘಮಿಸುತ್ತಿದೆ. ವಿವಿಧ ಚರಿತ್ರೆಗಳೆಂಬ ಕೇಸರಗಳಿಂದ ಪರಿಶೋಭಿಸುತ್ತಲಿದೆ. ಶ್ರೀಕೃಷ್ಣಪರಮಾತ್ಮನ ದಿವ್ಯಕಥೆ (ಲೀಲಾ ವಿನೋದಗಳು) ಎಂಬ ಸೂರ್ಯನಿಂದ ಅರಳಿದೆ. ಲೋಕದಲ್ಲಿ ಸತ್ಪುರುಷರೆಂಬ ದುಂಬಿಗಳು ನಿತ್ಯವೂ ಇದರ ಮಕರಂದವನ್ನು ಪಾನಮಾಡಿ ಆನಂದ ಪರವಶವಾಗುತ್ತವೆ. ಇದು ಕಲಿಕಾಲದ ದೋಷಗಳನ್ನು

---

(x) ನೀಲೋತ್ಪಲಾ ಎಂದೂ ಪಾಠಾಂತರವುಂಟು.

ನಿರ್ಮೂಲ ಸಾಧಕವಾಗಿದೆ. ಇಂತಹ ಭಾರತವೆಂಬ ಕಮಲ ಪುಷ್ಪವು ನಮ್ಮೆಲ್ಲರಿಗೂ ಶ್ರೇಯಸ್ಸನ್ನುಂಟು ಮಾಡಲಿ.

**ಮೂಕಂ ಕರೋತಿ ವಾಚಾಲಂ, ಪಂಗುಂ ಲಂಘಯತೇ ಗಿರಿಮ್।**
**ಯತ್ಕೃಪಾ ತಮಹಂ ವಂದೇ, ಪರಮಾನಂದ ಮಾಧವಮ್ ॥೮॥**

ಯಾವ ಪರಮಾತ್ಮನ ಕೃಪೆಯಿಂದ ಮೂಗನೂ ಸಹ ವೇದಾರ್ಥಗಳನ್ನು ಪ್ರತಿಪಾದಿಸುವ ಅಮೋಘ ವಾಗ್ಧೋರಣೆಯನ್ನು ಪಡೆಯುವನೋ,(x) ಕುಂಟನೂ (ಕಾಲಿಲ್ಲದವನು) ಪರ್ವತವನ್ನುದಾಟಿ ಹೋಗುವನೋ, ಅಂಥ ಪರಮಾನಂದ ಸ್ವರೂಪನಾದ . ಶ್ರೀಕೃಷ್ಣ ಪರಮಾತ್ಮನನ್ನು ನಾನು ನಮಸ್ಕರಿಸುವೆನು.

**ಯಂ ಬ್ರಹ್ಮಾವರುಣೇಂದ್ರ ರುದ್ರಮರುತಃ ಸ್ತುನ್ವಂತಿದಿವ್ಯೈಃ ಸ್ತವೈಃ,**
**ವೇದೈಃ ಸಾಂಗಪದಕ್ರಮೋಪನಿಷದೈಃ ಗಾಯಂತಿ ಯಂ ಸಾಮಗಾಃ।**
**ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ,**
**ಯಸ್ಯಾಂತಂ ನವಿದುಃ ಸುರಾಸುರಗಣಾ ದೇವಾಯತಸ್ಮೈ ನಮಃ ॥೯॥**

**ಇತಿ ಗೀತಾಧ್ಯಾನಂ ಸಂಪೂರ್ಣಮ್**

ಯಾವ ಪರಮಾತ್ಮನನ್ನು ಬ್ರಹ್ಮ, ವರುಣ, ಇಂದ್ರ, ರುದ್ರ, ಮರುದ್ಗಣಗಳು ಷಡಂಗ, ಪದ, ಕ್ರಮ ಮತ್ತು ಉಪನಿಷತ್ ಸಹಿತವಾದ ದಿವ್ಯ ಸ್ತೋತ್ರಗಳಿಂದ ಸ್ತುತಿಸುವರೋ,ಸಾಮಗಾನ ಮಾಡುವವರು ಅತಿ ಇಂಪಾದ ಧ್ವನಿಯಿಂದ ಯಾವ ಪರಮಾತ್ಮನ ಯಶೋಗಾನವನ್ನು ಮಾಡುತ್ತಲಿರುವರೋ, ಯೋಗಿಗಳು ಧ್ಯಾನ (ಸಮಾಧಿ) ಅವಸ್ಥೆಯಲ್ಲಿ ಸ್ಥಿರಗೊಳಿಸಿದ ತದ್ಗತ (ಭಗವತ್ಪರಾಯಣ)ವಾದ ಚಿತ್ತದಲ್ಲಿ ಯಾರ ಸಾಕ್ಷಾತ್ಕಾರವನ್ನು ಮಾಡುತ್ತಲಿರುವರೋ, ದೇವತೆಗಳಾಗಲಿ ರಾಕ್ಷಸರಾಗಲಿ ಯಾರೂ ಯಾವ ಪರಮಾತ್ಮನ ಅಂತ್ಯವನ್ನು ಅಂದರೆ ಸ್ವರೂಪವನ್ನು ಅರಿಯರೋ, ಅಂತಹ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನಿಗೆ ನಮಸ್ಕಾರವು.

**ಇಂತು ಗೀತಾಧ್ಯಾನವು ಸಂಪೂರ್ಣವು.**

---

(x) ಬಾಲಕನಾದ ತಪಸ್ವಿ ಧೃವನ ಕೆನ್ನೆಗಳಿಗೆ ಶ್ರೀ ಮಹಾವಿಷ್ಣು ತನ್ನ ಕೈಯಲ್ಲಿದ್ದ ಶಂಖದಿಂದ ಸ್ಪರ್ಶಮಾಡಲು, ಧೃವನು ವೇದಾರ್ಥಗಳನ್ನು ಪ್ರಕಟಿಸುವ ಅಮೋಘವಾದ ಸ್ತೋತ್ರಗಳಿಂದ ಶ್ರೀ ವಿಷ್ಣುಭಗವಂತನನ್ನು ಸ್ತುತಿಸಿದನು. ಜ್ಞಾನೇಶ್ವರ ಮಹಾರಾಜರು ಕೋಣದ ಮುಖದಿಂದ ವೇದಗಳನ್ನು ಹೇಳಿಸಿದರು.

# ಓಂ

ಶ್ರೀ ಪರಮಾತ್ಮನೇ ನಮಃ

# ಅಥ ಶ್ರೀಮದ್ಭಗವದ್ಗೀತಾ

## ಅಥ ಪ್ರಥಮೋಽಧ್ಯಾಯಃ

॥ಪ್ರಥಮ ಷಟ್ಕಂ॥ ಕರ್ಮಕಾಂಡಂ—ತ್ವಂಪದ ನಿರೂಪಣಂ

(ಅರ್ಜುನ ವಿಷಾದ ಯೋಗ)

ಧೃತರಾಷ್ಟ್ರ ಉವಾಚ

**ಧರ್ಮಕ್ಷೇತ್ರೇ ಕುರುಕ್ಷೇತ್ರೇ, ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ, ಕಿಮಕುರ್ವತ ಸಂಜಯ ॥೧॥**

ಧೃತರಾಷ್ಟ್ರನು ಹೇಳಿದನು:—ಎಲೈ ಸಂಜಯನೇ! ಧರ್ಮಕ್ಷೇತ್ರವೆಂಬ ಕುರುಕ್ಷೇತ್ರದಲ್ಲಿ ಯುದ್ಧಾಪೇಕ್ಷೆಯಿಂದ ಒಟ್ಟುಗೂಡಿದ ನನ್ನ ಮಕ್ಕಳೂ ಮತ್ತು ಪಾಂಡುರಾಜನ ಮಕ್ಕಳಾದ ಪಾಂಡವರೂ ಏನು ಮಾಡಿದರು?

ಸಂಜಯ ಉವಾಚ

**ದೃಷ್ಟ್ವಾ ತು ಪಾಂಡವಾನೀಕಂ, ವ್ಯೂಢಂ ದುರ್ಯೋಧನಸ್ತದಾ।**
**ಆಚಾರ್ಯಮುಪಸಂಗಮ್ಯ, ರಾಜಾ ವಚನ ಮಬ್ರವೀತ್ ॥೨॥**

ಸಂಜಯನು ಹೇಳಿದುದೇನೆಂದರೆ:—ವ್ಯೂಹಾಕಾರದಿಂದ ಯುದ್ಧಕ್ಕೆ ಸಿದ್ಧವಾಗಿ ನಿಂತಿದ್ದ ಪಾಂಡವರ ಸೈನ್ಯವನ್ನು ನೋಡಿ ರಾಜನಾದ ದುರ್ಯೋಧನನು ದ್ರೋಣಾಚಾರ್ಯರ ಸಮೀಪಕ್ಕೆ ಹೋಗಿ ಈ ಪ್ರಕಾರ ಹೇಳಿದನು.

**ಪಶ್ಯೈತಾಂ ಪಾಂಡುಪುತ್ರಾಣಾ, ಮಾಚಾರ್ಯ ಮಹತೀಂಚಮೂಮ್।**
**ವ್ಯೂಢಾಂ ದ್ರುಪದಪುತ್ರೇಣ, ತವಶಿಷ್ಯೇಣ ಧೀಮತಾ ॥೩॥**

ಎಲೈ ದ್ರೋಣಾಚಾರ್ಯರೇ! ಬುದ್ಧಿವಂತನೂ, ನಿಮಗೆ ಶಿಷ್ಯನೂ ಮತ್ತು ದ್ರುಪದರಾಜನ ಪುತ್ರನೂ ಆದ ಧೃಷ್ಟದ್ಯುಮ್ನನು ವ್ಯೂಹ ರಚನೆ ಮಾಡಿ ನಿಲ್ಲಿಸಿರುವ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿರಿ.

**ಅತ್ರ ಶೂರಾ ಮಹೇಷ್ವಾಸಾ, ಭೀಮಾರ್ಜುನ ಸಮಾಯುಧಿ।**
**ಯುಯುಧಾನೋ ವಿರಾಟಶ್ಚ, ದ್ರುಪದಶ್ಚ ಮಹಾರಥಃ ॥೪॥**

ಈ ಪಾಂಡವರ ಸೈನ್ಯದೊಳಗೆ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನವಾದ ಪರಾಕ್ರಮವುಳ್ಳವರಾಗಿ ಮತ್ತು ದೊಡ್ಡ ಧನಸ್ಸುಗಳುಳ್ಳವರಾಗಿ ಇರುವವರು ಯುಯುಧಾನನು, ವಿರಾಟರಾಜನು ಮತ್ತು ಮಹಾರಥಿಕನಾದ ದ್ರುಪದನು.

**ಧೃಷ್ಟಕೇತುಶ್ಚೇಕಿತಾನಃ, ಕಾಶೀರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುಂತಿ ಭೋಜಶ್ಚ, ಶೈಬ್ಯಶ್ಚ ನರಪುಂಗವಃ ॥೫॥**
**ಯುಧಾಮನ್ಯುಶ್ಚ ವಿಕ್ರಾನ್ತ, ಉತ್ತಮೌಜಾಶ್ಚ ವೀರ್ಯವಾನ್।**
**ಸೌಭದ್ರೋದ್ರೌಪದೇಯಾಶ್ಚ , ಸರ್ವ ಏವ ಮಹಾರಥಾಃ ॥೬॥**

ಧೃಷ್ಟಕೇತು, ಚೇಕಿತಾನ, ಪರಾಕ್ರಮ ಶಾಲಿಯಾದ ಕಾಶೀರಾಜನು, ಪುರುಜಿತ್ತು, ಕುಂತೀಭೋಜ, ನರಶ್ರೇಷ್ಠನಾದ ಶೈಬ್ಯನು, ಪರಾಕ್ರಮಿಯಾದ ಯುಧಾಮನ್ಯು, ವೀರ್ಯವಂತನಾದ ಉತ್ತಮೌಜನು, ಸುಭದ್ರಾ ಪುತ್ರನಾದ ಅಭಿಮನ್ಯುವು, ದ್ರೌಪದಿಯ ಮಕ್ಕಳಾದ ಐದುಜನ ಉಪಪಾಂಡವರು— ಇವರೆಲ್ಲರೂ ಮಹಾರಥಿಕರಾಗಿರುವರು. (X)

**ಅಸ್ಮಾಕಂ ತು ವಿಶಿಷ್ಟಾಯೇ, ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ, ಸಂಜ್ಞಾರ್ಥಂ ತಾನ್ ಬ್ರವೀಮಿತೇ ॥೭॥**

ಓ ಬ್ರಾಹ್ಮಣೋತ್ತಮರೇ! ನಮ್ಮ ಸೈನ್ಯದಲ್ಲಿರತಕ್ಕ ಶ್ರೇಷ್ಠರಾದ ನಾಯಕರನ್ನು ತಮ್ಮ ಪರಿಚಯಕ್ಕಾಗಿ (ಜ್ಞಾಪಕಾರ್ಥವಾಗಿ) ನಾನು ತಮಗೆ ಹೇಳುತ್ತೇನೆ. ಅವರನ್ನು ತಿಳಿಯೋಣವಾಗಲಿ.

**ಭವಾನ್ ಭೀಷ್ಮಶ್ಚ ಕರ್ಣಶ್ಚ, ಕೃಪಶ್ಚ ಸಮಿತಿಂ ಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ, ಸೌಮದತ್ತಿರ್ಜಯದ್ರಥಃ ॥೮॥**

ಆಚಾರ್ಯರಾದ ತಾವು, ಭೀಷ್ಮಪಿತಾಮಹರು, ಯುದ್ಧದಲ್ಲಿ ಜಯಶೀಲರಾದ ಕೃಪಾಚಾರ್ಯರು, ಅಶ್ವತ್ಥಾಮ, ವಿಕರ್ಣ, ಸೌಮದತ್ತಿ, ಜಯದ್ರಥ—ಮುಂತಾದವರಿರುವರು.

**ಅನ್ಯೇ ಚ ಬಹವಶ್ಶೂರಾ, ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ, ಸರ್ವೇ ಯುದ್ಧ ವಿಶಾರದಾಃ ॥೯॥**

---

(X) ಒಬ್ಬನೇ ಹತ್ತುಸಾವಿರ ಧನುರ್ಧಾರಿಗಳೊಡನೆ ಯುದ್ಧಮಾಡುವವನಾಗಿಯೂ, ಶಸ್ತ್ರ ಮತ್ತು ಶಾಸ್ತ್ರಗಳಲ್ಲಿ ಕುಶಲನಾಗಿಯೂ ಇರುವವನನ್ನು ಮಹಾರಥಿ ಎನ್ನುವರು.

ಇವರುಗಳೇ ಅಲ್ಲದೆ, ಇನ್ನೂ ಅನೇಕ ಶೂರವೀರರು ನಮ್ಮ ಕಡೆ ಸಿದ್ಧವಾಗಿದ್ದಾರೆ. ಅವರೆಲ್ಲರೂ ಹೇಗಿದ್ದಾರೆಂದರೆ:—ನಾನಾ ಬಗೆಯ ಅಸ್ತ್ರ ಶಸ್ತ್ರಗಳನ್ನು ಧರಿಸಿದ್ದಾರೆ; ಯುದ್ಧದಲ್ಲಿ ಕುಶಲರಾಗಿದ್ದಾರೆ ಮತ್ತು ನನಗೆ ಜಯವನ್ನು ಉಂಟುಮಾಡುವ ಸಲುವಾಗಿ ತಮ್ಮ ಪ್ರಾಣದ ಮೇಲಿನ ಆಶೆಯನ್ನೂ ತೊರೆದು ಬಂದಿದ್ದಾರೆ.

**ಅಪರ್ಯಾಪ್ತಂ ತದಸ್ಮಾಕಂ, ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ, ಬಲಂ ಭೀಮಾಭಿ ರಕ್ಷಿತಮ್ ॥೧೦॥**

ಭೀಷ್ಮರಿಂದ ರಕ್ಷಿಸಲ್ಪಡುತ್ತಿರುವ ನಮ್ಮ ಸೈನ್ಯವು ಅಸಮರ್ಥವಾಗಿರುವುದಾಗಿಯೂ ಮತ್ತು ಭೀಮನಿಂದ ರಕ್ಷಿಸಲ್ಪಡುತ್ತಿರುವ ಪಾಂಡವರ ಸೈನ್ಯವು ಸಮರ್ಥವಾಗಿರುವುದಾಗಿಯೂ ತೋರುತ್ತಿದೆ.

**ಅಯನೇಷು ಚ ಸರ್ವೇಷು, ಯಥಾಭಾಗ ಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು, ಭವಂತಃ ಸರ್ವ ಏವ ಹಿ ॥೧೧॥**

ಈ ಕಾರಣದಿಂದ ನೀವೆಲ್ಲರೂ ನಿಮ್ಮಗಳಿಗೆ ನಿಯಮಿಸಿರುವ ಸ್ಥಾನಗಳಲ್ಲಿ ಜಾಗರೂಕರಾಗಿದ್ದುಕೊಂಡು ಸದಾ ಭೀಷ್ಮಾಚಾರ್ಯರನ್ನೇ ರಕ್ಷಿಸುತ್ತಿರಿ. (ಏಕೆಂದರೆ, ನಮ್ಮ ಜಯವು ಭೀಷ್ಮಾಧೀನವಾಗಿರುವುದು.)

**ತಸ್ಯ ಸಂಜನಯರ್ನ್ ಹರ್ಷಂ, ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ, ಶಂಖಂ ದಧ್ಮೌ ಪ್ರತಾಪವಾನ್ ॥೧೨॥**

ಈ ರೀತಿ ಹೇಳುತ್ತಲಿದ್ದ ದುರ್ಯೋಧನನಿಗೆ ಸಂತೋಷವನ್ನು ಉಂಟುಮಾಡಬೇಕೆಂದು ಕುರುವಂಶದಲ್ಲಿ ಅತಿ ಹಿರಿಯವರಾದ, ದುರ್ಯೋಧನಾದಿಗಳಿಗೆ ಪಿತಾಮಹರಾದ ಮತ್ತು ಪ್ರತಾಪಶಾಲಿಯಾದ ಭೀಷ್ಮಾಚಾರ್ಯರು ದೊಡ್ಡ ಸಿಂಹನಾದವನ್ನು ಮಾಡಿ ತಮ್ಮ ಶಂಖವನ್ನು ಊದಿದರು.

**ತತಃ ಶಂಖಾಶ್ಚ ಭೇರ್ಯಶ್ಚ, ಪಣವಾನಕ ಗೋಮುಖಾಃ ।**
**ಸಹಸೈವಾಭ್ಯಹನ್ಯಂತ, ಸ ಶಬ್ದಸ್ತುಮುಲೋಽಭವತ್ ॥೧೩॥**

ಕೂಡಲೇ ಅನೇಕ ಶಂಖಗಳು, ಭೇರಿಗಳು, ಪಣವ, ಆನಕ, ಗೋಮುಖಗಳೆಂಬ ರಣವಾದ್ಯಗಳು ಏಕಕಾಲದಲ್ಲಿ ಭೋರ್ಗರೆದುವು. ಇದರಿಂದ ಹುಟ್ಟಿದ ಮಹಾಶಬ್ದವು ನಭೋಮಂಡಲವನ್ನೆಲ್ಲಾ ವ್ಯಾಪಿಸಿತು.

**ತತಃ ಶ್ವೇತೈರ್ಹಯೈರ್ಯುಕ್ತೇ, ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ, ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥**

ಬಳಿಕ, ಬಿಳಿಯ ಕುದುರೆಗಳನ್ನು ಕಟ್ಟಿದ್ದ, ದೊಡ್ಡ ರಥದಲ್ಲಿ ಕುಳಿತಿದ್ದ, ಶ್ರೀಕೃಷ್ಣನೂ, ಅರ್ಜುನನೂ ತಮ್ಮ ತಮ್ಮ ದಿವ್ಯಶಂಖಗಳನ್ನು ಊದಿದರು.

**ಪಾಂಚಜನ್ಯಂ ಹೃಷೀಕೇಶೋ, ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ, ಭೀಮಕರ್ಮಾ ವೃಕೋದರಃ ॥**

ಶ್ರೀಕೃಷ್ಣನು ಪಾಂಚಜನ್ಯವೆಂಬ ತನ್ನ ಶಂಖವನ್ನೂ, ಧನಂಜಯನಾದ ಅರ್ಜುನನು ದೇವದತ್ತವೆಂಬ ಶಂಖವನ್ನೂ, ಭಯಂಕರ ಕರ್ಮಗಳನ್ನು ಮಾಡುವ ಭೀಮಸೇನನು ಪೌಂಡ್ರವೆಂಬ ತನ್ನ ಮಹಾಶಂಖವನ್ನೂ ಊದಿದರು.

**ಅನಂತ ವಿಜಯಂ ರಾಜಾ, ಕುಂತೀಪುತ್ರೋ ಯುಧಿಷ್ಠಿರಃ।**
**ನಕುಲಸ್ಸಹದೇವಶ್ಚ, ಸುಘೋಷಮಣಿ ಪುಷ್ಪಕೌ ॥೧೬॥ ಕಾಶ್ಯಶ್ಚ**
**ಪರಮೇಷ್ವಾಸಃ, ಶಿಖಂಡೀಚ ಮಹಾರಥಃ। ಧೃಷ್ಟದ್ಯುಮ್ನೋ ವಿರಾ**
**ಟಶ್ಚ, ಸಾತ್ಯಕಿಶ್ಚಾಽಪರಾಜಿತಃ॥೧೭॥ ದ್ರುಪದೋ ದ್ರೌಪದೇಯಾಶ್ಚ,**
**ಸರ್ವಶಃ ಪೃಥಿವೀಪತೇ। ಸೌಭದ್ರಶ್ಚ ಮಹಾಬಾಹುಃ, ಶಂಖಾನ್**
**ದಧ್ಮುಃಪೃಥಕ್ಪೃಥಕ್ ॥೧೮॥**

ಕುಂತೀ ಪುತ್ರನಾದ ಯುಧಿಷ್ಠಿರ ಮಹಾರಾಜನು ಅನಂತ ವಿಜಯವೆಂಬ ಶಂಖವನ್ನೂ, ನಕುಲ ಸಹದೇವರು ಸುಘೋಷ ಮಣಿಪುಷ್ಪಕಗಳೆಂಬ ತಮ್ಮ ಶಂಖಗಳನ್ನೂ, ಮತ್ತು ಇದೇ ರೀತಿಯಾಗಿ ಮಹಾ ಧನುಸ್ಸುಳ್ಳ ಕಾಶೀರಾಜನೂ, ಮಹಾರಥನಾದ ಶಿಖಂಡಿಯೂ, ಧೃಷ್ಟದ್ಯುಮ್ನ, ವಿರಾಟರಾಜ ಯುದ್ಧದಲ್ಲಿ ಹಿಂತಿರುಗದ ಸಾತ್ಯಕಿ, ದ್ರುಪದರಾಜ, ದ್ರೌಪದಿಯ ಮಕ್ಕಳಾದ ಉಪಪಾಂಡವರು, ಆಜಾನು ಬಾಹುವಾದ ಅಭಿಮನ್ಯು—ಇವರೆಲ್ಲರೂ ಎಲ್ಲಾ ಕಡೆಗಳಿಂದಲೂ ಪ್ರತ್ಯೇಕ ಪ್ರತ್ಯೇಕವಾದ ತಮ್ಮ ಶಂಖಗಳನ್ನು ಊದಿದರು.

**ಸ ಘೋಷೋ ಧಾರ್ತರಾಷ್ಟ್ರಾಣಾಂ, ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ, ತುಮುಲೋವ್ಯನುನಾದಯನ್ ॥೧೯॥**

ಆ ಮಹಾಶಂಖಗಳ ಶಬ್ದವು ಭೂಮಿಯಿಂದ ಆಕಾಶದವರೆವಿಗೂ ಪ್ರತಿಧ್ವನಿಯನ್ನು ಉಂಟುಮಾಡಿ, ಧೃತರಾಷ್ಟ್ರನ ಮಕ್ಕಳ ಹೃದಯವನ್ನು ಭೇದಿಸಿತು.

**ಅಥ ವ್ಯವಸ್ಥಿತಾನ್ ದೃಷ್ಟ್ವಾ, ಧಾರ್ತರಾಷ್ಟ್ರಾನ್ ಕಪಿಧ್ವಜಃ ॥**
**ಪ್ರವೃತ್ತೇ ಶಸ್ತ್ರಸಂಪಾತೇ, ಧನುರುದ್ಯಮ್ಯ ಪಾಂಡವಃ ॥೨೦॥**

ಅನಂತರದಲ್ಲಿ ಯುದ್ಧಕ್ಕಾಗಿ ಸಿದ್ಧವಾಗಿ ನಿಂತಿರುವ ಧೃತರಾಷ್ಟ್ರನ ಕುಮಾರರನ್ನು ನೋಡಿ, ಧನುಸ್ಸನ್ನೆತ್ತಿ ಪ್ರಹಾರ ಮಾಡುವ ಸಂದರ್ಭದಲ್ಲಿ, ಕಪಿಧ್ವಜನಾದ ಅರ್ಜುನನು, ತನ್ನ ಧನುಸ್ಸನ್ನು ಸಿದ್ಧಪಡಿಸಿಕೊಂಡು

**ಹೃಷೀಕೇಶಂ ತದಾ ವಾಕ್ಯ । ಮಿದಮಾಹ ಮಹೀಪತೇ ।**

**ಅರ್ಜುನ ಉವಾಚ**

**ಸೇನಯೋರುಭಯೋರ್ಮಧ್ಯೇ, ರಥಂ ಸ್ಥಾಪಯಮೇಽಚ್ಯುತ ॥೨೧॥**

ಎಲೈ ಧೃತರಾಷ್ಟ್ರನೇ! ಹೃಷೀಕೇಶನಾದ ಶ್ರೀಕೃಷ್ಣನನ್ನು ಕುರಿತು ಅರ್ಜುನನು—ಓ ಅಚ್ಯುತನೇ! ನನ್ನ ರಥವನ್ನು ಎರಡು ಸೈನ್ಯಗಳ ಮಧ್ಯೆ ನಿಲ್ಲಿಸೆಂದು ಹೇಳಿದನು.

**ಯಾವದೇತಾನ್ನಿರೀಕ್ಷೇಽಹಂ, ಯೋದ್ಧು ಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯ ಮಸ್ಮಿನ್ ರಣಸಮುದ್ಯಮೇ ॥೨೨॥**

ಯುದ್ಧಾಪೇಕ್ಷೆಯಿಂದ ರಣರಂಗದಲ್ಲಿ ಬಂದು ಯುದ್ಧಕ್ಕೆ ಸಿದ್ಧವಾಗಿ ನಿಂತಿರುವವರನ್ನು ನಾನು ಯಾವ ಸ್ಥಾನದಿಂದ (ಎಷ್ಟುದೂರದಿಂದ) ಚೆನ್ನಾಗಿ ನೋಡಬಲ್ಲೆನೋ, ಅಲ್ಲಿ ನನ್ನ ರಥವನ್ನು ನಿಲ್ಲಿಸು. ಮತ್ತು ನಾನು ಯಾರ್ಯಾರೊಂದಿಗೆ ಯುದ್ಧಮಾಡಬೇಕೋ ಅವರನ್ನು ಚೆನ್ನಾಗಿ ನೋಡುವ ತನಕ ನನ್ನ ರಥವನ್ನು ನಿಲ್ಲಿಸು. (ವಿಪಕ್ಷಿಗಳನ್ನು ನೋಡಲು ಸಾಕಾಗುವಷ್ಟು ದೂರ ಮತ್ತು ಕಾಲದವರೆಗೂ ರಥವನ್ನು ನಿಲ್ಲಿಸು ಎಂಬ ಭಾವ.)

**ಯೋತ್ಸ್ಯಮಾನಾನವೇಕ್ಷೇಽಹಂ, ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇ ರ್ಯುದ್ಧೇಪ್ರಿಯ ಚಿಕೀರ್ಷವಃ ॥೨೩॥**

ದುರ್ಬುದ್ಧಿಯುಳ್ಳ ದುರ್ಯೋಧನನಿಗೆ ಯುದ್ಧದಲ್ಲಿ ಪ್ರಿಯವನ್ನುಂಟು ಮಾಡುವ ಉದ್ದೇಶದಿಂದ ಅಥವಾ ಜಯವನ್ನುಗಳಿಸಿ ಕೊಡಬೇಕೆಂಬ ಇಚ್ಛೆಯಿಂದ, ಈ ರಣರಂಗದಲ್ಲಿ ಬಂದು ಯುದ್ಧಕ್ಕಾಗಿ ನಿಂತಿರುವವರನ್ನು ನಾನು ನೋಡುವೆನು.

**ಸಂಜಯ ಉವಾಚ**

**ಏವಮುಕ್ತೋ ಹೃಷೀಕೇಶೋ, ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥೨೪॥**

**ಭೀಷ್ಮ ದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥**

ಸಂಜಯನು ಹೀಗೆ ಹೇಳಿದನು:—ಈ ಪ್ರಕಾರವಾಗಿ ನಿದ್ರೆಯನ್ನು ಜಯಿಸಿದ (ಗುಡಾಕೇಶ) ಅರ್ಜುನನು ಹೃಷೀಕೇಶನಾದ ಶ್ರೀಕೃಷ್ಣನಿಗೆ ಹೇಳಲು, ಆಗ ಶ್ರೀಕೃಷ್ಣನು ಅರ್ಜುನನ ರಥವನ್ನು ಭೀಷ್ಮ, ದ್ರೋಣಾಚಾರ್ಯರ ಮುಂದೆ ಮತ್ತು ಎಲ್ಲಾ ರಾಜರುಗಳ ಸಮ್ಮುಖದಲ್ಲಿ ನಿಲ್ಲಿಸಿ, ಹೇ ಪಾರ್ಥ, ಯುದ್ಧವನ್ನು ಬಯಸಿ ಬಂದಿರುವ ಈ ಕೌರವರನ್ನು ನೋಡೆಂದನು.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್। ಆಚಾರ್ಯಾ**
**ನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂ ಸ್ತಥಾ ॥೨೬॥ ಶ್ವಶುರಾ**
**ನ್ಸುಹೃದಶ್ಚೈವ ಸೇನಯೋರುಭಯೋರಪಿ। ತಾನ್ಸಮೀಕ್ಷ್ಯ ಸ ಕೌಂತೇ**
**ಯಃ ಸರ್ವಾನ್ಬಂಧೂನವಸ್ಥಿತಾನ್ ॥೨೭॥**

ಆಗ ಅರ್ಜುನನು ಎರಡು ಸೈನ್ಯಗಳ ಮಧ್ಯದಲ್ಲಿ ನಿಂತು ಅಲ್ಲಿರುವ ತನ್ನ ಪಿತ್ರಿರದ ಸಂಬಂಧಿಗಳಾದ ತಂದೆ, ತಾತಂದಿರನ್ನೂ ಗುರುಗಳನ್ನೂ ಸೋದರ ಮಾವಂದಿರನ್ನೂ, ಸಹೋದರರರನ್ನೂ, ಸುಹೃದರನ್ನೂ, ಪುತ್ರರನ್ನೂ, ಮೊಮ್ಮಕ್ಕಳನ್ನೂ, ಮಿತ್ರರನ್ನೂ, ಮಾವಂದಿರನ್ನೂ, ಹಿತೈಷಿಗಳನ್ನೂ—(X) ಎಲ್ಲಾ ಬಂಧುವರ್ಗದವರನ್ನೂ ಎರಡು ಸೈನ್ಯಗಳಲ್ಲಿಯೂ ನೋಡಿದನು.

**ಕೃಪಯಾ ಪರಯಾವಿಷ್ಟೋ, ವಿಷೀದನ್ನಿದಮಬ್ರವೀತ್ ॥**

**ಅರ್ಜುನ ಉವಾಚ**

**ದೃಷ್ಟ್ವೇಮಂ ಸ್ವಜನಂ ಕೃಷ್ಣ, ಯುಯುತ್ಸುಂ ಸಮುಪಸ್ಥಿತಮ್।೨೮।**

---

(X) ಭೂರಿಶ್ರವಾದಿಗಳು ತಂದೆಯ ಸಹೋದರರರು. ಆದ್ದರಿಂದ ಅರ್ಜುನನಿಗೆ ತಂದೆಗೆ ಸಮಾನರು; ಭೀಷ್ಮ, ಸೋಮದತ್ತ ಮತ್ತು ಬಾಹ್ಲೀಕ-ಇವರು ತಾತಂದಿರು. ದ್ರೋಣ, ಕೃಪಾಚಾರ್ಯರು—ಗುರುಗಳು. ಪುರುಜಿತ್, ಕುಂತೀಭೋಜ, ಶಲ್ಯ, ಶಕುನಿ, ಮುಂತಾದವರು ಮಾವಂದಿರು; ದುರ್ಯೋಧನಾದಿಗಳು ಸಹೋದರರು; ಅಭಿಮನ್ಯು, ಪ್ರತಿವಿಂಧ್ಯ, ಘಟೋತ್ಕಚ, ಲಕ್ಷ್ಮಣಾದಿಗಳು ಪುತ್ರರು; ಲಕ್ಷ್ಮಣನ ಪುತ್ರರು, ಮೊಮ್ಮಕ್ಕಳು; ಸಮಾನವಯಸ್ಕರಾದ ಅಶ್ವತ್ಥಾಮ, ಜಯದ್ರಥಾದಿಗಳು ಮಿತ್ರರು; ದ್ರುಪದ ಶೈಬ್ಯರು-ಮಾವಂದಿರು. ಕೃತವರ್ಮ ಭಗದತ್ತರು ಸುಹೃದರು; ಪ್ರತಿಉಪಕಾರ ಬಯಸದೆ ಸ್ವಾಭಾವಿಕವಾಗಿಯೇ ಉಪಕಾರಮಾಡುವ ಸ್ವಭಾವದವರನ್ನು ಸುಹೃದರು, ಸದಯ ಹೃದಯರು, ಎನ್ನುತ್ತಾರೆ.

**ಸೀದನ್ತಿ ಮಮ ಗಾತ್ರಾಣಿ, ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥೨೯॥**

ಅತ್ಯಂತ ಕರುಣೆಯಿಂದ ಕೂಡಿದವನಾಗಿ, ವಿಷಾದ (ವ್ಯಸನ) ದಿಂದ ಅರ್ಜುನನು ತನ್ನ ಸಾರಥಿಯಾದ ಶ್ರೀ ಕೃಷ್ಣಪರಮಾತ್ಮನನ್ನು ಕುರಿತು ಹೀಗೆಂದು ನುಡಿದನು – ಹೇ ಶ್ರೀ ಕೃಷ್ಣನೇ ! ಯುದ್ಧಾಪೇಕ್ಷೆಯಿಂದ ಈ ರಣರಂಗದಲ್ಲಿ ಬಂದು ನಿಂತಿರುವ ಈ ನನ್ನ ಸ್ವಜನ ಬಂಧು ಬಾಂಧವರನ್ನು ನೋಡಿ ನನ್ನ ದೇಹ, ಇಂದ್ರಿಯ ಅವಯವಗಳೆಲ್ಲಾ ಶಿಥಿಲವಾಗುತ್ತಿವೆ; ನನ್ನ ಮುಖವು (ಬಾಯಿ) ಒಣಗಿಹೋಗುತ್ತಿದೆ; ಶರೀರದಲ್ಲಿ ಕಂಪವೂ, ರೋಮಾಂಚನವೂ ಆಗುತ್ತಿದೆ.

**ಗಾಂಡೀವಂ ಸಂಸ್ರತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥**

ಗಾಂಡೀವ ಧನಸ್ಸು ನನ್ನ ಕೈಯಿಂದ ಜಾರಿ ಬೀಳುತ್ತಿದೆ. ನನ್ನ ದೇಹದ ಚರ್ಮವೆಲ್ಲಾ ಉರಿಯುತ್ತಿದೆ. ನನ್ನ ಮನಸ್ಸಿಗೂ ಕೂಡ ಭ್ರಮಣೆಯಾಗುತ್ತಲಿದೆ. (ತಲೆಸುತ್ತು ಉಂಟಾದಾಗ ಆಗುವ ಮನೋಭ್ರಮಣೆ ಅಥವಾ ದಿಗ್ಭ್ರಾಂತಿ.) ಇದರಿಂದ ನಾನು ಎದ್ದುನಿಲ್ಲಲೂ ಸಮರ್ಥನಾಗಿಲ್ಲ.

**ನಿಮಿತ್ತಾನಿ ಚ ಪಶ್ಯಾಮಿ, ವಿಪರೀತಾನಿ ಕೇಶವ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನ ಮಾಹವೇ ॥೩೦॥**

ಎಲೈ ಕೃಷ್ಣನೇ ! ಅಲ್ಲದೆ ಅನೇಕ ಅಪಶಕುನಗಳೂ ಕಂಡುಬರುತ್ತಲಿವೆ ಇಷ್ಟೇಅಲ್ಲದೆ, ಯುದ್ಧದಲ್ಲಿ ನನ್ನ ಸ್ವಜನರನ್ನು ಕೊಲ್ಲುವುದರಿಂದ ಯಾವ ವಿಧವಾದ ಶ್ರೇಯಸ್ಸೂ ನನಗೆ ಕಂಡುಬರುವುದಿಲ್ಲ.

**ನ ಕಾಂಕ್ಷೇ ವಿಜಯಂ ಕೃಷ್ಣ, ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನವಾ ॥೩೨॥**

ಹೇ ಕೃಷ್ಣನೇ ! ನಾನು ಜಯವನ್ನು ಅಪೇಕ್ಷಿಸುವುದಿಲ್ಲ. ರಾಜ್ಯವನ್ನಾಗಲೀ, ರಾಜ್ಯದ ಸುಖಭೋಗಗಳನ್ನಾಗಲೀ ಅಪೇಕ್ಷಿಸುವುದಿಲ್ಲ. ಗೋವಿಂದನೇ ! ಈ ರಾಜ್ಯದಿಂದಾಗಲೀ ಭೋಗಗಳಿಂದಾಗಲೀ, ಕೊನೆಗೆ ಜೀವಿತದಿಂದಾಗಲಿ ಏನು ಪ್ರಯೋಜನ ?

(ಇದು ಅರ್ಜುನನ ಮುಮುಕ್ಷುತೆಯನ್ನು ಸೂಚಿಸುತ್ತದೆ.)

**ಯೇಷಾಮರ್ಥೇ ಕಾಂಕ್ಷಿತಂ ನೋ, ರಾಜ್ಯಂ ಭೋಗಾಸ್ಸುಖಾನಿ ಚ**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ||೩೩||**

ಯಾರಿಗೋಸ್ಕರ ಈ ರಾಜ್ಯ, ಭೋಗ, ಸುಖಾದಿಗಳು ನಮಗೆ ಬೇಕಿದ್ದುವೋ, ಅವರೇ ತಮ್ಮ ಧನಾದಿಗಳನ್ನೂ, ಪ್ರಾಣದಮೇಲಿನ ಆಸೆಯನ್ನೂ ಬಿಟ್ಟು ಯುದ್ಧಕ್ಕಾಗಿ ನಿಂತಿರುವರಲ್ಲಾ !

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ । ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ||೩೪|| ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ । ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ||೩೫||**

ಗುರುಗಳೂ, ಪಿತೃಗಳೂ, ಪುತ್ರರೂ, ಹಾಗೆಯೇ ತಾತಂದಿರೂ, ಸೋದರಮಾವಂದಿರೂ, ಮಾವಂದಿರೂ, ಮೊಮ್ಮಕ್ಕಳೂ, ಭಾವಮೈದುಂದಿರೂ, ಆದಿಯಾಗಿ ಇವರೆಲ್ಲರೂ ನನ್ನ ಹತ್ತಿರದ ಸಂಬಂಧಿಗಳೇ ಆಗಿರುವರು. ಇವರು ನನ್ನನ್ನು ಕೊಂದರೂ ಚಿಂತೆಯಿಲ್ಲ. ಅದನ್ನುನಾನು ಸಹಿಸುವೆನು. ಆದರೆ ಇವರನ್ನು ಮಾತ್ರ ನಾನು ಕೊಲ್ಲಲಾರೆ. ಇದು ನನ್ನ ಧೃಢನಿಶ್ಚಯ. ಮೂರು ಲೋಕದ ರಾಜ್ಯ ಪದವಿಯು ಸಿಗುವುದೆಂದರೂ ನಾನು ಇವರನ್ನು ಕೊಲ್ಲಲಾರೆನು. ಅಂದಮೇಲೆ ಕೇವಲ ಸ್ವಲ್ಪ ಭೂಮಿಗಾಗಿ ಕೊಲ್ಲುವೆನೇ !

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ||೩೬||**

ಎಲೈ ಜನಾರ್ದನನೇ! ಧೃತರಾಷ್ಟ್ರನ ಪುತ್ರರಾದ ಈ ದುರ್ಯೋಧನಾದಿಗಳನ್ನು ಕೊಂದರೆ ನಮಗೆ ಯಾವ ಪ್ರಸನ್ನತೆಯುಂಟಾದೀತು? ಈ ಆತತಾಯಿಗಳನ್ನು (X) ಕೊಂದರೆ ನಮಗೆ ಪಾಪವೇ ಉಂಟಾಗುವುದಲ್ಲದೆ ಬೇರೆ ಇನ್ನೇನೂ ಇಲ್ಲ.

---

(X) 1. ಮನೆಗೆ ಬೆಂಕಿಯಿಡುವವನು. 2 ಅನ್ನದಲ್ಲಿ ವಿಷ ಇಡುವವನು. 3. ಕೊಲ್ಲುವುದಕ್ಕಾಗಿ ಶಸ್ತ್ರ ಹಿಡಿದು ನಿಂತಿರುವವನು. 4. ಪರರ ಧನವನ್ನು ಅಪಹರಿಸುವವನು. 5. ಭೂಮಿಯನ್ನು ಅಪಹರಿಸುವವನು. 6. ಪರ ಸ್ತ್ರೀ ಅಪಹಾರ ಮಾಡುವವನು—ಈ ಆರು ಜನಗಳಿಗೂ ಆತತಾಯಿಗಳೆಂದು ಹೇಳುವರು. ದುರ್ಯೋಧನಾದಿಗಳಲ್ಲಿ ಈ ಆರು ಪಾತಕಗಳೂ ಇದ್ದುವು.

**ತಸ್ಮಾನ್ನಾರ್ಹಾ ವಯಂ ಹಂತುಂ, ಧಾರ್ತರಾಷ್ಟ್ರಾನ್ಸ್ವಬಾಂಧವಾನ್।
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥೩೭॥**

ಎಲೈ ಮಾಧವನೇ! ಆದಕಾರಣ ಸ್ವಬಂಧುಗಳಾದ ಧೃತರಾಷ್ಟ್ರನ ಮಕ್ಕಳನ್ನು ನಾವು ಕೊಲ್ಲಬಾರದು. ಸ್ವಜನರನ್ನು ಕೊಂದು ನಾವು ಹೇಗೆ ತಾನೇ ಸುಖಿಗಳಾಗಬಲ್ಲೆವು ?

**ಯದ್ಯಪ್ಯೇತೇ ನ ಪಶ್ಯಂತಿ, ಲೋಭೋಪಹತ ಚೇತಸಃ । ಕುಲಕ್ಷಯ
ಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥೩೮॥ ಕಥಂ ನ
ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್, ಕುಲಕ್ಷಯಕೃತಂ
ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥೩೯॥**

ಹೇ ಜನಾರ್ದನನೇ! ಕಡುಲೋಭದಿಂದ ಆವೃತವಾದ ಮನವುಳ್ಳ ಈ ದುರ್ಯೋಧನಾದಿಗಳು, ಕುಲವನ್ನು ನಾಶಮಾಡುವುದರಿಂದಾಗುವ ಕೆಡು ಕನ್ನೂ, ಮಿತ್ರದ್ರೋಹದಿಂದಾಗುವ ಪಾತಕವನ್ನೂ, ಪಾಪ! ಅರಿಯದಿ ದ್ದಾರೆ. ಆದರೆ ಇದನ್ನು ನಾವು ತಿಳಿದಮೇಲೂ ಈ ಪಾಪಕಾರ್ಯದಿಂದ ಏಕೆ ಹಿಂದಿರುಗಬಾರದು ?

**ಕುಲಕ್ಷಯೇ ಪ್ರಣಶ್ಯಂತಿ, ಕುಲಧರ್ಮಾಃ ಸನಾತನಾಃ ।
ಧರ್ಮೇನಷ್ಟೇಕುಲಂ ಕೃತ್ಸ್ನ, ಮಧರ್ಮೋಽಭಿಭವತ್ಯುತ ॥೪೦॥**

ಕುಲವು ನಾಶವಾದರೆ ಅನಾದಿ ಕಾಲದಿಂದ ಬಂದಿರುವ ಕುಲಧರ್ಮ ಗಳು ನಾಶವಾಗುವುವು. ಧರ್ಮವು ನಾಶವಾಗಲು ಆ ಕುಲವನ್ನು ಸಂಪೂರ್ಣ ವಾಗಿ ಅಧರ್ಮವು ವ್ಯಾಪಿಸುವುದು.

**ಅಧರ್ಮಾಭಿಭವಾತ್ ಕೃಷ್ಣ, ಪ್ರದುಷ್ಯಂತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥೪೧॥**

ಅಧರ್ಮವು ವಿಜೃಂಭಿಸುವದರಿಂದ ಕುಲೀನ ಸ್ತ್ರೀಯರು ಸ್ವೇಚ್ಛಾಚಾ ರಿಣಿಗಳಾಗುವರು. ಇಂತು ನಾರಿಯರು ಕೆಡುವುದರಿಂದ, ವರ್ಣಸಂಕರತೆ ಉಂಟಾಗುವುದು. ವರ್ಣಸಂಕರತೆಯಿಂದ ಸನಾತನ ಕಾಲದಿಂದ ಸಂರಕ್ಷಿಸಿ ಕೊಂಡು ಬಂದಿದ್ದ ಕುಲದ ಪವಿತ್ರತೆಯು (ವರ್ಣಶುದ್ಧಿಯು) ನಷ್ಟವಾಗಿ ಹೋಗುವುದು.

**ಸಂಕರೋ ನರಕಾಯೈವ, ಕುಲಘ್ನಾನಾಂ ಕುಲಸ್ಯ ಚ । ಪತಂತಿ
ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥೪೨॥**

Funding: Tattva Heritage Foundation,Kolkata. Digitization: eGangotri.



ಈ ರೀತಿ ಕುಲವಳಿದ್ದ ಧಾರ್ಮಿಕರೂ ಮತ್ತು ವಯೋವೃದ್ಧರೂ ಆದವರನ್ನು ಕೊಂದು ಕುಲನಾಶಮಾಡುವುದು ಮತ್ತು ವರ್ಣಸಂಕರತೆ ಉಂಟುಮಾಡುವುದು—ಈ ಎರಡು ಪಾತಕಗಳು ನರಕಕ್ಕೆ ಹಾದಿಯಾಗಿರುವುದು. ಏಕೆಂದರೆ, ಕುಲಕ್ಷಯ ಮತ್ತು ವರ್ಣಸಾಂಕರ್ಯಮಾಡಿದವರ ಪಿತೃಗಳಿಗೆ ಮುಂದೆ ಶ್ರಾದ್ಧಾದಿಗಳನ್ನು ಮಾಡುವವರಿಲ್ಲದ ಕಾರಣ ಅವರೆಲ್ಲ ಗತಿಹೀನರಾಗಿ ಪತಿತರಾಗುತ್ತಾರೆ.

**ದೋಷೈರೇತೈಃ ಕುಲಘ್ನಾನಾಂ, ವರ್ಣಸಂಕರ ಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ । ಕುಲಧರ್ಮಾಶ್ಚ ಶಾಶ್ವತಾಃ ॥೪೩॥**

ಕುಲಘಾತಕರು ಮಾಡುವ ವರ್ಣಸಂಕರಕ್ಕೆ ಕಾರಣವಾಗಿರುವ ಈ ಪಾಪದಿಂದ ಬಹುಕಾಲದಿಂದ ಬಂದ ಅವರ ಜಾತಿಧರ್ಮಗಳೂ ಮತ್ತು ಕುಲಧರ್ಮಗಳೂ ನಾಶವಾಗಿ ಹೋಗುತ್ತವೆ.

**ಉತ್ಸನ್ನ ಕುಲಧರ್ಮಾಣಾಂ, ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನು ಶುಶ್ರುಮ ॥೪೪॥**

ಎಲೈ ಜನಾರ್ದನನೇ! ಕುಲಧರ್ಮಗಳೆಲ್ಲಾ ನಾಶವಾದ ವಂಶದಲ್ಲಿ ಹುಟ್ಟಿದ ಮನುಷ್ಯರಿಗೆ ತಪ್ಪದೆ ನರಕವಾಸವಾಗುವುದೆಂದು ದೊಡ್ಡವರಿಂದ ಕೇಳಿರುವೆವು.

**ಅಹೋ ಬತ ಮಹತ್ಪಾಪಂ, ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ, ಸ್ವಜನ ಮುದ್ಯತಾಃ ॥೪೫॥**

ಆಹಾ! ನಾವು ಎಂಥಾ ಮಹಾಪಾಪವನ್ನು ಮಾಡಲು ತೊಡಗಿದ್ದೇವೆ! ರಾಜ್ಯಸುಖದ ಲೋಭದಿಂದ ಸ್ವಜನರನ್ನು ಕೊಲ್ಲಲು ಹೊರಟಿರುವೆವಲ್ಲ!!

**ಯದಿ ಮಾಮಪ್ರತೀಕಾರ, ಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾರಣೇಹನ್ಯು ಸ್ತನ್ಮೇ ಕ್ಷೇಮತರಂ ಭವೇತ್ ॥೪೬॥**

ಶಸ್ತ್ರಧಾರಿಗಳಾದ ದುರ್ಯೋಧನಾದಿಗಳು ಶಸ್ತ್ರಹೀನನಾದ ಮತ್ತು ಅವರಿಗೆ ಪ್ರತಿಯಾಗಿ ಹೊಡೆಯದ ನನ್ನನ್ನು ಈ ಯುದ್ಧಭೂಮಿಯಲ್ಲಿ ಕೊಂದರೂ, ನನಗೆ ಅದು ಕ್ಷೇಮತರವೇ ಆಗುವುದು.

**ಸಂಜಯ ಉವಾಚ**

**ಏವಮುಕ್ತ್ವಾರ್ಜುನಃ ಸಂಖ್ಯೇ, ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನ ಮಾನಸಃ ॥೪೭॥**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನಸಂವಾದೇ
ಅರ್ಜುನವಿಷಾದಯೋಗೋ ನಾಮ
ಪ್ರಥಮೋಽಧ್ಯಾಯಃ

ಸಂಜಯನು ಇಂತೆಂದನು :- ಈ ಪ್ರಕಾರವಾಗಿ ಹೇಳಿ ಅರ್ಜುನನು ಆ ರಣರಂಗದಲ್ಲಿ ಶೋಕಪೀಡಿತನಾಗಿ ಬಾಣ ಬಿಲ್ಲನ್ನು ಬಿಟ್ಟು ರಥದಲ್ಲಿ ಕುಳಿತುಕೊಂಡನು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಅರ್ಜುನ ವಿಷಾದ ಯೋಗವೆಂಬ
ಮೊದಲನೇ ಅಧ್ಯಾಯವು ಸಂಪೂರ್ಣವು.



## ಅಥ ದ್ವಿತೀಯೋಽಧ್ಯಾಯಃ

### (ಸಾಂಖ್ಯಯೋಗಂ)

### ಸಂಜಯ ಉವಾಚ

**ತಂ ತಥಾ ಕೃಪಯಾವಿಷ್ಟ, ಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯ, ಮುವಾಚ ಮಧುಸೂದನಃ ॥೧॥**

ಸಂಜಯನು ಇಂತೆಂದನು-ಈರೀತಿಯಲ್ಲಿ ಕರುಣಾಭರಿತನಾಗಿ, ಕಣ್ಣೀರಿನಿಂದ ತುಂಬಿದ ನೇತ್ರವುಳ್ಳವನಾಗಿ, ದುಃಖಪಡುತ್ತಲಿರುವ ಅರ್ಜುನನನ್ನು ನೋಡಿ ಮಧುವೈರಿಯಾದ ಶ್ರೀ ಕೃಷ್ಣಪರಮಾತ್ಮನು ಈ ಮುಂದೆ ಹೇಳುವ ವಾಕ್ಯಗಳನ್ನು ಹೇಳಿದನು.

### ಶ್ರೀ ಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ, ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯ, ಮಕೀರ್ತಿಕರಮರ್ಜುನ ॥೨॥**

ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀ ಕೃಷ್ಣಪರಮಾತ್ಮನಿಂತೆಂದನು—ಎಲೈ ಅರ್ಜುನನೇ ! ಸತ್ಪುರುಷರುಗಳಿಂದ ಅನಾದರಣೀಯವಾದ, ಸ್ವರ್ಗವನ್ನು ಉಂಟುಮಾಡದ, ಇನ್ನು ಇಲ್ಲಿಯೂ ಕೀರ್ತಿಯನ್ನು ತರದ ಈ ಹೇಡಿತನವು ನಿನಗೆ ಈ ಸಮಯದಲ್ಲಿ ಎಲ್ಲಿಂದ ಬಂತು ?

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ, ನೈತತ್ ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯ ದೌರ್ಬಲ್ಯಂ, ತ್ಯಕ್ತ್ವೋತ್ತಿಷ್ಠ ಪರಂತಪ ॥೩॥**

ಎಲೈ ಪಾರ್ಥನೇ! ನೀನು ನಪುಂಸಕತೆಯನ್ನು ಹೊಂದಬೇಡ. ನಿನ್ನಂತಹ ಶೂರವೀರನಿಗೆ ಇದು ಯುಕ್ತವಲ್ಲ. ಎಲೈ ಪರಂತಪನೇ! ಕ್ಷುದ್ರವಾದ ಈ ಹೃದಯದೌರ್ಬಲ್ಯವನ್ನು ಬಿಟ್ಟು ಯುದ್ಧಕ್ಕಾಗಿ ಏಳು.

**ಅರ್ಜುನ ಉವಾಚ**

**ಕಥಂ ಭೀಷ್ಮಮಹಂ ಸಂಖ್ಯೇ, ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ, ಪೂಜಾರ್ಹಾವರಿಸೂದನ ॥೪॥**

ಅರ್ಜುನನಿಂತೆಂದನು:—ಎಲೈ ಮಧುಸೂದನನೇ! ಶತ್ರುನಾಶಕನೇ! ಪೂಜಾಯೋಗ್ಯರಾದ ಈ ಭೀಷ್ಮರನ್ನೂ, ದ್ರೋಣಾಚಾರ್ಯರನ್ನೂ ಯುದ್ಧಭೂಮಿಯಲ್ಲಿ ನಿಂತು ಬಾಣಗಳಿಂದ ಹೇಗೆ ಹೊಡೆಯಲಿ?

**ಗುರೂನಹತ್ವಾ ಹಿ ಮಹಾನುಭಾವಾನ್, ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ । ಹತ್ವಾರ್ಥಕಾಮಾಂಸ್ತು ಗುರೂನಿಹೈವ, ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥೫॥**

ಮಹಾನುಭಾವರಾದ ಆಚಾರ್ಯರನ್ನು ವಧಿಸುವುದಕ್ಕಿಂತಲೂ ಇಹಲೋಕದಲ್ಲಿ ಭಿಕ್ಷಾಜೀವನವೇ ಶ್ರೇಯಸ್ಕರವಾದುದು. ಏಕೆಂದರೆ–ಪೂಜಾರ್ಹರಾದ ಆಚಾರ್ಯರನ್ನು ಕೊಂದಮೇಲೂ ಪರಲೋಕದಲ್ಲಿ ನರಕಪ್ರಾಪ್ತಿಯಾಗುವುದಲ್ಲದೆ ಈ ಲೋಕದಲ್ಲಿ ಅವರ ರಕ್ತದಿಂದ ತೋಯ್ದ ಅರ್ಥಕಾಮಾದಿ ಭೋಗಗಳನ್ನೇ ಅನುಭವಿಸಬೇಕಾಗುತ್ತದೆ.

[ಇದಕ್ಕಿಂತ ಇನ್ನೇನೂ ವಿಶೇಷವಿಲ್ಲ, ಇಷ್ಟುಮಾತ್ರಕ್ಕೆ ಇವರನ್ನು ಕೊಲ್ಲಲೇ?]

**ನ ಚೈತದ್ವಿದ್ಮಃ ಕತರನ್ನೋ ಗರೀಯೋ, ಯದ್ವಾ ಜಯೇಮ ಯದಿ ವಾ ನೋ ಜಯೇಯುಃ । ಯಾನೇವ ಹತ್ವಾ ನ ಜಿಜೀವಿಷಾಮ, ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥೬॥**

ಹೇ ಕೃಷ್ಣ! ಕ್ಷಾತ್ರಧರ್ಮವಾದ ಯುದ್ಧವು ಶ್ರೇಯಸ್ಕರವೆ ಅಥವಾ ಗುರುಹಿಂಸಾರೂಪವಾದ ಯುದ್ಧದಿಂದ ವಿಮುಖನಾಗುವುದು ಶ್ರೇಷ್ಠವೇ—ಇದನ್ನೂ ನಾನರಿಯೆ. ಮತ್ತು ಈ ಯುದ್ಧದಲ್ಲಿ ನಾವೇ ಅವರನ್ನು ಜಯಿಸುವೆವೋ ಅಥವಾ ಅವರೇ ನಮ್ಮನ್ನು ಜಯಿಸುವರೋ, ಇದೂ ಹೇಳಲಾಗುವು

ದಿಲ್ಲ. ಇದೂ ಅಲ್ಲದೆ ನಮಗೆ ಜಯವಾದರೂ, ಅಪಜಯವಾದಂತೆಯೇ ಆಗುವುದು. ಯಾರನ್ನು ಕೊಂದು ನಾವು ಜೀವಿಸಲಾರೆವೋ, ಅಂತಹ ಬಂಧುಗಳಾದ ದುರ್ಯೋಧನಾದಿಗಳೇ ಎದುರಿನಲ್ಲಿ ನಿಂತಿರುವರು.

**ಕಾರ್ಪಣ್ಯದೋಷೋಪಹತಸ್ವಭಾವಃ, ಪೃಚ್ಛಾಮಿತ್ವಾಂ ಧರ್ಮಸಂ ಮೂಢಚೇತಾಃ । ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ, ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥೭॥**

ಹೇ ಶ್ರೀ ಕೃಷ್ಣನೇ! ಈ ಯುದ್ಧದಲ್ಲಿ ಗುರು ಬಂಧು ಮಿತ್ರಾದಿಗಳ ವಿಯೋಗವನ್ನು ಸಹಿಸಲಾರದ ನಾನು ಕೃಪಣತೆ ಎಂಬ ದೋಷದಿಂದ ಕಂಗೆಟ್ಟವನಾಗಿದ್ದೇನೆ. ಆದಕಾರಣ ಧರ್ಮಾಧರ್ಮಗಳ ನಿರ್ಣಯ ಮಾಡುವುದರಲ್ಲಿ ನನ್ನ ಮನಸ್ಸು ಅಸಮರ್ಥವಾಗಿದೆ. ನನಗೆ ದಿಕ್ಕು ತೋಚದಂತಾಗಿದೆ. ಆದ್ದರಿಂದ ನಾನು ನಿನಗೆ ಶರಣಾಗತನಾಗಿ ಬಂದಿದ್ದೇನೆ. ಆದ್ದರಿಂದ ನನ್ನನ್ನು ನಿನ್ನ ಶಿಷ್ಯನನ್ನಾಗಿ ಸ್ವೀಕರಿಸಿ, ಯಾವುದು ನನಗೆ ಶ್ರೇಯಸ್ಕರವೋ ಅದನ್ನು ಚೆನ್ನಾಗಿ ನಿಶ್ಚಯಿಸಿ, ಸ್ಪಷ್ಟವಾದ ರೀತಿಯಲ್ಲಿ, (ನಿಶ್ಚಯಾತ್ಮಿಕ ವಾಣಿಯಿಂದ) ಉಪದೇಶಿಸು.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ, ದ್ಯಚ್ಛೋಕಮುಚ್ಛೋಷಣ ಮಿಂದ್ರಿಯಾಣಾಮ್ । ಅವಾಪ್ಯ ಭೂಮಾವಸಪತ್ನಮೃದ್ಧಂ, ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥೮॥**

ಈಗ ನನ್ನ ಇಂದ್ರಿಯಗಳನ್ನು ಸಂತಾಪ ಪಡಿಸುವಂತಹ ಯಾವ ತಾಪ ಉಂಟೋ ಅದನ್ನು ಹೋಗಲಾಡಿಸಲು, ನಿಷ್ಕಂಟಕವಾದ ಮತ್ತು ಧನಧಾನ್ಯಗಳಿಂದ ಸಮೃದ್ಧವಾದ ಸಮಸ್ತ ಭೂಮಂಡಲದ ಆಧಿಪತ್ಯವು ಸಿಕ್ಕಿದರೂ ಮತ್ತು ಇಂದ್ರಪದವಿಯು ದೊರೆತರೂ ಆಗುವುದಿಲ್ಲ.

**ಸಂಜಯ ಉವಾಚ**

**ಏವಮುಕ್ತ್ವಾ ಹೃಷೀಕೇಶಂ, ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದ, (x)ಮುಕ್ತ್ವಾ ತೂಷ್ಣೀಂ ಬಭೂವ ಹ॥**

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೀಗೆಂದನು—ಎಲೈ ಧೃತ

(x) ಗೋವಿಂದಃ—"ಗೋಭಿರ್ವೇದಾಂತವಾಕ್ಯೈ ರೇವ ವಿಂದತೇ ಲಕ್ಷ್ಯತೇ ಇತಿ ಗೋವಿಂದಃ" ಅಂದರೆ ವೇದಾಂತದ ತತ್ವಮಸ್ಯಾದಿ ಮಹಾವಾಕ್ಯಗಳ ಲಕ್ಷಣಾವೃತ್ತಿಯಿಂದಲೇ ಅರಿಯಲ್ಪಡುವವನು ಯಾರೋ ಅವನು ಗೋವಿಂದ.

ರಾಷ್ಟ್ರನೇ! ಶತ್ರುಗಳಿಗೆ ಸಂತಾಪಕರನೂ, ಜಿತನಿದ್ರನೂ ಆದ ಅರ್ಜುನನು ಹೃಷೀಕೇಶನಾದ ಶ್ರೀ ಕೃಷ್ಣಭಗವಂತನನ್ನು ಕುರಿತು ತಾನು ಯುದ್ಧಮಾಡುವು ದಿಲ್ಲವೆಂಬುದಾಗಿ ಹೇಳಿ ಮೌನದಿಂದ ಕುಳಿತನು.

**ತಮುವಾಚ ಹೃಷೀಕೇಶಃ, ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ, ವಿಷೀದಂತಮಿದಂ ವಚಃ ॥೧೦॥**

ಎರಡು ಸೇನೆಗಳ ಮಧ್ಯದಲ್ಲಿ ವಿಷಾದಗ್ರಸ್ತನಾದ ಅರ್ಜುನನನ್ನು ಕುರಿತು ಶ್ರೀ ಕೃಷ್ಣನು ಪರಿಹಾಸಮಾಡುವವನಂತೆ ಮಾಡಿ, ಮುಂದೆ ಹೇಳುವ ಮಾತುಗಳನ್ನು ಹೇಳಿದನು. [ಗೀತೋಪದೇಶವು ಇಲ್ಲಿಂದ ಪ್ರಾರಂಭವಾಗಿದೆ.]

**ಶ್ರೀ ಭಗವಾನುವಾಚ**

**ಅಶೋಚ್ಯಾನನ್ವಶೋಚಸ್ತ್ವಂ, ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾ ಸೂನಗತಾಸೂಂಶ್ಚ, ನಾನು ಶೋಚಂತಿ ಪಂಡಿತಾಃ ॥೧೧॥**

ಅರ್ಜುನನನ್ನು ಕುರಿತು ಶ್ರೀ ಕೃಷ್ಣಭಗವಂತನು ಹೀಗೆಂದು ಹೇಳ ತೊಡಗಿದನು:—ಶೋಕಿಸಲು ಯೋಗ್ಯರಲ್ಲದ ಭೀಷ್ಮ ದ್ರೋಣಾದಿಗಳನ್ನು ಕುರಿತು ಶೋಕಿಸುತ್ತಿರುವೆ. ಆದರೆ ಮಾತುಗಳನ್ನು ಮಾತ್ರ ಪಂಡಿತರಂತೆ ಆಡುತ್ತಿರುವೆ. ಪಂಡಿತರಾದ ಜ್ಞಾನಿಗಳಾದರೋ ಸತ್ತವರಿಗಾಗಲಿ, ಬದುಕಿರು ವವರಿಗಾಗಲಿ ಸ್ವಲ್ಪವೂ ದುಃಖಿಸುವುದಿಲ್ಲ.

(ಪಂಡಾ ಎಂದರೆ ಜ್ಞಾನ. ಜ್ಞಾನವನ್ನು ಪಡೆದವರು ಮಾತ್ರ ಪಂಡಿತರು.)

**ನ ತ್ವೇವಾಹಂ ಜಾತು ನಾಸಂ, ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ, ಸರ್ವೇ ವಯಮತಃ ಪರಮ್ ॥೧೨॥**

ಈ ದೇಹೋತ್ಪತ್ತಿಗೆ ಪೂರ್ವ ನಾನು ಇಲ್ಲದೆ ಇರಲಿಲ್ಲ, ಅಂದರೆ ಇದ್ದೆನು. ಹಾಗೆಯೇ ಈ ರಾಜರುಗಳೂ ಮತ್ತು ನೀನೂ ಇರಲಿಲ್ಲವೆಂಬುವುದಿಲ್ಲ. ನೀವೆ ಲ್ಲರೂ ಈ ವರ್ತಮಾನ ದೇಹಕ್ಕಿಂತ ಪೂರ್ವದಲ್ಲಿಯೂ ಇದ್ದಿರಿ. ಮತ್ತು ಈ ದೇಹ ನಾಶವಾದಮೇಲೆ ನಾವುಗಳು ಇರುವುದಿಲ್ಲವೆಂಬುದೂ ಸರಿಯಲ್ಲ. (ಅಂದರೆ, ನಾವೆಲ್ಲರೂ ಈ ದೇಹ ಬರುವ ಮೊದಲು ಇದ್ದೆವು. ಈಗಲಂತೂ ಇದ್ದೇವೆ. ಇನ್ನು ಈ ದೇಹಾನಂತರವೂ ಇರುವವರಾಗಿಯೇ ಇದ್ದೇವೆ. ಇದರಿಂದ ನಾವು ಯಾವಾಗಲೂ ಇರುವವರಾಗಿಯೇ ಇದ್ದೇವೆ. ಕಾರಣ, ಆತ್ಮನು ನಿತ್ಯನು, ನಾಶರಹಿತನು.)

**ದೇಹಿನೋಽಸ್ಮಿನ್ ಯಥಾ ದೇಹೇ, ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿ, ರ್ಧೀರಸ್ತತ್ರ ನ ಮುಹ್ಯತಿ ॥೧೩॥**

ದೇಹಿಯಾದ ಜೀವನಿಗೆ ಈ ದೇಹದಲ್ಲಿ ಬಾಲ್ಯ, ಯೌವನ, ವೃದ್ಧಾಪ್ಯ ಗಳೆಂಬೀ ಅವಸ್ಥೆಗಳು ಹೇಗೆ ಕ್ರಮವಾಗಿ ಉಂಟಾಗುವುವೋ, ಹಾಗೆಯೇ ಈ ದೇಹಿಗೆ ಅನ್ಯದೇಹದ ಪ್ರಾಪ್ತಿಯೂ ಆಗುವುದು. ತತ್ವವನ್ನು ತಿಳಿದ ಧೀರ ಪುರುಷರು ಇದಕ್ಕಾಗಿ ದುಃಖಿಸುವುದಿಲ್ಲ.

ಬಾಲ್ಯಾವಸ್ಥಾದಿ ಸ್ಥೂಲದೇಹದ ವಿಕಾರಗಳು ಅಜ್ಞಾನದಿಂದ ಆತ್ಮನಲ್ಲಿ ಕಂಡುಬರುತ್ತದೆ. ಇದರಂತೆಯೇ ಒಂದು ದೇಹದಿಂದ ದೇಹಾಂತರ ಪ್ರಾಪ್ತಿ ಎಂಬ ಸೂಕ್ಷ್ಮ ಶರೀರದ (ಗಮನಾಗಮನ ರೂಪ) ವಿಕಾರವೂ ಅಜ್ಞಾನ ದಿಂದಲೇ ಆತ್ಮನಲ್ಲಿ ಭಾಸವಾಗುತ್ತಿದೆಯೆಂದು ತತ್ವಜ್ಞನು ತಿಳಿದು, ಈ ದೇಹ ಗಳ ವಿಚಾರದಲ್ಲಿ ಮೋಹಿತನಾಗುವುದಿಲ್ಲ. (ದುಃಖಿಸುವುದಿಲ್ಲ.)

**ಮಾತ್ರಾಸ್ಪರ್ಶಾಸ್ತು ಕೌಂತೇಯ, ಶೀತೋಷ್ಣ ಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾ, ಸ್ತಾಂ ಸ್ತಿತಿಕ್ಷಸ್ವ ಭಾರತ ॥೧೪॥**

ಎಲೈ ಕುಂತೀ ಪುತ್ರನೇ! ಇಂದ್ರಿಯ ಮತ್ತು ವಿಷಯಗಳ ಸಂಬಂಧ ದಿಂದ ಶೀತೋಷ್ಣ, ಸುಖದುಃಖಗಳು ಉಂಟಾಗುತ್ತವೆ. ಈ ಸಂಯೋಗ ವಿಯೋಗಗಳೆರಡೂ ಉತ್ಪತ್ತಿ ವಿನಾಶಗಳಿಂದ ಕೂಡಿರುವುದರಿಂದ ಅನಿತ್ಯ ವಾದುವು. ಆದುದರಿಂದ ಅವುಗಳನ್ನು ನೀನು ಸಹಿಸು.

(ಮಾತ್ರಾ–ಇಂದ್ರಿಯಗಳು. ಸ್ಪರ್ಶ–ಶಬ್ದಾದಿ ವಿಷಯಗಳು. ಇವೆರ ಡರ ಸಂಬಂಧವೇ ಮಾತ್ರಾಸ್ಪರ್ಶ.)

**ಯಂ ಹಿ ನ ವ್ಯಥಯಂತ್ಯೇತೇ, ಪುರುಷಂ ಪುರುಷರ್ಷಭ ।**
**ಸಮದುಃಖ ಸುಖಂ ಧೀರಂ, ಸೋಽಮೃತತ್ವಾಯ ಕಲ್ಪತೇ ॥೧೫॥**

ಎಲೈ ಪುರುಷಶ್ರೇಷ್ಠನಾದ ಅರ್ಜುನನೇ! ಯಾರಿಗೆ ಸುಖದುಃಖಗಳು ಸಮಾನವಾಗಿರುವುವೋ ಮತ್ತು ಯಾರಿಗೆ ಈ ಮಾತ್ರಾಸ್ಪರ್ಶಗಳು ವ್ಯಥೆ ಯನ್ನು ಉಂಟುಮಾಡದೆ ಇರುವುವೋ, ಆ ಧೀರನು ಮೋಕ್ಷವನ್ನು ಹೊಂದು ವುದಕ್ಕೆ ಯೋಗ್ಯನು.

**ನಾಸತೋ ವಿದ್ಯತೇ ಭಾವೋ, ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತ, ಸ್ತ್ವನಯೋ ಸ್ತತ್ತ್ವದರ್ಶಿಭಿಃ ॥೧೬॥**

ಇಲ್ಲದ ವಸ್ತುವಿಗೆ (ಅಸದ್ವಸ್ತುವಿಗೆ) ಇರುವಿಕೆ (ವಿದ್ಯಮಾನ, ಸತ್) ಸಂಭವಿಸುವುದಿಲ್ಲ. (ಸದಾ) ಇರುವ ವಸ್ತುವಿಗೆ (ಸದ್ವಸ್ತುವಿಗೆ) ಎಂದಿಗೂ ಅಭಾವ (ಇಲ್ಲದಿರುವಿಕೆ) ಸಂಭವಿಸುವುದಿಲ್ಲ. (X) ಸತ್ತು, ಅಸತ್ತುಗಳೆರಡರ ಮರ್ಯಾದೆಯನ್ನು ಅಂದರೆ ನಿಯಮವನ್ನು (ಸ್ವರೂಪವನ್ನು) ತತ್ವದರ್ಶಿಗಳಾದ ಜ್ಞಾನಿಗಳು ತಿಳಿದಿರುವರು.

ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತುಪರಿಚ್ಛೇದವೆಂದು ಮೂರು ವಿಧದ ಪರಿಚ್ಛೇದವುಳ್ಳ ವಸ್ತುವು ಅಸತ್ತೆಂದು ಹೇಳಿಸಿಕೊಳ್ಳುವುದು. ಇಂತ ಹವು ಘಟಪಟಾದಿ ಅನಾತ್ಮವಸ್ತುಗಳಾಗಿವೆ. ಯಾವ ವಸ್ತುವು ಕಾಲಕೃತ ಪರಿಚ್ಛೇದವುಳ್ಳದ್ದೋ ಅದು ದೇಶಕೃತ ಮತ್ತು ವಸ್ತುಕೃತ ಪರಿಚ್ಛೇದವುಳ್ಳದ್ದಾ ಆಗಿ ಸಕಲ ಅನಾತ್ಮ ಪದಾರ್ಥಗಳೂ ಅಸತ್ ಎಂದೇ ನಿಶ್ಚಯಿಸಲು ಬರುವುದು. ಅಂದರೆ, ತ್ರಿಪರಿಚ್ಛೇದಗಳುಳ್ಳ ಸಕಲ ಪ್ರಪಂಚಕ್ಕೆ ಸತ್ತಾ ರೂಪ ಭಾವ ಸಂಭವಿಸುವುದಿಲ್ಲ.

ಈ ಪ್ರಕರಣದಲ್ಲಿ "ಸತ್ತಾ" ಎಂಬ ಪದದಿಂದ ತ್ರಿಪರಿಚ್ಛೇದರಹಿತನಾದ ಪಾರಮಾರ್ಥಿಕತ್ವವನ್ನು ಗ್ರಹಿಸಬೇಕು.

ಅನಾತ್ಮರೂಪವಾದ ದೃಶ್ಯವೆಲ್ಲವೂ ಸರ್ವತ್ರ ಅನುಗತವಾಗಿಲ್ಲ. ಆದ್ದರಿಂದ ಯಾವುದಾದರೊಂದು ಕಾಲದಲ್ಲಾಗಲಿ ದೇಶದಲ್ಲಾಗಲಿ ವಸ್ತುವಿನಲ್ಲಾಗಲಿ ಈ ಪ್ರಪಂಚಕ್ಕೆ ನಿಷೇಧವೇ ಇರುವುದು. ಹೇಗೆಂದರೆ—ಘಟಕ್ಕೆ ತನ್ನ ಉತ್ಪತ್ತಿಗಿಂತ ಪೂರ್ವಕಾಲದಲ್ಲಿಯೂ, ನಾಶಾನಂತರದಲ್ಲಿಯೂ, ತನ್ನ ಅಧಿಕರಣವನ್ನು ಬಿಟ್ಟು ಎಲ್ಲಾ ದೇಶದಲ್ಲಿಯೂ ಮತ್ತು ಪಟಾದಿ ವಸ್ತುಗಳಲ್ಲಿಯೂ ಘಟವಿಲ್ಲವೆಂಬ ನಿಷೇಧವೇ ಇರುವುದು. ಸದ್ವಸ್ತುವಾದರೋ ಸರ್ವತ್ರ ಅನುಗತವಾಗಿರುವುದರಿಂದ ಅದಕ್ಕೆ ಯಾವ ಕಾಲದಲ್ಲಿಯೂ ಯಾವ ದೇಶದಲ್ಲಿಯೂ ಮತ್ತು ಯಾವ ವಸ್ತುವಿನಲ್ಲಿಯೂ ಎಂದಿಗೂ ನಿಷೇಧವಾಗುವುದಿಲ್ಲ. (ಹೇಗೆಂದರೆ:—"ಘಟವಿದೆ, ಪಟವಿದೆ" ಎಂಬುವಲ್ಲಿ "ಇದೆ, ಇದೆ" ಎಂಬುದು ಅಂದರೆ "ಸತ್" ಎಂಬುದು ಸರ್ವ ಪದಾರ್ಥಗಳಲ್ಲಿ ಅನುಗತವಾಗಿ ತೋರುತ್ತಿರುವುದು ಮತ್ತು ಘಟ ಪಟವಲ್ಲ, ಪಟ ಘಟವಲ್ಲ, ಹೀಗೆಂದು ಘಟಪಟಾದಿ ಪದಾರ್ಥಗಳು ಪರಸ್ಪರ ವ್ಯಭಿಚಾರಿಯಾಗಿರುವುದರಿಂದ ಅನನುಗತವಾಗಿರು

(X) ದೇಶ, ಕಾಲ, ವಸ್ತು ಎಂಬ ತ್ರಿವಿಧ ಪರಿಚ್ಛೇದವಿಲ್ಲದ್ದು ಸದ್ವಸ್ತು. ಅದು ಉಳ್ಳದ್ದು, ಅಸದ್ವಸ್ತು.

ವುವು. ಈ ಕಾರಣದಿಂದ ಅನನುಗತವಾದ ಈ ಘಟಪಟಾದಿ ಪ್ರಸಂಗತ್ವ ಅನುಗತವಾದ ಸದ್ವಸ್ತುವಿನಲ್ಲಿ ಕಲ್ಪಿತವೆನಿಸುವುದು.) ಇಂತು ಅಸದ್ವಸ್ತುವಿಗೆ ಇರುವಿಕೆ ಸಂಭವಿಸುವುದಿಲ್ಲ, ಸದ್ವಸ್ತುವಿಗೆ ಇಲ್ಲದಿರುವಿಕೆ ಸಂಭವಿಸುವುದಿಲ್ಲ.

**ಅವಿನಾಶಿ ತು ತದ್ವಿದ್ಧಿ, ಯೇನ ಸರ್ವಮಿದಂತ ತಮ್ ।**
**ವಿನಾಶಮವ್ಯಯಸ್ಯಾಸ್ಯ, ನ ಕಶ್ಚಿತ್ ಕರ್ತುಮರ್ಹತಿ ॥೧೭॥**

ಯಾವ ಆತ್ಮನಿಂದ ಈ ಸಮಸ್ತ ಜಗತ್ತು ವ್ಯಾಪಿಸಲ್ಪಟ್ಟಿರುವುದೋ, ಆ ಸದ್ವಸ್ತುವು ನಾಶವಾಗತಕ್ಕದ್ದಲ್ಲವೆಂದು ತಿಳಿಯುವನಾಗು. ಸದ್ವಸ್ತುವನ್ನು ಯಾರಿಗೂ ನಾಶಮಾಡಲು ಆಗುವುದಿಲ್ಲ.

ಸರ್ವದೇಶ, ಕಾಲ, ವಸ್ತು, ಅವಸ್ಥೆ ಅಥವಾ ಪರಿಸ್ಥಿತಿಯಲ್ಲೂ ಒಂದೇ ಸಮನಾಗಿದ್ದು, ಪರಿಣಾಮಹೊಂದದೆ (ವಿಕೃತವಾಗದೆ) ಇರುವುದು, ಸದ್ವಸ್ತುವಿನ ಧರ್ಮ. ಆದ್ದರಿಂದ ಇದನ್ನು ಯಾರೂ ನಾಶಮಾಡಲಾರರು. ಇದಕ್ಕೆ ವಿರುದ್ಧ ಧರ್ಮವುಳ್ಳದ್ದೇ ಅಸದ್ವಸ್ತು ಎಂದು ತಿಳಿಯಬೇಕು.

**ಅಂತವಂತ ಇಮೇ ದೇಹಾ, ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ, ತಸ್ಮಾದ್ಯುಧ್ಯಸ್ವ ಭಾರತ ॥೧೮॥**

ಎಲೈ ಭಾರತನೇ! ನಿತ್ಯನೂ, ನಾಶರಹಿತನೂ, ಅಪ್ರಮೇಯನೂ (ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಅವಿಷಯನೂ) ಆದ ಈ ಆತ್ಮನ ಎಲ್ಲಾ ಶರೀರಗಳೂ ನಾಶವುಳ್ಳವುಗಳಾಗಿಯೇ ಇರುವುದರಿಂದ, ಇವುಗಳಿಗಾಗಿ ದುಃಖಿಸದೆ, ನಿನ್ನ ಸ್ವಧರ್ಮರೂಪವಾದ ಯುದ್ಧವನ್ನು ಮಾಡು.

**ಯ ಏನಂ ವೇತ್ತಿ ಹಂತಾರಂ, ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ, ನಾಯಂಹಂತಿ ನ ಹನ್ಯತೇ ॥೧೯॥**

ಈ ಆತ್ಮನು ಮತ್ತೊಬ್ಬರನ್ನು ಕೊಲ್ಲುವವನೆಂದೂ ಮತ್ತು ಅನ್ಯರಿಂದ ಕೊಲ್ಲಲ್ಪಡತಕ್ಕವನೆಂದೂ ಯಾರು ತಿಳಿದಿರುವರೋ, ಅವರಿಬ್ಬರೂ ಆತ್ಮನ ಯಥಾರ್ಥಸ್ವರೂಪವನ್ನು ತಿಳಿದವರಲ್ಲ. ಏತಕ್ಕೆಂದರೆ—ಈ ಆತ್ಮನು ಕೊಲ್ಲುವವನೂ ಅಲ್ಲ, ಕೊಲ್ಲಲ್ಪಡತಕ್ಕವನೂ ಅಲ್ಲ.

**ನ ಜಾಯತೇ ಮ್ರಿಯತೇ ವಾ ಕದಾಚಿ, ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ । ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ,**
**ನ ಹನ್ಯತೇ ಹನ್ಯಮಾನೇ ಶರೀರೇ ॥೨೦॥**

ಈ ಆತ್ಮನು ಹುಟ್ಟುವುದಿಲ್ಲ; ಸಾಯುವುದಿಲ್ಲ. ಮತ್ತು ಈ ಆತ್ಮನು ಹಿಂದೆ ಯಾವಾಗಲಾದರೂ ಇಲ್ಲದೆ ಹೋಗಿ ಪುನಃ ಉತ್ಪತ್ತಿಯಂ ಪಡೆದವನಲ್ಲ. ಇವನು ಅಜನು (ಜನ್ಮರಹಿತನು,) ನಿತ್ಯನು, ಶಾಶ್ವತನು, ಮತ್ತು ಅನಾದಿಕಾಲದಿಂದ ಇರುವವನು. ಅದರಿಂದಲೇ ಶರೀರವು ನಾಶವಾದರೂ ಇವನು ನಾಶವಾಗುವುದಿಲ್ಲ.

**ವೇದಾವಿನಾಶಿನಂ ನಿತ್ಯಂ, ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ, ಕಂ ಘಾತಯತಿ ಹಂತಿ ಕಮ್ ॥೨೧॥**

ಯಾವ ಪುರುಷನು ಈ ಆತ್ಮನನ್ನು ನಾಶರಹಿತನೆಂದೂ, ನಿತ್ಯನೆಂದೂ, ಜನ್ಮರಹಿತನೆಂದೂ, ಕ್ಷಯರಹಿತನೆಂದೂ ತಿಳಿದಿರುವನೋ, ಅವನು ಯಾರನ್ನು ಹ್ಯಾಗೆ ಕೊಲ್ಲಿಸುವನು? ಮತ್ತು ಹೇಗೆ ಯಾರನ್ನು ಕೊಲ್ಲುವನು? (ಅಂದರೆ) ತಾನು ಕೊಲ್ಲುವುದೂ ಇಲ್ಲ; ಕೊಲ್ಲಿಸುವುದೂ ಇಲ್ಲ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ, ನವಾನಿ ಗೃಹ್ಣಾತಿ ನರೋಽಪರಾಣಿ । ತಥಾ ಶರೀರಾಣಿ ವಿಹಾಯ ಜೀರ್ಣಾ, ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥**

ಮನುಷ್ಯನು ಹೇಗೆ ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಧರಿಸುವನೋ, ಹಾಗೆಯೇ ದೇಹಿಯಾದ ಈ ಆತ್ಮನು ಜೀರ್ಣ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಪಡೆಯುತ್ತಾನೆ

**ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ, ನ ಶೋಷಯತಿ ಮಾರುತಃ ॥೨೩॥**

ಈ ಆತ್ಮನನ್ನು ಖಡ್ಗಾದಿ ಶಸ್ತ್ರಗಳು ಛೇದಿಸಲಾರವು. ಅಗ್ನಿಯೂ ಇದನ್ನು ಸುಡುವುದಿಲ್ಲ. ನೀರೂ ಇದನ್ನು ನೆನೆಯಿಸಲಾರದು ಮತ್ತು ವಾಯುವು ಒಣಗಿಸಲಾರದು.

**ಅಚ್ಛೇದ್ಯೋಽಯಮದಾಹ್ಯೋಽಯ, ಮಕ್ಲೇದ್ಯೋಽಶೋಷ್ಯ ಏವ ಚ । ನಿತ್ಯಃ ಸರ್ವಗತಃ ಸ್ಥಾಣು, ರಚಲೋಽಯಂ ಸನಾತನಃ ॥೨೪॥**

ಈ ಆತ್ಮನು ಎಂತಹವನೆಂದರೆ—ಅಚ್ಛೇದ್ಯನು (ಕತ್ತರಿಸುವುದಕ್ಕೆ ಆಗದವನು,) ಅದಾಹ್ಯನು (ಸುಡಲು ಆಗದವನು,) ಅಕ್ಲೇದ್ಯನು (ನೀರಿನಿಂದ ಒದ್ದೆ ಮಾಡಲಾಗದವನು,) ಅಶೋಷ್ಯನು (ಗಾಳಿಯಿಂದ ಒಣಗದವನು.)

ಹೀಗಿರುವುದರಿಂದ ಇವನು ನಿತ್ಯನು, ಸರ್ವವ್ಯಾಪಕನೂ, ಸ್ಥಿರನಾಗಿರುವವನೂ, ಅಚಲನೂ, ಸನಾತನನೂ ಆಗಿರುತ್ತಾನೆ.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ।**
**ತಸ್ಮಾದೇವಂ ವಿದಿತ್ವೈನಂ, ನಾನುಶೋಚಿತುಮರ್ಹಸಿ ॥೨೫॥**

ಈ ಆತ್ಮನು, ಅವ್ಯಕ್ತನು, ಅಂದರೆ ಇಂದ್ರಿಯಗಳಿಗೆ ಅಗೋಚರನು; ಅಚಿಂತ್ಯನು, ಅಂದರೆ, ಮನಸ್ಸಿಗೆ ಅವಿಷಯನು; ಮತ್ತು ವಿಕಾರರಹಿತನು ಎಂದು ಹೇಳಲ್ಪಟ್ಟದೆ. ಆದ್ದರಿಂದ ನೀನು ಈ ಆತ್ಮನನ್ನು ಈ ಪ್ರಕಾರವಾಗಿ ತಿಳಿದು ದುಃಖಿಸುವುದು ಯುಕ್ತವಲ್ಲ.

(ಹೀಗೆ ತಿಳಿಯದಿರುವುದರಿಂದಲೇ ನೀನು ದುಃಖಿಸುತ್ತಿರುವೆ.)

**ಅಥ ಚೈನಂ ನಿತ್ಯಜಾತಂ, ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ, ನೈವಂ ಶೋಚಿತುಮರ್ಹಸಿ ॥೨೬॥**

ಎಲೈ ಮಹಾಬಾಹುವಾದ ಅರ್ಜುನನೇ—ಒಂದುವೇಳೆ ನೀನು ಸದಾ ಈ ಆತ್ಮನನ್ನು ಶರೀರದೊಂದಿಗೆ ಹುಟ್ಟುವನೆಂತಲೂ, ಮತ್ತು ಶರೀರದ ನಾಶದೊಂದಿಗೆ ನಾಶವಾಗುವನೆಂತಲೂ ಅಂಗೀಕರಿಸಿದಾಗ್ಯೂ, ಶೋಕಿಸುವುದು ಸರಿಯಲ್ಲ.

**ಜಾತಸ್ಯ ಹಿ ಧ್ರುವೋ ಮೃತ್ಯು, ರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದ ಪರಿಹಾರ್ಯೇಽರ್ಥೇ, ನ ತ್ವಂ ಶೋಚಿತುಮರ್ಹಸಿ ॥೨೭॥**

ಏತಕ್ಕೆಂದರೆ—ಹುಟ್ಟಿದವನಿಗೆ ಸಾವೂ, ಸತ್ತವನಿಗೆ ಪುನಃ ಜನ್ಮವೂ ತಪ್ಪದೆ ಆಗುತ್ತದೆ. ಆದುದರಿಂದ ತಪ್ಪಿಸಲಾಗದ ಈ ಹುಟ್ಟುಸಾವುಗಳ ವಿಷಯದಲ್ಲಿ ನೀನು ದುಃಖಪಡಬೇಕಾದುದಿಲ್ಲ.

**ಅವ್ಯಕ್ತಾದೀನಿ ಭೂತಾನಿ, ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾ ನ್ಯೇವ, ತತ್ರ ಕಾ ಪರಿದೇವನಾ ॥೨೮॥**

ಎಲೈ ಭಾರತನೇ! ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಮೊದಲು ಅವ್ಯಕ್ತವಾಗಿ ಇದ್ದು, ಮಧ್ಯದಲ್ಲಿ ಮಾತ್ರ ಪ್ರಕಟವಾಗಿ ಅಂತ್ಯದಲ್ಲಿ ಪುನಃ ಅಪ್ರಕಟವಾಗತಕ್ಕದ್ದಾಗಿದೆ. ಹೀಗಿರುವಾಗ ಇದಕ್ಕಾಗಿ ದುಃಖವೇಕೆ?

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ, ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ, ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥೨೯॥**

ಯಾರೋ ಒಬ್ಬನು (ಜ್ಞಾನಿ) ಲೋಕವಿಲಕ್ಷಣನಾದ ಈ ಆತ್ಮನನ್ನು ಆಶ್ಚರ್ಯವಾದುದಾಗಿ ನೋಡುತ್ತಾನೆ. ಇನ್ನು ಒಬ್ಬನು ಆಶ್ಚರ್ಯವಾಗುವಂತೆ ಹೇಳುವನು. ಮತ್ತೆ ಒಬ್ಬನು ಇದನ್ನು ಆಶ್ಚರ್ಯವಾಗಿಯೇ ಕೇಳುವನು. ಇನ್ನೊಬ್ಬನು ಇದನ್ನು ಕೇಳಿಯೂ ತಿಳಿಯದೆ ಇರುವನು.

ಆತ್ಮನನ್ನು ನೋಡುವವನು ಅತಿ ಆಶ್ಚರ್ಯಕರವಾದುದಾಗಿ ನೋಡುತ್ತಾನೆ. ಆತ್ಮವಿಷಯವಾಗಿ ಉಪದೇಶಿಸುವವನು ಆಶ್ಚರ್ಯವಾಗುವಂತೆ ಹೇಳುತ್ತಾನೆ. ಕೇಳುವವನೂ ಆಶ್ಚರ್ಯಪಡುತ್ತಾನೆ. ಹೀಗೆ ಆತ್ಮವಿಷಯಕವಾದ ದರ್ಶನ, ನಿರೂಪಣ, ಶ್ರವಣವು ಅತಿ ಆಶ್ಚರ್ಯ ಉಂಟುಮಾಡುವದಾಗಿದೆ. ಏಕೆಂದರೆ, ಆತ್ಮನು ಸರ್ವಧರ್ಮವಿಲಕ್ಷಣನು.

**ದೇಹೀ ನಿತ್ಯಮವಧ್ಯೋಽಯಂ, ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ, ನ ತ್ವಂ ಶೋಚಿತುಮರ್ಹಸಿ ॥೩೦॥**

ಹೇ ಭಾರತ! ಸಕಲದೇಹಗಳಲ್ಲಿಯೂ ಪರಿಪೂರ್ಣನಾಗಿರುವ ಈ ಪರಮಾತ್ಮನು ದೇಹಗಳು ನಶಿಸುತ್ತಲಿದ್ದರೂ ತಾನು ಮಾತ್ರ ನಾಶವಾಗದೆ ನಿತ್ಯನಾಗಿರುವನು. ಆದುದರಿಂದ ದೇಹಗಳ ನಾಶದ ವಿಷಯದಲ್ಲಿ ನೀನು ದುಃಖಿಸುವುದು ಅನುಚಿತ (ವ್ಯರ್ಥ.)

**ಸ್ವಧರ್ಮಮಪಿ ಚಾವೇಕ್ಷ್ಯ, ನ ವಿಕಂಪಿತು ಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್, ಕ್ಷತ್ರಿಯಸ್ಯ ನ ವಿದ್ಯತೇ ॥**

ಅಲ್ಲದೆ, ಸ್ವಧರ್ಮದ ದೃಷ್ಟಿಯಿಂದ ನೋಡಿದರೂ ನೀನು ಭಯಪಡಬೇಕಾದುದಿಲ್ಲ. ಏಕೆಂದರೆ, ಸ್ವಧರ್ಮವಾದ ಧರ್ಮಯುದ್ಧಕ್ಕಿಂತಲೂ ಕ್ಷತ್ರಿಯನಿಗೆ ಶ್ರೇಯಸ್ಕರವಾದ ಸಾಧನವು ಬೇರೆ ಯಾವುದೂ ಇಲ್ಲ.

**ಯದೃಚ್ಛಯಾ ಚೋಪಪನ್ನಂ, ಸ್ವರ್ಗದ್ವಾರ ಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ, ಲಭಂತೇ ಯುದ್ಧಮೀದೃಶಮ್ ॥೩೨॥**

ಪ್ರಯತ್ನವಿಲ್ಲದೆ ತಾನಾಗಿಯೇ ಪ್ರಾಪ್ತವಾಗಿರುವ, ತೆರೆಯಲ್ಪಟ್ಟ ಸ್ವರ್ಗದ್ವಾರದಂತಿರುವ, ಇಂತಹ ಯುದ್ಧವು ಯಾವ ಕ್ಷತ್ರಿಯರಿಗೆ ಲಭಿಸುವುದೋ ಅವರು ಸುಖಿಗಳೇ ಆಗಿರುವರು.

**ಅಥ ಚೇತ್ ತ್ವಮಿಮಂ ಧರ್ಮ್ಯಂ, ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ, ಹಿತ್ವಾ ಪಾಪಮವಾಪ್ಸ್ಯಸಿ ॥೩೩॥**

ಇಲ್ಲದೆ ಧರ್ಮಯುಕ್ತವಾದ ಈ ಯುದ್ಧವನ್ನು ಮಾಡದಿದ್ದರೆ, ನೀನು ನಿನ್ನ ಸ್ವಧರ್ಮವನ್ನೂ ಮತ್ತು ಕೀರ್ತಿಯನ್ನೂ ನಾಶಮಾಡಿಕೊಂಡು ಬರಿಯ ಪಾಪವನ್ನೇ ಗಳಿಸುವೆ.

**ಅಕೀರ್ತಿಂ ಚಾಪಿ ಭೂತಾನಿ, ಕಥಯಿಷ್ಯಂತಿ ತೇಽವ್ಯಯಾಮ್ !**
**ಸಂಭಾವಿತಸ್ಯ ಚಾಕೀರ್ತಿ, ರ್ಮರಣಾದತಿರಿಚ್ಯತೇ ||೩೪||**

ಕರ್ತವ್ಯರೂಪ ಧರ್ಮವನ್ನು ತ್ಯಜಿಸುವುದರಿಂದ ದೀರ್ಘಕಾಲದವರೆವಿಗೂ ನಿಲ್ಲುವ ಅಪಕೀರ್ತಿಯು ಉಂಟಾಗುತ್ತದೆ. ಬಹುಕಾಲದವರೆಗೂ ಎಲ್ಲರೂ ನಿನ್ನ ಈ ಅಪಕೀರ್ತಿಯನ್ನು ಆಡಿಕೊಳ್ಳುತ್ತಾರೆ. ಗೌರವಸ್ಥನಿಗೆ ಅಪಕೀರ್ತಿಗಿಂತ ಮರಣವೇ ಲೇಸು.

**ಭಯಾದ್ರಣಾದುಪರತಂ, ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ, ಭೂತ್ವಾ ಯಾಸ್ಯಸಿ ಲಾಘವಮ್||**

ಭೀಷ್ಮದ್ರೋಣಾದಿ ಮಹಾರಥಿಕರು ಅರ್ಜುನನು ಭಯವಂ ಪೊಂದಿ ಯುದ್ಧಭೂಮಿಯಿಂದ ಹೊರಟುಹೋದನೆಂದೇ ತಿಳಿಯುವರು. ಅನೇಕ ಮಹತ್ಕಾರ್ಯಗಳನ್ನು ಮಾಡಿ ಮಾನನೀಯನೆಂದು ಹೆಸರುವಾಸಿಯಾದ ನೀನು ಅವರ ಮುಂದೆ ಸಣ್ಣವನಾಗುವೆ.

**ಅವಾಚ್ಯವಾದಾಂಶ್ಚ ಬಹೂನ್, ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ, ತತೋ ದುಃಖತರಂ ನು ಕಿಮ್ ||೩೬||**

ನಿನ್ನ ಶತ್ರುಗಳೆಲ್ಲರೂ ಆಡಬಾರದ ಅನೇಕ ಮಾತುಗಳನ್ನು ಆಡಿಕೊಳ್ಳುತ್ತಾರಲ್ಲದೆ ನಿನ್ನ ಅಸದೃಶವಾದ ಸಾಮರ್ಥ್ಯವನ್ನೂ ನಿಂದಿಸುವರು. ಮರ್ಯಾದಸ್ಥನಿಗೆ ಇದಕ್ಕಿಂತಲೂ ಹೆಚ್ಚಿನ ದುಃಖವು ಇನ್ನೇನಿರುವುದು ?

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ, ಜಿತ್ವಾ ವಾ ಭೋಕ್ಷ್ಯಸೇ ಮಹೀಮ್।**
**ತಸ್ಮಾದುತ್ತಿಷ್ಠ ಕೌಂತೇಯ, ಯುದ್ಧಾಯ ಕೃತನಿಶ್ಚಯಃ ||೩೭||**

ಎಲೈ ಕೌಂತೇಯನೇ ! ಯುದ್ಧದಲ್ಲಿ ಶತ್ರುಗಳ ಕೈಯಿಂದ ನೀನು ಸತ್ತರೆ ಸ್ವರ್ಗಲೋಕವು ಪ್ರಾಪ್ತವಾಗುವುದು. ಒಂದುವೇಳೆ ಶತ್ರುಗಳನ್ನು ನೀನು ಜಯಿಸುವುದಾದರೆ ನಿಷ್ಕಂಟಕವಾದ ರಾಜ್ಯವನ್ನು ಅನುಭವಿಸುವೆ. (ಇಂತು ಎರಡು ವಿಧದಿಂದಲೂ ನಿನಗೆ ಲಾಭವೇ ಇರುವುದು.) ಆದುದರಿಂದ ಯುದ್ಧ ಮಾಡುವ ನಿಶ್ಚಯಮಾಡಿ ಎದ್ದೇಳು.

Funding: Tattva Heritage Foundation,Kolkata. Digitization: eGangotri.



**ಸುಖದುಃಖೇ ಸಮೇ ಕೃತ್ವಾ, ಲಾಭಾಲಾಭೌ ಜಯಾಜಯೌ |**
**ತತೋ ಯುದ್ಧಾಯ ಯುಜ್ಯಸ್ವ, ನೈವಂ ಪಾಪಮವಾಪ್ಸ್ಯಸಿ ||೩೮||**

ಸುಖ ದುಃಖ, ಲಾಭ ಹಾನಿ, ಜಯ ಅಪಜಯಗಳನ್ನು ಸಮಾನವಾಗಿ ಭಾವಿಸಿ ಯುದ್ಧಕ್ಕೆ ತೊಡಗು. ಹೀಗೆ ಮಾಡಿದರೆ ನೀನು ಪಾಪವನ್ನು ಹೊಂದುವುದಿಲ್ಲ.

**ಏಷಾ ತೇಽಭಿಹಿತಾ ಸಾಂಖ್ಯೇ, ಬುದ್ಧಿರ್ಯೋಗೇ ತ್ವಿಮಾಂ ಶೃಣು |**
**ಬುದ್ಧ್ಯಾಯುಕ್ತೋ ಯಯಾ ಪಾರ್ಥ, ಕರ್ಮಬಂಧಂ ಪ್ರಹಾಸ್ಯಸಿ||**

ಎಲೈ ಪಾರ್ಥನೇ! ಇದುವರೆಗೂ ಪರಮಾತ್ಮ ಸ್ವರೂಪ ವಿಷಯಕವಾದ ವಿಜ್ಞಾನವನ್ನು ತಿಳಿಸುವ ಸಾಂಖ್ಯಯೋಗವು (ಜ್ಞಾನಯೋಗ) ನನ್ನಿಂದ ಹೇಳಲ್ಪಟ್ಟಿತು. ಇನ್ನುಮುಂದೆ ಕರ್ಮಯೋಗವನ್ನು ಹೇಳುವೆನು, ಕೇಳು. ಈ ನಿಷ್ಕಾಮ ಕರ್ಮಯೋಗದ ಪ್ರಭಾವದಿಂದ ನೀನು ಅನಾಯಾಸವಾಗಿ ಕರ್ಮಬಂಧವನ್ನು ಹೋಗಲಾಡಿಸಿಕೊಳ್ಳುವೆ.

**ನೇಹಾಭಿಕ್ರಮನಾಶೋಽಸ್ತಿ, ಪ್ರತ್ಯವಾಯೋ ನ ವಿದ್ಯತೇ |**
**ಸ್ವಲ್ಪಮಪ್ಯಸ್ಯ ಧರ್ಮಸ್ಯ, ತ್ರಾಯತೇ ಮಹತೋ ಭಯಾತ್ ||೪೦||**

ಈ ಕರ್ಮಯೋಗದ ಆಚರಣೆಯಿಂದ ಪ್ರಾರಂಭಿಸಿದ ಕರ್ಮವು ಎಂದಿಗೂ ನಾಶವಾಗುವುದಿಲ್ಲ. ಮಾಡದಿರುವುದರಿಂದ 'ಆಗುವ ಪ್ರತ್ಯವಾಯ ರೂಪ ದೋಷವೂ ಇದರಲ್ಲಿಲ್ಲ. ಮತ್ತೂ ಏನೆಂದರೆ, ಇದನ್ನು ಸ್ವಲ್ಪವಾಗಿ ಆಚರಿಸಿದರೂ ಘೋರವಾದ ಸಂಸಾರದ ದುಃಖದಿಂದ ನಮ್ಮನ್ನು ಬಿಡಿಸಿ ಉದ್ಧಾರಮಾಡಿಬಿಡುತ್ತದೆ.

ಇಂತಹ ಮಹಿಮೆಯುಳ್ಳದ್ದು ಕರ್ಮಯೋಗ.

**ವ್ಯವಸಾಯಾತ್ಮಿಕಾ ಬುದ್ಧಿ, ರೇಕೇಹ ಕುರುನಂದನ |**
**ಬಹುಶಾಖಾ ಹ್ಯನಂತಾಶ್ಚ, ಬುದ್ಧಯೋಽವ್ಯವಸಾಯಿನಾಮ್ ||೪೧||**

ಈ ನಿಷ್ಕಾಮಕರ್ಮಯೋಗದಲ್ಲಿ ಈಶ್ವರಾರ್ಪಣರೂಪವಾದ ಬುದ್ಧಿಯು ಒಂದೇ ಆಗಿರುವುದು. ಆದರೆ ಅಜ್ಞಾನೀ (ಸಕಾಮೀ) ಪುರುಷರ ಬುದ್ಧಿಯು ಶಾಖೋಪಶಾಖೆಗಳಿಂದ ಕೂಡಿ ಅನಂತವಿಧವಾಗಿ ಇರುತ್ತದೆ.

**ಯಾಮಿಮಾಂ ಪುಷ್ಪಿತಾಂ ವಾಚಂ, ಪ್ರವದಂತ್ಯವಿಪಶ್ಚಿತಃ |**
**ವೇದವಾದರತಾಃ ಪಾರ್ಥ, ನಾನ್ಯದಸ್ತೀತಿ ವಾದಿನಃ ||೪೨||**

**ಕಾಮಾತ್ಮಾನಃ ಸ್ವರ್ಗಪರಾ, ಜನ್ಮ ಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ, ಭೋಗೈಶ್ವರ್ಯಗತಿಂ ಪ್ರತಿ ॥೪೩॥**
**ಭೋಗೈಶ್ವರ್ಯಪ್ರಸಕ್ತಾನಾಂ, ತಯಾಪಹೃತ ಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ, ಸಮಾಧೌ ನ ವಿಧೀಯತೇ ॥೪೪॥**

ವಿಚಾರಹೀನರಾದ ಸಕಾಮ ಪುರುಷರು ಯಜ್ಞಾದಿ ಕ್ರಿಯಾಕಲಾಪಗಳನ್ನು ಸ್ವರ್ಗಸುಖಾದಿಗಳನ್ನು ವಿಸ್ತರಿಸಿ ಹೇಳುವ ಕರ್ಮಕಾಂಡದ ವೇದವಚನಗಳಲ್ಲೇ ಅಧಿಕ ಪ್ರೀತಿಯುಳ್ಳವರಾಗಿರುವರು. ಸ್ವರ್ಗಸುಖವನ್ನು ಪಡೆಯುವುದೇ ಜೀವನದ ಪರಮಧ್ಯೇಯ, ಇದಕ್ಕಿಂತಲೂ ಉತ್ಕೃಷ್ಟವಾದ ಮೋಕ್ಷವು ಬೇರೆ ಯಾವುದೂ ಇಲ್ಲವೆಂದು ಇವರು ವಾದಿಸುವರು. ಈ ಅಲ್ಪಜ್ಞರು ಭೋಗೈಶ್ವರ್ಯಗಳನ್ನು ಹೊಂದುವುದಕ್ಕಾಗಿ ಜನ್ಮಾದಿಗಳನ್ನು ಹೊಂದುವುದೇ ಫಲವಾಗಿ ಉಳ್ಳ ವಿವಿಧವೂ ವಿಪುಳವೂ ಆದ ಕ್ರಿಯಾವಿಶೇಷಗಳನ್ನೇ ಪ್ರಶಂಸಿಸುತ್ತಾರೆ. ಅರ್ಥವಾದ ಯುಕ್ತವಾದ ಮತ್ತು ಗಂಧವಿಲ್ಲದ ಮುತ್ತುಗದ ಗಿಡದ ಹೂವಿನಂತೆ, ಅವಿಚಾರದಿಂದ ಇವು ರಮಣೀಯವಾಗಿ ತೋರುತ್ತವೆ. ಭೋಗೈಶ್ವರ್ಯಗಳಲ್ಲಿ ಅತ್ಯಂತ ಆಸಕ್ತರಾದ ಇವರು ಇಂತಹ ಆಡಂಬರದ ವಚನಗಳಿಂದ ವಿಮೋಹಿತರಾಗಿ ವಿಕ್ಷುಬ್ಧ ಚಿತ್ತವುಳ್ಳವರಾದ್ದರಿಂದ ಇವರಿಗೆ ಪರಮಾತ್ಮಸ್ವರೂಪವನ್ನು ಅರಿಯುವ ಮತ್ತು ಅದರಲ್ಲೇ ಸ್ಥಿರವಾಗಿ ನಿಲ್ಲುವ ಏಕರೂಪವಾದ 'ವ್ಯವಸಾಯಾತ್ಮಿಕ' ಬುದ್ಧಿಯು ಉಂಟಾಗುವುದಿಲ್ಲ. ಹೀಗಿರುವುದರಿಂದಲೇ ಸಕಾಮಿಗಳ ಚಿತ್ತದಲ್ಲಿ ಸಮತಾಭಾವನೆ ಉಂಟಾಗುವುದಿಲ್ಲ.

ಇಲ್ಲಿ ಸಕಾಮಪುರುಷರ ಸ್ವಭಾವ, ಸಿದ್ಧಾಂತ ಮತ್ತು ಆಚಾರವಿಚಾರಗಳನ್ನು ತಿಳಿಸಿದೆ.

**ತ್ರೈಗುಣ್ಯವಿಷಯಾ ವೇದಾ, ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ವಸ್ಥೋ, ನಿರ್ಯೋಗಕ್ಷೇಮ ಆತ್ಮವಾನ್ ॥**

ಎಲೈ ಅರ್ಜುನಾ! ಕರ್ಮಪ್ರಧಾನವಾದ ವೇದವು ತ್ರಿಗುಣಗಳ ಕಾರ್ಯವಾದ ಭೋಗ್ಯರೂಪ ಸಂಸಾರವನ್ನೇ ಪೇಳುತ್ತಲಿದೆ. ಆದುದರಿಂದ ನೀನು ಈ ಭೋಗೈಶ್ವರ್ಯಗಳನ್ನು ಬಯಸದೆ ನಿಷ್ಕಾಮಕರ್ಮಯುಕ್ತನಾಗು. ಸುಖದುಃಖ, ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸುವವನಾಗು. ಸತ್ವಗುಣಪ್ರಧಾನವಾದ ಬುದ್ಧಿಯುಳ್ಳವನಾಗು. ಯೋಗಕ್ಷೇಮವು ಈಶ್ವರಾಧೀನವೆಂದು ತಿಳಿದು ಅದನ್ನು ಬಯಸದಿರು. ಮತ್ತು (ಆತ್ಮವಾನ್) ಮನಸ್ಸನ್ನು ಜಯಿಸು

ವವನಾಗು. ಇದರಿಂದ ನಿನಗೆ ಸಮತಾಬುದ್ಧಿಯುಳ್ಳ ನಿಷ್ಕಾಮ ಕರ್ಮಯೋಗವನ್ನು ಆಚರಿಸಲು ಸುಲಭಸಾಧ್ಯವಾಗುವುದು.

**ಯಾವಾನರ್ಥ ಉದಪಾನೇ, ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು, ಬ್ರಾಹ್ಮಣಸ್ಯ ವಿಜಾನತಃ ॥೪೬॥**

ಸ್ವಲ್ಪ ನೀರಿನಿಂದ ಕೂಡಿದ ಜಲಾಶಯದಿಂದ ಸ್ನಾನಪಾನಾದಿ ಎಷ್ಟು ಬಗೆಯ ಪ್ರಯೋಜನಗಳಾಗುವುವೋ ಅವೆಲ್ಲವೂ ಮಹಾ ಜಲಾಶಯದಲ್ಲಿ ಅಂತರ್ಭೂತವಾಗಿರುವಂತೆ, ವೇದದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಕರ್ಮಗಳಿಂದಾಗುವ ಫಲವೆಲ್ಲವೂ ಬ್ರಹ್ಮವೇತ್ತನಾದ ಜ್ಞಾನಿಯ ಬ್ರಹ್ಮಾನಂದದಲ್ಲಿ (x) ಅಂತರ್ಭೂತವಾಗಿರುವುವು.

**ಕರ್ಮಣ್ಯೇವಾಧಿಕಾರಸ್ತೇ, ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್, ಮಾ ತೇ ಸಂಗೋಽಸ್ತ್ವ ಕರ್ಮಣಿ॥**

ನಿನಗೆ ಕರ್ಮಮಾಡುವುದರಲ್ಲಿ ಮಾತ್ರ ಅಧಿಕಾರವಿರುವುದಲ್ಲದೆ ಕರ್ಮಫಲಾಪೇಕ್ಷೆಯಲ್ಲಿ ಅಧಿಕಾರವಿರುವುದಿಲ್ಲ. ಆದಕಾರಣ ನೀನು ಕರ್ಮಫಲವನ್ನು ಅಪೇಕ್ಷಿಸುವವನಾಗಬೇಡ. ಮತ್ತು ಕರ್ಮ ಮಾಡದಿರುವುದರಲ್ಲೂ ನಿನಗೆ ಆಸಕ್ತಿ ಉಂಟಾಗದಿರಲಿ.

ಮಲಿನಚಿತ್ತವುಳ್ಳವನು ಚಿತ್ತಶುದ್ಧಿಗಾಗಿ ನಿಷ್ಕಾಮ ಕರ್ಮಾಚರಣೆ ಅವಶ್ಯ ಮಾಡಬೇಕೆಂಬ ತಾತ್ಪರ್ಯ.

**ಯೋಗಸ್ಥಃ ಕುರು ಕರ್ಮಾಣಿ, ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ, ಸಮತ್ವಂ ಯೋಗ ಉಚ್ಯತೇ ॥**

ನೀನು ಕರ್ಮಫಲಾಸಕ್ತಿಯನ್ನು ಬಿಟ್ಟು, ಸಿದ್ಧಿ ಅಸಿದ್ಧಿಗಳಲ್ಲಿ ಸಮಬುದ್ಧಿಯುಳ್ಳವನಾಗಿ, ಪರಮೇಶ್ವರನಲ್ಲಿಯೇ ಮನಸ್ಸನ್ನು ಇಟ್ಟಿರುವನಾಗಿ, ನಿನ್ನ ಕರ್ತವ್ಯವನ್ನು ಮಾಡುವವನಾಗು. ಸಮತ್ವವೇ ಯೋಗವೆಂದು ಜ್ಞಾನಿಗಳಿಂದ ಹೇಳಲ್ಪಟ್ಟಿರುವುದು.

---

(x) ಮಾನುಷಾನಂದದಿಂದ ಹಿಡಿದು ಬ್ರಹ್ಮನ ಆನಂದದವರೆಗೆ ಇರುವ ಎಲ್ಲಾ ಬಗೆಯ ಆನಂದಗಳೂ ಒಬ್ಬ ಬ್ರಹ್ಮವೇತ್ತನ ಆನಂದದಲ್ಲಿ ಅಂತರ್ಗತವೆಂದು ತೈತ್ತಿರೀಯ ಶ್ರುತಿ.

**ದೂರೇಣ ಹ್ಯವರಂ ಕರ್ಮ, ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ, ಕೃಪಣಾಃ ಫಲಹೇತವಃ ॥೪೯॥**

ಹೇ ಧನಂಜಯನೇ! ಈ ಸಮತ್ವರೂಪ ಬುದ್ಧಿಯೋಗಕ್ಕಿಂತ ಕಾಮ್ಯ ಕರ್ಮವು ಅತಿ ನಿಕೃಷ್ಟವಾದುದು. ಇದರಿಂದ ನೀನು ನಿಷ್ಕಾಮ ಕರ್ಮವನ್ನೇ ಆಶ್ರಯಿಸು. ಫಲವನ್ನುದ್ದೇಶಿಸಿ ಕರ್ಮ ಮಾಡತಕ್ಕವರು ಕೃಪಣರು (ನಿಕೃಷ್ಟರು)

**ಬುದ್ಧಿಯುಕ್ತೋ ಜಹಾತೀಹ, ಉಭೇ ಸುಕೃತ ದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ, ಯೋಗಃ ಕರ್ಮಸು ಕೌಶಲಮ್ ॥**

ನಿಷ್ಕಾಮ ಬುದ್ಧಿಯಿಂದ ಕರ್ಮಾಚರಣೆ ಗೈಯುವವನು ಈ ಲೋಕ ದಲ್ಲೇ ಪುಣ್ಯ ಪಾಪಗಳೆರಡನ್ನೂ ತ್ಯಜಿಸುವನು. ಆದುದರಿಂದ ನಿಷ್ಕಾಮ ಕರ್ಮಯೋಗವನ್ನೇ ಮಾಡುವನಾಗು. ಕರ್ಮಗಳನ್ನು ಮಾಡುತ್ತಿದ್ದರೂ ಅವುಗಳಿಂದ ಬಂಧನವಾಗದಿರುವಂತೆ (ಉಪಾಯದಿಂದ, ಚತುರತೆಯಿಂದ) ಮಾಡುವ ರೀತಿಯೇ ಕರ್ಮಯೋಗವು. ನಿಷ್ಕಾಮತೆಯೇ ಕರ್ಮಯೋಗದ ತಿರುಳು.

**ಕರ್ಮಜಂ ಬುದ್ಧಿಯುಕ್ತಾ ಹಿ, ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ, ಪದಂ ಗಚ್ಛಂತ್ಯನಾಮಯಮ್ ॥೫೧॥**

ಸಮತ್ವಬುದ್ಧಿಯಿಂದ ಕೂಡಿದ ಜ್ಞಾನೀ ಜನಗಳು ಕರ್ಮಜನ್ಯವಾದ ಶುಭಾಶುಭ ಫಲಗಳನ್ನು ಪರಿತ್ಯಜಿಸಿ ಜನ್ಮಬಂಧನದಿಂದ ಬಿಡುಗಡೆ ಹೊಂದಿದ ವರಾಗಿ ದುಃಖರಹಿತವಾದ ಪರಮಪದವನ್ನು ಪಡೆಯುತ್ತಾರೆ.

**ಯದಾ ತೇ ಮೋಹಕಲಿಲಂ, ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ, ಶ್ರೋತವ್ಯಸ್ಯ ಶ್ರುತಸ್ಯಚ ॥೫೨॥**

ಯಾವ ಕಾಲದಲ್ಲಿ ಅಜ್ಞಾನವೆಂಬ ಕಲ್ಮಷದಿಂದ ಕಲುಷಿತವಾದ ನಿನ್ನ ಬುದ್ಧಿಯು ಶುದ್ಧವಾಗುವುದೋ ಆಗಲೇ ಹಿಂದೆ ಕೇಳಿರುವ ಮತ್ತು ಮುಂದೆ ಕೇಳಬಹುದಾದ ಸಮಸ್ತ ದಿವ್ಯಲೋಕಗಳ ಸುಖಭೋಗಗಳಲ್ಲೂ ನಿನಗೆ ಪರಮ ವೈರಾಗ್ಯ ಉಂಟಾಗುವುದು.

ಅಶುದ್ಧ ಬುದ್ಧಿಯೇ ಭೋಗಗಳನ್ನು ಇಚ್ಛಿಸುವುದು ಎಂಬ ಭಾವ.

**ಶ್ರುತಿವಿಪ್ರತಿಪನ್ನಾ ತೇ, ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿ, ಸ್ತದಾ ಯೋಗಮವಾಪ್ಸ್ಯಸಿ ॥೫೩॥**

ಕರ್ಮಗಳ ಅನೇಕ ಬಗೆಯ ಫಲಶ್ರವಣದಿಂದ ಸಂಶಯಗ್ರಸ್ತವಾದ ನಿನ್ನ ಬುದ್ಧಿಯು ಯಾವಾಗ ಪರಬ್ರಹ್ಮದಲ್ಲಿ ಅಚಲವಾಗಿಯೂ ಮತ್ತು ಸ್ಥಿರ ವಾಗಿಯೂ ನಿಲ್ಲುವುದೋ ಆಗಲೇ ನೀನು ಬ್ರಹ್ಮಾತ್ಮೈಕ್ಯರೂಪ ಯೋಗವನ್ನು ಪಡೆಯುವವನಾಗುತ್ತೀಯೆ.

ಅರ್ಜುನ ಉವಾಚ

ಸ್ಥಿತಪ್ರಜ್ಞಸ್ಯ ಕಾ ಭಾಷಾ, ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ, ಕಿಮಾಸೀತ ವ್ರಜೇತ ಕಿಮ್ ॥೫೪॥

ಅರ್ಜುನನಿಂತೆಂದನು–ಓ ಕೇಶವನೇ! ಸಮಾಧಿಸ್ಥನಾದ ಸ್ಥಿತಪ್ರಜ್ಞನ ಲಕ್ಷಣವೇನು? ಮತ್ತು ಸಮಾಧಿಯಿಂದ ಬಹಿರ್ಮುಖನಾದ ಸ್ಥಿತ ಪ್ರಜ್ಞನು ಯಾವ ರೀತಿಯಾಗಿ ಮಾತನಾಡುವನು? ಹೇಗೆ ಕುಳಿತುಕೊಳ್ಳುವನು? ಮತ್ತು ಹೇಗೆ ನಡೆಯುವನು?

ಸಮಾಧಿ ಸ್ಥಿತಿಯಲ್ಲಿ ಬ್ರಹ್ಮಾಕಾರವೃತ್ತಿಯಿಂದಿರುವಾಗ ಸ್ಥಿತಪ್ರಜ್ಞನ ಲಕ್ಷಣವೇನೆಂಬುದು ಮೊದಲನೆಯ ಪ್ರಶ್ನೆ.

ನಂತರ, ಸಮಾಧಿಯಿಂದ ಎದ್ದಮೇಲೆ (ಬಹಿರ್ಮುಖನಾದಾಗ) ಅವನ ಭಾಷಣ (ಮನೋಭಾವ), ಆಸನ (ಇಂದ್ರಿಯ ಸಂಯಮನ) ಮತ್ತು ಗಮನ (ಆಚರಣೆ) ಹೇಗಿರುವುದೆಂದು ಮೂರು ಪ್ರಶ್ನೆಗಳು ಮಾಡಲ್ಪಟ್ಟವೆ. (X)

ಶ್ರೀ ಭಗವಾನುವಾಚ

ಪ್ರಜಹಾತಿ ಯದಾ ಕಾಮಾನ್, ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ, ಸ್ಥಿತಪ್ರಜ್ಞಸ್ತದೋಚ್ಯತೇ ॥೫೫॥

ಶ್ರೀ ಭಗವಂತನು ಇಂತೆಂದನು—ಎಲೈ ಅರ್ಜುನನೆ! ಯಾವ ಕಾಲ ದಲ್ಲಿ ಆ ಸಮಾಧಿಸ್ಥ ಪುರುಷನು ಮನದೊಳಗಿರುವ ಸರ್ವ ಕಾಮನೆಗಳನ್ನು ಬಿಟ್ಟು ಆತ್ಮನಲ್ಲಿ ಆತ್ಮದಿಂದಲೇ ಸಂತುಷ್ಟನಾಗುವನೋ ಆ ಕಾಲದಲ್ಲಿ ಅವನು ಸ್ಥಿತಪ್ರಜ್ಞನೆಂದು ಹೇಳಿಸಿಕೊಳ್ಳುವನು.

---

(X) ಈ ನಾಲ್ಕು ಪ್ರಶ್ನೆಗಳಿಗೆ ಉತ್ತರ ಇದೇ ಅಧ್ಯಾಯದ ಮುಂದಿನ ಈ ಶ್ಲೋಕಗಳಿಂದ ದೊರೆಯುತ್ತದೆ. 1· ಶ್ಲೋಕ 55· 2· ಶ್ಲೋ॥ 56 ಮತ್ತು 57, 3· 58 ರಿಂದ 63 ಮತ್ತು 4· 64 ರಿಂದ 71 ವರೆಗೆ.

**ದುಃಖೇಷ್ವನುದ್ವಿಗ್ನಮನಾಃ, ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ, ಸ್ಥಿತಧೀರ್ಮುನಿರುಚ್ಯತೇ ॥೫೬॥**

ಯಾವನ ಮನವು ದುಃಖಪ್ರಾಪ್ತವಾದಾಗ ಕಳವಳವನ್ನು ಹೊಂದುವುದಿಲ್ಲವೋ, ಸುಖ ಒದಗಿದಾಗ ಆಸಕ್ತಿರಹಿತವಾಗಿರುವುದೋ, ಮತ್ತು ರಾಗ ಭಯ ಕ್ರೋಧಗಳು ಯಾವನಿಗೆ ಕಳೆದುಹೋಗಿರುವುವೋ, ಇಂತಹ ಮುನಿಯು ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.

**ಯಃ ಸರ್ವತ್ರಾನಭಿಸ್ನೇಹ, ಸ್ತತ್ತತ್ ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ, ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೭॥**

ಯಾವನು ಸಮಸ್ತ ವಿಷಯುಗಳಲ್ಲಿಯೂ ಪ್ರೀತಿ (ಅಭಿರುಚಿ, ಆಸಕ್ತಿ) ಇಲ್ಲದಿರುವನೋ, ಪ್ರಾರಬ್ಧಾನುಸಾರ ಬರುವ ಶುಭಾಶುಭಗಳನ್ನು ಪ್ರೀತಿಸದೆಯೂ, ದ್ವೇಷಿಸದೆಯೂ ಇರುವನೋ ಅವನ ಪ್ರಜ್ಞೆಯು ಸ್ಥಿರವಾಗಿರುವುದು.

**ಯದಾ ಸಂಹರತೇ ಚಾಯಂ, ಕೂರ್ಮೋಽಙ್ಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯ, ಸ್ತಸ್ಯಪ್ರಜ್ಞಾ ಪ್ರತಿಷ್ಠಿತಾ ॥೫೮॥**

ಆಮೆಯು ತನ್ನ ಅವಯುವಗಳನ್ನು ಹೇಗೆ ಒಳಗೆ ಸೆಳೆದುಕೊಳ್ಳುವುದೋ ಹಾಗೆಯೇ ಯಾರು ಯಾವಾಗ ತನ್ನ ಸರ್ವೇಂದ್ರಿಯುಗಳನ್ನು ಶಬ್ದಾದಿ ವಿಷಯಗಳಕಡೆ ಹೋಗಗೊಡಿಸದೆ ಹಿಮ್ಮೆಟ್ಟಿಸಿಕೊಳ್ಳುವನೋ ಆಗ ಅವನ ಪ್ರಜ್ಞೆಯು ಸ್ಥಿರವಾಗುವುದು.

ಇಂದ್ರಿಯಗಳನ್ನು ವಿಷಯುಗಳಿಂದ ಮರಳಿಸಿಕೊಳ್ಳುವುದನ್ನು ಉಪರತಿ ಎನ್ನುವರು.

**ವಿಷಯಾ ವಿನಿವರ್ತಂತೇ, ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ, ಪರಂ ದೃಷ್ಟ್ವಾ ನಿವರ್ತತೇ ॥೫೯॥**

ಇಂದ್ರಿಯಗಳಿಂದ ವಿಷಯುಗಳನ್ನು ಗ್ರಹಿಸುವುದರಲ್ಲಿ ಅಸಮರ್ಥನಾದ ರೋಗಿಯ ಶಬ್ದಾದಿ ವಿಷಯುಗಳು ನಿವೃತ್ತಿಯಾಗುವುವು. ಆದರೂ ಆ ವಿಷಯಗಳಲ್ಲಿರುವ ರಾಗವು ಮಾತ್ರ ಹೋಗದೆ ಇದ್ದೇ ಇರುತ್ತದೆ. ಸ್ಥಿತ ಪ್ರಜ್ಞನಿಗಾದರೋ ಬ್ರಹ್ಮಸಾಕ್ಷಾತ್ಕಾರದಿಂದ ಆ ರಾಗವೂ ಸಹ ನಿವೃತ್ತಿಯಾಗಿ ಹೋಗುವುದು.

**ಯತತೋ ಹ್ಯಪಿ ಕೌಂತೇಯ, ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ, ಹರಂತಿ ಪ್ರಸಭಂ ಮನಃ ॥೬೦॥**

ಎಲೈ ಕೌಂತೇಯನೇ! ಯತ್ನಮಾಡುವ ವಿವೇಕೀ ಪುರುಷನ ಮನಸ್ಸನ್ನೂ ಕೂಡ ಅತ್ಯಂತ ಪ್ರಬಲಗಳಾದ ಶ್ರೋತ್ರಾದಿ ಇಂದ್ರಿಯಗಳು ಬಲಾತ್ಕಾರದಿಂದ ವಿಷಯಗಳಲ್ಲಿ ಪ್ರವೇಶ ಮಾಡಿಸಿಬಿಡುವುವು.

**ತಾನಿ ಸರ್ವಾಣಿ ಸಂಯಮ್ಯ, ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ, ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೧॥**

ಇದರಿಂದ ನನ್ನ ಅನನ್ಯ ಭಕ್ತನು ಸರ್ವೇಂದ್ರಿಯಗಳನ್ನೂ ವಶಪಡಿಸಿಕೊಂಡು ಮನಸ್ಸನ್ನು ನಿಗ್ರಹಿಸಿದವನಾಗಿರುತ್ತಾನೆ. ಅಥವಾ ಇಂದ್ರಿಯಗಳನ್ನೂ ಮನಸ್ಸನ್ನೂ ನಿಗ್ರಹಿಸಿ (ಮತ್ಪರಃ) ನನ್ನ ಪರಾಯಣನಾಗಿರುತ್ತಾನೆ. ಯಾರಿಗೆ ಇಂದ್ರಿಯಗಳು ವಶವಾಗಿರುವುವೋ ಅವನ ಪ್ರಜ್ಞೆಯು ಸ್ಥಿರವಾಗಿ ನಿಲ್ಲುವುದು.

ಮನಸ್ಸೂ, ಇಂದ್ರಿಯಗಳೂ ನಿಗ್ರಹಿಸದಿದ್ದರೆ ಬುದ್ಧಿ ಸ್ಥಿರವಾಗುವುದಿಲ್ಲವೆಂಬ ಅರ್ಥ.

**ಧ್ಯಾಯತೋ ವಿಷಯಾನ್ ಪುಂಸಃ, ಸಂಗಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ, ಕಾಮಾತ್ ಕ್ರೋಧೋಽಭಿ**
**ಜಾಯತೇ ॥೬೨॥ ಕ್ರೋಧಾದ್ಭವತಿ ಸಮ್ಮೋಹಃ, ಸಮ್ಮೋಹಾತ್**
**ಸ್ಮೃತಿವಿಭ್ರಮಃ । ಸ್ಮೃತಿಭ್ರಂಶಾದ್ಬುದ್ಧಿನಾಶೋ, ಬುದ್ಧಿನಾಶಾತ್**
**ಪ್ರಣಶ್ಯತಿ ॥೬೩॥**

ಮನಸಹಿತ ಇಂದ್ರಿಯಗಳನ್ನು ನಿಗ್ರಹಿಸದೆ ಮತ್ತು ಅನನ್ಯಭಾವದಿಂದ ಭಗವಂತನ ಧ್ಯಾನದಲ್ಲಿ ತತ್ಪರನಾಗದೆ ಇರುವುದರಿಂದ ಮನಸ್ಸಿನಲ್ಲಿ ವಿಷಯಚಿಂತನೆಗಳು ಸ್ಫುರಿಸುತ್ತವೆ. ಮತ್ತು ಮನಸ್ಸಿನಲ್ಲಿ ವಿಷಯಗಳ ಧ್ಯಾನ ಮಾಡುವುದರಿಂದ ಅದರಲ್ಲಿ ಆಸಕ್ತಿಯುಂಟಾಗುತ್ತದೆ. ವಿಷಯಾಸಕ್ತಿಯಿಂದ ಕಾಮವೂ, ಕಾಮದಿಂದ ಕ್ರೋಧವೂ, ಕ್ರೋಧದಿಂದ ಮೋಹವೂ ಉಂಟಾಗುವುದು. ಅವಿವೇಕದಿಂದ ಸ್ಮೃತಿಯಲ್ಲಿ ಭ್ರಮೆಯುಂಟಾಗುವುದು. ಇದರಿಂದ ಧರ್ಮಾಧರ್ಮಗಳನ್ನು ನಿರ್ಣಯಿಸುವ ಬುದ್ಧಿಯು ನಾಶವಾಗುವುದು. ಮತ್ತು ಬುದ್ಧಿನಾಶದಿಂದ ತಾನು ನಾಶವಾಗುವನು.

**ರಾಗದ್ವೇಷವಿಯುಕ್ತೈಸ್ತು, ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ, ಪ್ರಸಾದಮಧಿಗಚ್ಛತಿ ॥೬೪॥**

ಆದರೆ ಯಾವ ವಿವೇಕಿಯು ಮನಸ್ಸನ್ನು ಸ್ವಾಧೀನಮಾಡಿಕೊಂಡು, ರಾಗ ದ್ವೇಷರಹಿತನಾಗಿ, ಜಯಿಸಲ್ಪಟ್ಟ ಇಂದ್ರಿಯಗಳಿಂದ ಪ್ರಾರಬ್ಧಾನುಸಾರ ಬಂದೊದಗಿದ ವಿಷಯಗಳನ್ನು ಅನುಭವಿಸುತ್ತಿದ್ದರೂ, ಅವನು ಅಂತಃಕರಣದ ಪ್ರಸನ್ನತೆಯನ್ನೇ ಪಡೆಯುವನು.

**ಪ್ರಸಾದೇ ಸರ್ವದುಃಖಾನಾಂ, ಹಾನಿರಸ್ಯೋಪಜಾಯತೇ ।**
**ಪ್ರಸನ್ನ ಚೇತಸೋ ಹ್ಯಾಶು, ಬುದ್ಧಿಃ ಪರ್ಯವತಿಷ್ಠತೇ ॥೬೫॥**

ಚಿತ್ತದ ಸ್ವಚ್ಛತೆಯೆಂಬ ಪ್ರಸಾದ ಪ್ರಾಪ್ತವಾಗಲು, ಅವನಿಗೆ ಆಧ್ಯಾತ್ಮಿಕಾದಿ ಸರ್ವದುಃಖಗಳೂ ನಾಶವಾಗುತ್ತವೆ. ಅಲ್ಲದೆ ಅವನ ಬುದ್ಧಿಯೂ ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲುವುದು.

ಅಸಂಭಾವನೆ, ವಿಪರೀತ ಭಾವನೆಗಳು ಬುದ್ಧಿಯ ಸ್ಥಿರತೆಯಲ್ಲಿ ಪ್ರತಿಬಂಧಕವಾಗಿರುವುದು. ಇವು ಹೋದಕೂಡಲೇ ಬುದ್ಧಿಗೆ ಸ್ಥಿರತೆಯು ಉಂಟಾಗುವುದು.

**ನಾಸ್ತಿ ಬುದ್ಧಿರಯುಕ್ತಸ್ಯ, ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿ, ರಶಾಂತಸ್ಯ ಕುತಃ ಸುಖಮ್ ॥೬೬॥**

ಚಿತ್ತಜಯವಿಲ್ಲದವನಿಗೆ ಆತ್ಮವಿಷಯಕ ಬುದ್ಧಿ ಉಂಟಾಗುವುದಿಲ್ಲ. ಅಜಿತೇಂದ್ರಿಯನಿಗೆ ಆತ್ಮಧ್ಯಾನ ಮಾಡಲು ಆಗುವುದಿಲ್ಲ. ಆತ್ಮಧ್ಯಾನವಿಲ್ಲದೆ ಶಾಂತಿ ಉಂಟಾಗುವುದಿಲ್ಲ. ಇನ್ನು ಅಶಾಂತನಿಗೆ ಸುಖವೆಲ್ಲಿಯದು ?

**ಇಂದ್ರಿಯಾಣಾಂ ಹಿ ಚರತಾಂ, ಯನ್ಮನೋಽನು ವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ, ವಾಯುರ್ನಾವಮಿವಾಂಭಸಿ ॥೬೭॥**

ಮನಸ್ಸು ವಿಷಯಗಳಲ್ಲಿ ಸಂಚರಿಸುವ ಯಾವುದಾದರೂ ಒಂದು ಇಂದ್ರಿಯವನ್ನು ಅನುಸರಿಸಿದರೂ, ಆ ಒಂದು ಇಂದ್ರಿಯವೇ ಈ ಅಜಿತೇಂದ್ರಿಯನ ಪ್ರಜ್ಞೆಯನ್ನು, ಸಮುದ್ರ ಮಧ್ಯದಲ್ಲಿ ಸುಂಟರಗಾಳಿಗೆ ಸಿಕ್ಕಿದ ದೋಣಿಯಂತೆ, ನಾಶಮಾಡಿಬಿಡುವುದು.

**ತಸ್ಮಾದ್ಯಸ್ಯ ಮಹಾಬಾಹೋ, ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯ, ಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೮॥**

ಎಲೈ ಮಹಾಬಾಹುವೇ! ಆದಕಾರಣ ಯಾವ ಪುರುಷನ ಇಂದ್ರಿಯಗಳು ವಿಷಯಗಳ ಕಡೆ ಹೋಗದಂತೆ ಸರ್ವಥಾ ನಿಗ್ರಹಿಸಲ್ಪಟ್ಟಿರುವುವೋ ಅವನ ಪ್ರಜ್ಞೆಯು ಬ್ರಹ್ಮದಲ್ಲಿ ಸ್ಥಿರವಾಗಿ ನಿಲ್ಲುವುದು.

**ಯಾ ನಿಶಾ ಸರ್ವಭೂತಾನಾಂ, ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ, ಸಾ ನಿಶಾ ಪಶ್ಯತೋ ಮುನೇಃ ॥೬೯॥**

ಬ್ರಹ್ಮಸಾಕ್ಷಾತ್ಕಾರವೆಂಬ ಪ್ರಜ್ಞೆಯು ವಿಷಯಾಸಕ್ತರಾದ ಅಜ್ಞಾನಿಜನಗಳಿಗೆ ಅಂಧಕಾರದಂತೆ ಇರುವುದು. ಇವರಿಗೆ ಇದೇ ರಾತ್ರಿ. ಈ ರಾತ್ರಿಯಲ್ಲಿ ಸ್ಥಿತಪ್ರಜ್ಞನು ಎಚ್ಚರಗೊಂಡಿರುವನು. ಮತ್ತು ಯಾವ ಅವಿದ್ಯೆ ಎಂಬ ರಾತ್ರಿಯಲ್ಲಿ ಈ ಎಲ್ಲಾ ಅಜ್ಞಾನಿಗಳೂ ಎಚ್ಚರವಾಗಿರುವರೋ ಆ ಅವಿದ್ಯೆಯು ಬ್ರಹ್ಮಸಾಕ್ಷಾತ್ಕಾರವುಳ್ಳ ಸ್ಥಿತಪ್ರಜ್ಞನಿಗೆ ರಾತ್ರಿಯಾಗಿರುವುದು.

**ಆಪೂರ್ಯಮಾಣಮಚಲಪ್ರತಿಷ್ಠಂ, ಸಮುದ್ರಮಾಪಃ ಪ್ರವಿಶಂತಿ**
**ಯದ್ವತ್ । ತದ್ವತ್ಕಾಮಾ ಯಂ ಪ್ರವಿಶಂತಿಸರ್ವೇ ಸ**
**ಶಾಂತಿಮಾಪ್ನೋತಿ ನ ಕಾಮಕಾಮೀ ॥೭೦॥**

ಹೇಗೆ ಜಲದಿಂದ ಪರಿಪೂರ್ಣವಾಗಿಯೂ ಅಚಲವಾಗಿಯೂ ಗಂಭೀರವಾಗಿಯೂ ಇರುವ ಸಮುದ್ರದಲ್ಲಿ ಗಂಗಾದಿನದಿಗಳ ನೀರು ಸೇರಿದರೂ ಸಮುದ್ರದಲ್ಲಿ ಯಾವ ಬಗೆಯ ವ್ಯತ್ಯಾಸವೂ ಕಂಡುಬರುವುದಿಲ್ಲವೋ, ಹಾಗೆಯೇ ಸ್ಥಿತಪ್ರಜ್ಞನಲ್ಲಿ ಸಮಸ್ತ ಭೋಗಗಳೂ ವಿಲಯವಾಗಿಹೋಗಿ ಪರಮ ಶಾಂತಿಯನ್ನೇ ಉಂಟುಮಾಡುವುವು. ವಿಷಯಾಸಕ್ತನು ವಿಷಯಭೋಗಗಳಿಂದ ಎಂದಿಗೂ ಶಾಂತಿಯನ್ನು ಹೊಂದಲಾರನು.

**ವಿಹಾಯ ಕಾಮಾನ್ ಯಃ ಸರ್ವಾನ್, ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ, ಸ ಶಾಂತಿಮಧಿಗಚ್ಛತಿ ॥೭೧॥**

ಯಾವ ಪುರುಷನು ಸಮಸ್ತ ಕಾಮನೆಗಳನ್ನು ಪರಿತ್ಯಜಿಸಿ, ಪ್ರಾರಬ್ಧಾನುಸಾರ ಪ್ರಾಪ್ತವಾದ ವಿಷಯಗಳಲ್ಲಿ ಇಚ್ಛೆಯಿಲ್ಲದವನಾಗಿ, ಅಹಂಕಾರ ಮಮಕಾರಗಳಿಲ್ಲದವನಾಗಿ. ವಿಹರಿಸುವನೋ ಅವನೇ ಶಾಂತಿಯನ್ನು ಹೊಂದುವನು.

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ, ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಽಸ್ಯಾಮಂತಕಾಲೇಽಪಿ, ಬ್ರಹ್ಮನಿರ್ವಾಣಮೃಚ್ಛತಿ ॥೭೨॥**

ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ
ಸಾಂಖ್ಯಯೋಗೋನಾಮ ದ್ವಿತೀಯೋಽಧ್ಯಾಯಃ

ಇದೇ ಬ್ರಹ್ಮದಲ್ಲಿ ಸ್ಥಿತನಾದ ಪುರುಷನ (ಸ್ಥಿತಪ್ರಜ್ಞನ) ಸ್ಥಿತಿ (ಬ್ರಾಹ್ಮೀ ಸ್ಥಿತಿ). ಇದನ್ನು ಪಡೆದಮೇಲೆ ಯಾರಿಗೂ ಮೋಹವುಂಟಾಗುವುದಿಲ್ಲ. ಈ ಸ್ಥಿತಿಯು ಮರಣಾವಸ್ಥೆಯಲ್ಲಿದ್ದಾಗ ಉಂಟಾದರೂ ಬ್ರಹ್ಮನಿರ್ವಾಣ (ಬ್ರಹ್ಮಾನಂದ) ವನ್ನೇ ಹೊಂದುವನು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಸಾಂಖ್ಯಯೋಗವೆಂಬ
ಎರಡನೇ ಅಧ್ಯಾಯವು. ಸಂಪೂರ್ಣವು.



## ಅಥ ಕರ್ಮಯೋಗೋನಾಮ ತೃತೀಯೋಽಧ್ಯಾಯಃ

ಅರ್ಜುನ ಉವಾಚ

ಜ್ಯಾಯಸೀ ಚೇತ್ ಕರ್ಮಣಸ್ತೇ, ಮತಾ ಬುದ್ಧಿರ್ಜನಾರ್ದನ।
ತತ್ಕಿಂ ಕರ್ಮಣಿ ಘೋರೇ ಮಾಂ, ನಿಯೋಜಯಸಿ ಕೇಶವ ॥೧॥

ಅರ್ಜುನನು ಶ್ರೀ ಕೃಷ್ಣ ಭಗವಂತನನ್ನು ಕುರಿತು ಇಂತೆಂದನು— ಓ ಜನಾರ್ದನನೇ ! ನಿಷ್ಕಾಮಕರ್ಮಯೋಗಕ್ಕಿಂತಲೂ ಆತ್ಮವಿಷಯಕ ಬುದ್ಧಿ (ಸಾಂಖ್ಯಯೋಗ) ಶ್ರೇಷ್ಠವಾಗಿರುವುದೆಂದು ನಿನ್ನ ಅಭಿಪ್ರಾಯವಿದ್ದರೆ, ಎಲೈ ಕೇಶವನೇ ! ಘೋರವಾದ ಹಿಂಸಾರೂಪವಾದ ಈ ಕರ್ಮದಲ್ಲಿ ಏತಕ್ಕಾಗಿ ನನ್ನನ್ನು ಪ್ರೇರಣೆಮಾಡುವೆ ?

ವ್ಯಾಮಿಶ್ರೇಣೇವ ವಾಕ್ಯೇನ, ಬುದ್ಧಿಂ ಮೋಹಯಸೀವ ಮೇ।
ತದೇಕಂ ವದ ನಿಶ್ಚಿತ್ಯ, ಯೇನ ಶ್ರೇಯೋಽಹಮಾಪ್ನುಯಾಮ್ ॥೨॥

ಬೆರಕೆಗೊಂಡಂತಿರುವ ನಿನ್ನ ವಚನಗಳಿಂದ ನನ್ನಬುದ್ಧಿಗೆ ಮೋಹವನ್ನುಂಟುಮಾಡುವನಂತೆ ತೋರುತ್ತಿದೆ. ಆದುದರಿಂದ ಸಾಂಖ್ಯ ಮತ್ತು ಕರ್ಮ—ಇವೆರಡರಲ್ಲಿ ಯಾವ ಒಂದರಿಂದ ನಾನು ಪರಮ ಶ್ರೇಯಸ್ಸನ್ನು

ಪಡೆಯುವೆನೋ ಅದನ್ನು ಚೆನ್ನಾಗಿ ನಿರ್ಧರಿಸಿ ಸ್ಪಷ್ಟವಾಗಿ (ಪುನಃ ಸಂಶಯ ವುಂಟಾಗದಂತೆ) ಹೇಳುವವನಾಗು.

ಶ್ರೀ ಭಗವಾನುವಾಚ

ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ, ಪುರಾ ಪ್ರೋಕ್ತಾ ಮಯಾನಘ ।
ಜ್ಞಾನಯೋಗೇನ ಸಾಂಖ್ಯಾನಾಂ, ಕರ್ಮಯೋಗೇನ ಯೋಗಿನಾಮ್॥

ಶ್ರೀ ಕೃಷ್ಣಭಗವಂತನಿಂತೆಂದನು :— ಎಲೈ ಪಾಪರಹಿತನೇ ! ಈ ಲೋಕದಲ್ಲಿ ಜ್ಞಾನ ಮತ್ತು ಕರ್ಮಗಳ ಅಧಿಕಾರಿ ಭೇದದಿಂದ ಎರಡು ವಿಧವಾದ ನಿಷ್ಠೆಯು ಸೃಷ್ಟಿಯ ಆದಿಯಿಂದ ಹೇಳಿದುದೇ ಈಗಲೂ ನನ್ನಿಂದ ಹೇಳಲ್ಪಟ್ಟಿತು. ಅವುಗಳಲ್ಲಿ ಶುದ್ಧಾಂತಃಕರಣವುಳ್ಳವರಿಗೆ ಜ್ಞಾನಯೋಗವೂ, ಅಶುದ್ಧ ಅಂತಃಕರಣವುಳ್ಳವರಿಗೆ ನಿಷ್ಕಾಮಕರ್ಮಯೋಗವೂ ಹೇಳಲ್ಪಟ್ಟಿದೆ. ಆದಕಾರಣ ಮೋಹಕರವಾದ ಮಿಶ್ರವಾಕ್ಯವೇನೂ ನನ್ನಿಂದ ಹೇಳಲ್ಪಡಲಿಲ್ಲ.

ನ ಕರ್ಮಣಾಮನಾರಂಭಾ, ನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸಂನ್ಯಸನಾದೇವ, ಸಿದ್ಧಿಂ ಸಮಧಿಗಚ್ಛತಿ ॥೪॥

ಕರ್ಮಗಳನ್ನು ನಿಷ್ಕಾಮ ಭಾವದಿಂದ ಆಚರಿಸದಿದ್ದಲ್ಲಿ, ಯಾರಿಗೂ ನೈಷ್ಕರ್ಮ್ಯರೂಪ ಯೋಗನಿಷ್ಠೆಯು ಉಂಟಾಗುವುದಿಲ್ಲ. ಮತ್ತು ಕರ್ಮಗಳ ಸ್ವರೂಪತಃ ತ್ಯಾಗದಿಂದ ಯಾರಿಗೂ ಸಿದ್ಧಿ ಅಂದರೆ ಸಾಂಖ್ಯನಿಷ್ಠೆಯು ಪ್ರಾಪ್ತಿಯಾಗುವುದಿಲ್ಲ.

ಅಂದರೆ, ಮಲಿನ ಅಂತಃಕರಣವುಳ್ಳವನು ಮೊಟ್ಟಮೊದಲು ನಿಷ್ಕಾಮಕರ್ಮಗಳನ್ನು ಆಚರಿಸಿ ಅಂತಃಕರಣವನ್ನು ಶುದ್ಧಿಪಡಿಸಿಕೊಳ್ಳಬೇಕು. ಇಂತಹವರೇ ಕರ್ಮಯೋಗದ ಅಧಿಕಾರಿಗಳು. ಆದಪ್ರಯುಕ್ತ ಇವರಿಗಾಗಿ ಕರ್ಮನಿಷ್ಠೆಯು ಹೇಳಲಾಗಿದೆ.

ಇನ್ನು ಶುದ್ಧಾಂತಃಕರಣದವರಿಗೆ ಬ್ರಹ್ಮವು ತಾನೇ ಎಂದು ಅಭೇದ ರೂಪದಿಂದ ಧ್ಯಾನಿಸುವುದಕ್ಕೆ ಕರ್ಮಸಂನ್ಯಾಸಪೂರ್ವಕ ಜ್ಞಾನನಿಷ್ಠೆಯು ಹೇಳಲಾಗಿದೆ.

ನ ಹಿ ಕಶ್ಚಿತ್ ಕ್ಷಣಮಪಿ, ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ, ಸರ್ವಃ ಪ್ರಕೃತಿಜೈರ್ಗುಣೈಃ ॥೫॥

ಯಾವ ಮನುಷ್ಯನೇ ಆಗಲಿ ಯಾವ ಕಾಲದಲ್ಲಿಯಾದರೂ ಒಂದು ಕ್ಷಣಮಾತ್ರವಾದರೂ ಕರ್ಮವನ್ನು ಮಾಡದೆ ಇರಲಾಗುವುದಿಲ್ಲ. ಏಕೆಂದರೆ

ಪ್ರಕೃತಿಜನಿತ ಗುಣಗಳಿಗೆ ವಶರಾಗಿ ಎಲ್ಲರೂ ಅವರವರ ಪೂರ್ವ ಸಂಸ್ಕಾರಾನುಸಾರ ಕರ್ಮಗಳನ್ನು ಮಾಡುವುದಕ್ಕೆ ಬಾಧ್ಯರಾಗಿರುವರು.

ಕರ್ಮಗಳ ಸ್ವರೂಪತಃ ತ್ಯಾಗ ಯಾರಿಗೂ ಸಾಧ್ಯವಿಲ್ಲ. ಅಜ್ಞಾನಿಯಂತೆ ಜ್ಞಾನಿಯೂ ಕರ್ಮಗಳನ್ನು ಮಾಡುವನು. ಅಜ್ಞಾನಿಯು ಕರ್ತೃತ್ವ ಅಭಿಮಾನ ಮತ್ತು ಫಲಾಪೇಕ್ಷೆಯಿಂದ ಮಾಡುವನು; ಜ್ಞಾನಿಯು ಇವನ್ನು ಬಿಟ್ಟು ಮಾಡುವನು. ಇಬ್ಬರಿಗೂ ಇಷ್ಟೇ ವ್ಯತ್ಯಾಸ.

**ಕರ್ಮೇಂದ್ರಿಯಾಣಿ ಸಂಯಮ್ಯ, ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ, ಮಿಥ್ಯಾಚಾರಃ ಸ ಉಚ್ಯತೇ ॥**

ಯಾವ ಮೂಢಾತ್ಮನು ಹೊರಗೆ ಮಾತ್ರ ಕರ್ಮೇಂದ್ರಿಯಗಳನ್ನು ಕರ್ಮಮಾಡದಂತೆ ತಡೆದು ಮನದೊಳಗೆ ಮಾತ್ರ ವಿಷಯಗಳ ಚಿಂತನೆ ಮಾಡುತ್ತಲಿರುವನೋ ಅವನು (X) ಮಿಥ್ಯಾಚಾರದವನೆಂದು ಹೇಳಲ್ಪಡುವನು.

**ಯಸ್ತ್ವಿಂದ್ರಿಯಾಣಿ ಮನಸಾ, ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗ, ಮಸಕ್ತಃ ಸ ವಿಶಿಷ್ಯತೇ ॥೭॥**

ಎಲೈ ಅರ್ಜುನಾ! ಯಾವನು ಮನಸ್ಸಿನಿಂದ ಇಂದ್ರಿಯಗಳನ್ನು ತಡೆದು ವಿಷಯಾಸಕ್ತನಾಗದೆ, ಕರ್ಮೇಂದ್ರಿಯಗಳಿಂದ ನಿಷ್ಕಾಮ ಕರ್ಮಗಳನ್ನು ಮಾಡುವನೋ ಅವನು ಮಲಿನ ಅಂತಃಕರಣವುಳ್ಳವನಾಗಿ ಕರ್ಮವನ್ನು ತೊರೆದ ಸಂನ್ಯಾಸಿಗಿಂತಲೂ ಅತಿ ಶ್ರೇಷ್ಠನು.

**ನಿಯತಂ ಕುರು ಕರ್ಮ ತ್ವಂ, ಕರ್ಮಜ್ಯಾಯೋಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ, ನ ಪ್ರಸಿದ್ಧ್ಯೇದಕರ್ಮಣಃ ॥೮॥**

ನೀನು ಶಾಸ್ತ್ರವಿಹಿತ ಕರ್ತವ್ಯಕರ್ಮಗಳನ್ನು ಮಾಡು. ಮಲಿನಾಂತಃಕರಣದವನು ಕರ್ಮಮಾಡದೇಇರುವುದಕ್ಕಿಂತ ಭಗವದರ್ಪಣಬುದ್ಧಿಯಿಂದ ಕರ್ಮಗಳನ್ನು ಮಾಡುವುದೇ ಶ್ರೇಷ್ಠವು. ಕರ್ಮಗಳನ್ನು ಮಾಡದಿದ್ದರೆ ನಿನ್ನ ಶರೀರ ನಿರ್ವಾಹವೂ ಕೂಡ ಆಗಲಾರದು.

---

[x] ಕಪಟ, ಡಾಂಭಿಕ, ಉದಾ.- ಬಕಧ್ಯಾನದಂತೆ, ಅಂದರೆ ಬಕಪಕ್ಷಿಯು ಸರೋವರದ ನೀರಿನಲ್ಲಿ ಕಣ್ಣುಮುಚ್ಚಿಕೊಂಡು ಮೀನುಗಳನ್ನು ಹಿಡಿದು ತಿನ್ನುವುದಕ್ಕಾಗಿ ನಿಂತಿರುತ್ತದೆ.

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ, ಲೋಕೋಽಯಂ ಕರ್ಮ ಬಂಧನಃ । ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥**

ಅರ್ಜುನಾ! ಈ ಜನರು ಪರಮೇಶ್ವರನ ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡದೆ, ಸ್ವರ್ಗಾದಿಸುಖಗಳನ್ನುದ್ದೇಶಿಸಿ, ಕಾಮ್ಯಭಾವದಿಂದ ಕರ್ಮಗಳನ್ನು ಮಾಡುವುದರಿಂದ ಆ ಕರ್ಮಗಳಿಂದ ಕಟ್ಟಲ್ಪಡುತ್ತಾರೆ. ಆದುದರಿಂದ ನೀನು ಫಲಾಪೇಕ್ಷೆಯನ್ನು ಬಿಟ್ಟು ಭಗವದರ್ಪಣಬುದ್ಧಿಯಿಂದ ಕರ್ಮಗಳನ್ನು ಚೆನ್ನಾಗಿ ಮಾಡು.

ಕೇವಲ ಕಾಮ್ಯಕರ್ಮಗಳೇ ಬಂಧನಕ್ಕೆ ಹೇತುವಲ್ಲದೆ ನಿಷ್ಕಾಮ ಕರ್ಮಗಳು ಬಂಧನಕ್ಕೆ ಹೇತುವಲ್ಲ ಎಂದರ್ಥ.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ, ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವ, ಮೇಷ ವೋಽಸ್ತ್ವಿಷ್ಟಕಾಮಧುಕ್ ॥೧೦॥**

ಕಲ್ಪಾದಿಯಲ್ಲಿ ಬ್ರಹ್ಮದೇವನು ಯಜ್ಞದೊಡನೆ ಪ್ರಜೆಗಳನ್ನು ಸೃಷ್ಟಿಸಿ ಈ ಯಜ್ಞದಿಂದಲೇ ನೀವು ಅಭಿವೃದ್ಧಿಯನ್ನು ಹೊಂದುವರಾಗಿ, ಈ ಯಜ್ಞವು ಕಾಮಧೇನುವಿನಂತೆ ನಿಮ್ಮ ಇಷ್ಟಾರ್ಥಗಳನ್ನು ಕೊಡುವುದಾಗಲಿ ಎಂದು ಹೇಳಿದನು.

**ದೇವಾನ್ ಭಾವಯತಾನೇನ, ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ, ಪರಮವಾಪ್ಸ್ಯಥ ॥೧೧॥**

ಈ ಯಜ್ಞದಿಂದ ನೀವು ಇಂದ್ರಾದಿದೇವತೆಗಳನ್ನು ಸಂತುಷ್ಟಪಡಿಸಿರಿ. ಇದರಿಂದ ಸಂತುಷ್ಟರಾದ ದೇವತೆಗಳು ವೃಷ್ಟ್ಯಾದಿಗಳಿಂದ ನಿಮ್ಮನ್ನು ಸಂತೃಪ್ತಿಗೊಳಿಸಲಿ. ಹೀಗೆ ಪರಸ್ಪರ ಉಪಕಾರ ಮಾಡುತ್ತಾ ನೀವೆಲ್ಲರೂ ಶುದ್ಧಚಿತ್ತರಾಗಿ ಪರಮ ಶ್ರೇಯಸ್ಸನ್ನು ಪಡೆದುಕೊಳ್ಳಿರಿ.

**ಇಷ್ಟಾನ್ ಭೋಗಾನ್ ಹಿ ವೋ ದೇವಾ, ದಾಸ್ಯಂತೇ ಯಜ್ಞ ಭಾವಿತಾಃ । ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥೧೨॥**

ಯಜ್ಞದಿಂದ ಸಂತುಷ್ಟರಾದ ದೇವತೆಗಳು ನಿಮ್ಮಗಳಿಗೆ ಮನೋವಾಂಛಿತ ಭೋಗಗಳನ್ನು ಕೊಡುತ್ತಾರೆ. ಹೀಗೆ ದೇವತೆಗಳಿಂದ ಕೊಡಲ್ಪಟ್ಟ ಭೋಗೈಶ್ವರ್ಯಗಳನ್ನು ಯಾವನು ಪುನಃ ಯಜ್ಞರೂಪದಿಂದ ಅವರಿಗೆ ತೃಪ್ತಿಪಡಿಸಲು

ಉಪಯೋಗಿಸದೆ ಸ್ವಾರ್ಥಬುದ್ಧಿಯಿಂದ ತಾನೇ ಉಪಭೋಗಿಸುವನೋ ಅವನು ಕಳ್ಳನೇ ಆಗಿರುವನು.

**ಯಜ್ಞಶಿಷ್ಟಾಶಿನಃ ಸಂತೋ, ಮುಚ್ಯಂತೇ ಸರ್ವಕಿಲ್ಬಿಷೈಃ।**
**ಭುಂಜತೇ ತೇ ತ್ವಘಂ ಪಾಪಾ, ಯೇ ಪಚಂತ್ಯಾತ್ಮಕಾರಣಾತ್ ॥೧೩॥**

ಯಾವ ಪುರುಷನು ಯಜ್ಞಶೇಷಾನ್ನವನ್ನು ಭುಂಜಿಸುವನೋ ಅವನು ಸರ್ವಪಾಪಗಳಿಂದ ಬಿಡಲ್ಪಡುವನು. ಹಾಗಿಲ್ಲದೆ ಮತ್ತಾವ ಪಾಪಾತ್ಮನು ಕೇವಲ ತನಗೋಸ್ಕರವೇ ಅನ್ನವನ್ನು ಪಾಕಮಾಡುವನೋ ಅವನು ಪಾಪಗಳನ್ನೇ ಭೋಜನಮಾಡುವನು.

1) ಋಷಿಯಜ್ಞ 2) ದೇವಯಜ್ಞ 3) ಪಿತೃಯಜ್ಞ 4) ಮನುಷ್ಯಯಜ್ಞ 5) ಭೂತಯಜ್ಞ—ಇವು ಪಂಚಮಹಾಯಜ್ಞಗಳು. ಇವನ್ನು ಮಾಡಿದಮೇಲೆ ಉಳಿಯುವ ಅನ್ನವೇ ಯಜ್ಞಶೇಷಾನ್ನ. ಇದೇ ಅಮೃತಭೋಜನ. ಅನ್ಯಥಾ ಅದು ಪಾಪಭೋಜನವಾಗುತ್ತದೆ.

**ಅನ್ನಾದ್ಭವಂತಿ ಭೂತಾನಿ, ಪರ್ಜನ್ಯಾದನ್ನ ಸಂಭವಃ।**
**ಯಜ್ಞಾದ್ಭವತಿ ಪರ್ಜನ್ಯೋ, ಯಜ್ಞಃ ಕರ್ಮಸಮುದ್ಭವಃ ॥೧೪॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ, ಬ್ರಹ್ಮಾಕ್ಷರಸಮುದ್ಭವಮ್।**
**ತಸ್ಮಾತ್ ಸರ್ವಗತಂ ಬ್ರಹ್ಮ, ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥**

ಸಮಸ್ತ ಪ್ರಾಣಿಗಳೂ ಅನ್ನದಿಂದ ಹುಟ್ಟುತ್ತವೆ; ಮಳೆಯಿಂದ ಅನ್ನವು ಉಂಟಾಗುತ್ತದೆ; ಮಳೆಯು ಯಜ್ಞಾದಿಗಳನ್ನು ಮಾಡುವುದರಿಂದ ಆಗುತ್ತದೆ. ಯಜ್ಞವು ಕರ್ಮಗಳಿಂದ ಹುಟ್ಟುವುದು. ಯಜ್ಞಗಳಿಗೆ ಹೇತುವಾದ ಕರ್ಮವು ವೇದದಿಂದ ಹುಟ್ಟುವುದು. ವೇದವು ನಾಶರಹಿತನಾದ ಪರಮಾತ್ಮನಿಂದ ಹುಟ್ಟಿತೆಂದು ತಿಳಿ. ಆದುದರಿಂದ ಸರ್ವವ್ಯಾಪಿಯಾದ ಅಕ್ಷರನಾದ ಪರಮಾತ್ಮನು ಸದಾ ಯಜ್ಞದಲ್ಲೇ ಪ್ರತಿಷ್ಠಿತನಾಗಿರುವನು.

**ಏವಂ ಪ್ರವರ್ತಿತಂ ಚಕ್ರಂ, ನಾನುವರ್ತಯತೀಹ ಯಃ।**
**ಅಘಾಯುರಿಂದ್ರಿಯಾರಾಮೋ, ಮೋಘಂ ಪಾರ್ಥ ಸ ಜೀವತಿ ॥೧೬॥**

ಎಲೈ ಅರ್ಜುನಾ! ಈ ಲೋಕದಲ್ಲಿ ಯಾವ ಅಧಿಕಾರಿಯೂ ಈರೀತಿಯಾಗಿ ಪ್ರವರ್ತಿಸುತ್ತಿರುವ ಸೃಷ್ಟಿಚಕ್ರವನ್ನು ಅನುಸರಿಸದಿರುವನೋ ಅವನು ಪಾಪದಿಂದ ಜೀವಿಸುವ ವಿಷಯಲಂಪಟನಾಗಿ ವ್ಯರ್ಥವಾಗಿ ಬದುಕುವನು.

ಯಸ್ತ್ವಾತ್ಮರತಿರೇವ ಸ್ಯಾ, ದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟ, ಸ್ತಸ್ಯ ಕಾರ್ಯಂ ನ ವಿದ್ಯತೇ ॥೧೭॥

ಯಾವ ಪುರುಷನು ಆತ್ಮನಲ್ಲಿಯೇ ಗಾಢವಾದ ಪ್ರೀತಿಯುಳ್ಳವನಾಗಿಯೂ, ಆತ್ಮನಿಂದಲೇ ಪರಿತೃಪ್ತನಾಗಿಯೂ ಮತ್ತು ಆತ್ಮನಲ್ಲಿಯೇ ಸಂತುಷ್ಟನಾಗಿಯೂ ಇರುವನೋ, ಅಂತಹ ಜ್ಞಾನಿಗೆ ವಿಹಿತ ಕರ್ಮದ ಕರ್ತವ್ಯವಿರುವುದಿಲ್ಲ.

ನೈವ ತಸ್ಯ ಕೃತೇನಾರ್ಥೋ, ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು, ಕಶ್ಚಿದರ್ಥವ್ಯಪಾಶ್ರಯಃ ॥೧೮॥

ಆ ಜ್ಞಾನಿಗೆ ಕರ್ಮಮಾಡುವುದರಿಂದ ಯಾವ ಪ್ರಯೋಜನವೂ ಇರುವುದಿಲ್ಲ ಮತ್ತು ಕರ್ಮಮಾಡದಿರುವುದರಿಂದ ಯಾವ ದೋಷವೂ ಇರುವುದಿಲ್ಲ. ಮತ್ತು ಈ ವಿವೇಕಿಗೆ ಸರ್ವಪ್ರಾಣಿಗಳಲ್ಲಿಯೂ ಯಾವದೊಂದು ಪ್ರಯೋಜನದ ಸಂಬಂಧವೂ ಇರುವುದಿಲ್ಲ.

ತಸ್ಮಾದಸಕ್ತಃ ಸತತಂ, ಕಾರ್ಯಂ ಕರ್ಮ ಸಮಾಚರ ।
ಅಸಕ್ತೋ ಹ್ಯಾಚರನ್ ಕರ್ಮ, ಪರಮಾಪ್ನೋತಿ ಪೂರುಷಃ ॥೧೯॥

ಆದುದರಿಂದ ನೀನು ಫಲಾಪೇಕ್ಷೆಯಿಲ್ಲದವನಾಗಿ ನಿತ್ಯ ನೈಮಿತ್ತಿಕಾದಿ ವಿಹಿತಕರ್ಮಗಳನ್ನು ಸದಾ ಮಾಡುವವನಾಗು. ಈ ರೀತಿ ಕರ್ಮವನ್ನು ಮಾಡುವವನು ಶುದ್ಧಾಂತಃಕರಣವುಳ್ಳವನಾಗಿ ಜ್ಞಾನವನ್ನು ಪಡೆದು ಮೋಕ್ಷವನ್ನು ಹೊಂದುತ್ತಾನೆ.

ಕರ್ಮಣೈವ ಹಿ ಸಂಸಿದ್ಧಿ, ಮಾಸ್ಥಿತಾ ಜನಕಾದಯಃ ।
ಲೋಕಸಂಗ್ರಹಮೇವಾಪಿ, ಸಂಪಶ್ಯನ್ ಕರ್ತುಮರ್ಹಸಿ ॥೨೦॥

ಪೂರ್ವದಲ್ಲಿ ಜನಕಾದಿ ಕ್ಷತ್ರಿಯ ರಾಜರು ಕರ್ಮದಿಂದಲೇ ಅಂತಃಕರಣಶುದ್ಧಿಯುಳ್ಳವರಾಗಿ ಜ್ಞಾನಸಿದ್ಧಿಯನ್ನು ಪಡೆದರು. ಇನ್ನು ಲೋಕೋಪಕಾರಾರ್ಥಕ್ಕಾಗಿ ಆದರೂ ನೀನು ಕರ್ಮವನ್ನು ಮಾಡಬೇಕು.

ಯದ್ಯದಾಚರತಿ ಶ್ರೇಷ್ಠ, ಸ್ತತ್ತದೇವೇತರೋ ಜನಾಃ ।
ಸ ಯತ್ಪ್ರಮಾಣಂ ಕುರುತೇ, ಲೋಕಸ್ತದನುವರ್ತತೇ ॥೨೧॥

ಶ್ರೇಷ್ಠಪುರುಷನು ಯಾವ ಯಾವ ಕರ್ಮವನ್ನು ಮಾಡುವನೋ ಅದನ್ನು ನೋಡಿ ಇತರರೂ ಹಾಗೆಯೇ ಮಾಡುವರು. ಅವನು ಯಾವು

Funding: Tattva Heritage Foundation,Kolkata. Digitization: eGangotri.



ದನ್ನು ಪ್ರಮಾಣವೆಂದು ಅಂಗೀಕರಿಸುವನೋ ಅದನ್ನೇ ಇತರರೂ ಪ್ರಮಾಣ ವೆಂದು ನಂಬುತ್ತಾರೆ.

**ನ ಮೇ ಪಾರ್ಥಾಸ್ತಿ ಕರ್ತವ್ಯಂ, ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ, ವರ್ತ ಏವ ಚ ಕರ್ಮಣಿ ॥೨೨॥**

ನನಗೆ ಮೂರು ಲೋಕದಲ್ಲಿಯೂ ಮಾಡಬೇಕಾದುದು ಏನೂ ಇರುವುದಿಲ್ಲ. ಪಡೆಯಲು ಯೋಗ್ಯವಾದ ಯಾವ ವಸ್ತುವೂ ನನಗೆ ಅಪ್ರಾಪ್ತವಾಗಿಲ್ಲ. ಹೀಗಿದ್ದರೂಕೂಡ ನಾನು ಕರ್ಮವನ್ನು ಮಾಡುತ್ತಲೇ ಇರುವೆನು.

**ಯದಿ ಹ್ಯಹಂ ನ ವರ್ತೇಯಂ, ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥**

ಅರ್ಜುನಾ ! ನಾನು ಆಲಸ್ಯವನ್ನು ಬಿಟ್ಟು ಕರ್ಮದಲ್ಲಿ ಪ್ರವರ್ತಿಸದೆ ಹೋದರೆ, ಕರ್ಮಾಧಿಕಾರಿಗಳಾದವರೂ ನನ್ನನ್ನೇ ಅನುಸರಿಸುತ್ತಾ ಕರ್ಮ ಮಾಡುವುದನ್ನು ಬಿಟ್ಟು ಬಿಡುವರು.

**ಉತ್ಸೀದೇಯುರಿಮೇ ಲೋಕಾ, ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾ ಮುಪಹನ್ಯಾಮಿಮಾಃ ಪ್ರಜಾಃ ॥೨೪॥**

ಒಂದು ವೇಳೆ ನಾನು ಕರ್ಮವನ್ನು ಮಾಡದೆ ಹೋದರೆ ನನ್ನನ್ನು ನೋಡಿ ನನ್ನನ್ನು ಅನುಸರಿಸುವವರನ್ನು ನಾನೇ ನಾಶಮಾಡತಕ್ಕವನಾಗುವೆನು. ಇದೂ ಅಲ್ಲದೆ ಅವರು ಮಾಡುವ ಸ್ವಧರ್ಮತ್ಯಾಗದಿಂದಾಗುವ ವರ್ಣ ಸಂಕರಾದಿ ದೋಷಗಳಿಗೆ ನಾನೇ ಕಾರಣನಾಗುವೆನು. ಇದರಿಂದ ನಾನೇ ಅವರನ್ನು ಕೊಂದಂತಹವನಾಗುವೆನು.

**ಸಕ್ತಾಃ ಕರ್ಮಣ್ಯವಿದ್ವಾಂಸೋ, ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತ, ಶ್ಚಿಕೀರ್ಷುರ್ಲೋಕಸಂಗ್ರಹಮ್ ॥**

ಎಲೈ ಭಾರತನೇ! ಅಜ್ಞಾನಿಯು ಕರ್ತೃತ್ವಾಭಿಮಾನದಿಂದಲೂ, ಫಲಾಪೇಕ್ಷೆಯಿಂದಲೂ ಹೇಗೆ ಕರ್ತವ್ಯಗಳನ್ನು ಮಾಡುವನೋ, ಹಾಗೆಯೇ ಜ್ಞಾನಿಯು ಕರ್ತೃತ್ವಾಭಿಮಾನವಿಲ್ಲದವನಾಗಿ, ನಿಷ್ಕಾಮನಾಗಿ ಲೋಕಸಂಗ್ರಹಾರ್ಥವಾಗಿ ಶುಭಕರ್ಮಗಳನ್ನು ಆಚರಿಸಬೇಕು.

**ನ ಬುದ್ಧಿ ಭೇದಂ ಜನಯೇ, ದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ ಸರ್ವಕರ್ಮಾಣಿ, ವಿದ್ವಾನ್ ಯುಕ್ತಃ ಸಮಾಚರನ್ ॥**

ಸಕಾಮ ಕರ್ಮದಲ್ಲಿ ಆಸಕ್ತನಾದ ಅಜ್ಞಾನಿಗೆ ಜ್ಞಾನಿಯು ಬುದ್ಧಿ ವಿಕಲ್ಪವನ್ನುಂಟುಮಾಡಕೂಡದು. ಅಂತಹವರ ಸಮೂಹದಲ್ಲಿ ಸೇರುವ ಜ್ಞಾನಿಯೂ ಅವರಂತೆಯೇ ಕರ್ಮವನ್ನು ಆಚರಿಸುತ್ತಾ ಅವರು ಮಾಡುವ ಕರ್ಮಗಳಿಗೆ ಪ್ರೋತ್ಸಾಹವನ್ನುಂಟುಮಾಡಬೇಕು.

ಸಕಾಮರಾದ ಅಜ್ಞಾನಿಗಳಿಗೆ "ಆತ್ಮಾ ಅಕರ್ತನು, ಅಭೋಕ್ತನು, ನೀನು ಮತ್ತು ಈ ಜಗತ್ತು ಸರ್ವವೂ ಬ್ರಹ್ಮವೇ" ಎಂಬ ಉಪದೇಶಮಾಡಿದೊಡೆ, ಅವರಿಗೆ ಶುಭಕರ್ಮಗಳಲ್ಲಿ ಇದ್ದ ಶ್ರದ್ಧೆಯು ತಪ್ಪಿಹೋಗುವುದು. ಶ್ರದ್ಧೆಯಿಲ್ಲದಮೇಲೆ ಆ ಕರ್ಮಗಳನ್ನು ಮಾಡುವುದನ್ನೂ ಬಿಡುವರು. ಕರ್ಮ ಮಾಡದಿರುವುದರಿಂದ ಸ್ವರ್ಗಾದಿ ಉತ್ತಮ ಲೋಕಗಳೂ ದೊರಕವುದಿಲ್ಲ. ಮತ್ತು ಅಂತಃಕರಣ ಶುದ್ಧವಿಲ್ಲದ್ದರಿಂದ ಆತ್ಮಜ್ಞಾನವೂ ಆಗುವುದಿಲ್ಲ. ಆದ ಕಾರಣ ಭೋಗಮೋಕ್ಷಗಳೆರಡರಿಂದಲೂ ಭ್ರಷ್ಟರಾಗುವರು.

ಶುದ್ಧಚಿತ್ತದವನೇ ತತ್ತ್ವೋಪದೇಶಕ್ಕೆ ಅರ್ಹನೇ ಹೊರತು ಅಶುದ್ಧ ಚಿತ್ತದವನು ಅಧಿಕಾರಿಯಾಗುವುದಿಲ್ಲ. ಆದ್ದರಿಂದ ಅವನಿಗೆ ಚಿತ್ತಶುದ್ಧಿಯಾಗುವವರೆಗೆ ಕರ್ಮದಲ್ಲೇ ಪ್ರವೃತ್ತಗೊಳಿಸುತ್ತಿರಬೇಕು.

**ಪ್ರಕೃತೇಃ ಕ್ರಿಯಮಾಣಾನಿ, ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ, ಕರ್ತಾಹಮಿತಿ ಮನ್ಯತೇ ॥೨೭॥**

ಸಮಸ್ತ ಕರ್ಮಗಳೂ ಪ್ರಕೃತಿಯ ಗುಣಗಳಿಂದ ಮಾಡಲ್ಪಡುತ್ತಿವೆ. ಆದರೂ ಅಹಂಕಾರದಿಂದ ನಷ್ಟವಾದ ವಿವೇಕವುಳ್ಳವನು "ನಾನೇ ಮಾಡತಕ್ಕವನು" ಎಂದು ಭಾವಿಸುತ್ತಾನೆ.

**ತತ್ತ್ವವಿತ್ತು ಮಹಾಬಾಹೋ, ಗುಣಕರ್ಮ ವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥೨೮॥**

ಎಲೈ ಮಹಾಬಾಹುವಾದ ಅರ್ಜುನನೇ! ಗುಣ ಮತ್ತು ಕರ್ಮಗಳ ಯಥಾರ್ಥವಾದ ಜ್ಞಾನವನ್ನು ಹೊಂದಿರುವ ತತ್ತ್ವವೇತ್ತನಾದರೋ ಪ್ರಕೃತಿಯ ಗುಣಗಳು ಗುಣಗಳಲ್ಲೇ ವರ್ತಿಸುತ್ತವೆ ಅಂದರೆ ಇಂದ್ರಿಯಗಳು ತಮ್ಮ ತಮ್ಮ ಶಬ್ದಾದಿ ವಿಷಯಗಳಲ್ಲಿ ವರ್ತಿಸುತ್ತವೆ, ಆತ್ಮನಿಗೆ ಈ ಗುಣಗ

Funding: Tattva Heritage Foundation,Kolkata. Digitization: eGangotri.



ಳಿಂದಾಗಲಿ ಅಥವಾ ಕರ್ಮಗಳಿಂದಾಗಲಿ ಸಂಬಂಧವಿಲ್ಲವೆಂಬು ತಿಳಿದು ತಾನು ಕರ್ತೃವೆಂಬ ಅಭಿಮಾನವನ್ನು ಬಿಡುತ್ತಾನೆ.

**ಪ್ರಕೃತೇರ್ಗುಣಸಮ್ಮೂಢಾಃ, ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್, ಕೃತ್ಸ್ನವಿನ್ನವಿಚಾಲಯೇತ್ ॥೨೯॥**

ಪ್ರಕೃತಿಯ ಗುಣಗಳಿಂದ ಮೋಹಿತರಾದ ಈ ಅಜ್ಞಾನಿ ಜೀವರುಗಳು ಪ್ರಕೃತಿಯ ಗುಣ ಮತ್ತು ಕರ್ಮಗಳಲ್ಲಿ ಆಸಕ್ತರಾಗಿರುವರು. ಈ ಗುಣ ಮತ್ತು ಕರ್ಮಗಳ ಸ್ವರೂಪವನ್ನು ಪೂರ್ಣವಾಗಿ ತಿಳಿದ ಜ್ಞಾನಿಯು ತಿಳಿಯದಿರುವ ಅಜ್ಞಾನಿಗಳಿಗೆ ಶುಭಕಾರ್ಯಗಳಲ್ಲಿ ಅವರಿಗಿರುವ ಶ್ರದ್ಧೆಯನ್ನು ಹೋಗಲಾಡಿಸಬಾರದು.

**ಮಯಿ ಸರ್ವಾಣಿ ಕರ್ಮಾಣಿ, ಸಂನ್ಯಸ್ಯಾಧ್ಯಾತ್ಮ ಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ, ಯುಧ್ಯಸ್ವ ವಿಗತಜ್ವರಃ ॥೩೦॥**

ಅಂತರ್ಯಾಮಿಯಾದ ಪರಮಾತ್ಮನಲ್ಲೇ ನೆಟ್ಟಮನಸ್ಸುಳ್ಳವನಾಗಿ, ಸರ್ವ ಕರ್ಮಗಳನ್ನು ಅವನಿಗೇ ಸಮರ್ಪಣೆಮಾಡುತ್ತಾ, ಆಶಾರಹಿತನಾಗಿಯೂ, ಮಮಕಾರವಿಲ್ಲದವನಾಗಿಯೂ, ಶೋಕಮೋಹಾದಿಗಳನ್ನು ಬಿಟ್ಟವನಾಗಿಯೂ, ಸಂತಾಪರಹಿತನಾಗಿಯೂ ಇದ್ದುಕೊಂಡು ನಿನ್ನ ಸ್ವಧರ್ಮರೂಪವಾದ ಯುದ್ಧವನ್ನುಮಾಡು.

**ಯೇ ಮೇ ಮತಮಿದಂ ನಿತ್ಯ, ಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ, ಮುಚ್ಯಂತೇ ತೇಽಪಿ ಕರ್ಮಭಿಃ ॥**

ಈ ಮೇಲೆಹೇಳಿದ ನನ್ನ ಮತವನ್ನು ಯಾರು ಶ್ರದ್ಧಾಯುಕ್ತರಾಗಿಯೂ, ಅಸೂಯಾರಹಿತರಾಗಿಯೂ ಅನುಸರಿಸುವರೋ ಅವರೂ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದುವರು.

**ಯೇ ತ್ವೇತದಭ್ಯಸೂಯಂತೋ, ನಾನು ತಿಷ್ಠಂತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್, ವಿದ್ಧಿ ನಷ್ಟಾನಚೇತಸಃ ॥೩೨॥**

ಅಲ್ಲದೆ ಯಾರು ನನ್ನ ಈ ಮತದಲ್ಲಿ ದೋಷಾರೋಪಣೆ ಮಾಡುತ್ತಾ ಇದನ್ನು ಅನುಷ್ಠಿಸುವುದಿಲ್ಲವೋ ಅವರು ವಿಮೂಢರೆಂದೂ ನಷ್ಟಪ್ರಾಯರೆಂದೂ ಮತ್ತು ಮೂರ್ಖ (ಜಡಬುದ್ಧಿ—ಅಚೇತಸಃ) ರೆಂದೂ ತಿಳಿಯುವವನಾಗು.

**ಸದೃಶಂ ಚೇಷ್ಟತೇ ಸ್ವಸ್ಯಾಃ, ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ, ನಿಗ್ರಹಃ ಕಿಂಕರಿಷ್ಯತಿ ॥೩೩॥**

ಎಲ್ಲರೂ ಅವರವರ ಪೂರ್ವಸಂಸ್ಕಾರ ರೂಪವಾದ ಪ್ರಕೃತಿಗೆ ವಶರಾಗಿ ಕರ್ಮಗಳನ್ನು ಮಾಡುವರು. ಜ್ಞಾನಿಯೂ ಸಹ ತನ್ನ ಸ್ವಭಾವಕ್ಕೆ (ಪ್ರಕೃತಿಗೆ) ಅನುಸಾರವಾಗಿ ಎಲ್ಲಾ ವ್ಯವಹಾರವನ್ನು ಮಾಡುವನು. ಹೀಗಿರುವಾಗ ಹಠಪೂರ್ವಕ ವಿಹಿತಕರ್ಮಗಳ ತ್ಯಾಗ (ನಿಗ್ರಹ)ವು ಏನುಮಾಡೀತು?

ಕ್ಷಣಮಾತ್ರವೂ ಯಾರೂ ಕರ್ಮಮಾಡದಿರಲಾಗುವುದಿಲ್ಲ. ಪ್ರಕೃತಿಯು ಬಲಾತ್ಕಾರದಿಂದ ಅವರಿಂದ ಕರ್ಮವನ್ನು ಮಾಡಿಸಿಯೇ ಬಿಡುತ್ತದೆ. ಸಮುದ್ರದಕಡೆ ಪ್ರವಹಿಸುವುದು ನದಿಯ ಸ್ವಭಾವ. ಇದರ ಪ್ರವಾಹವನ್ನೇ ನಿಲ್ಲಿಸಿಬಿಡುವುದು ಯಾರಿಂದ ಸಾಧ್ಯ? ಆದರೆ ಅಣೆಕಟ್ಟು ಕಟ್ಟಿ ಅದರ ನೀರನ್ನು ಬೇಕಾದ ಕಡೆ ಹಾಯಿಸಿಕೊಂಡು ಬೇಕಾದ ಪ್ರಯೋಜನ ಪಡೆಯಬಹುದಲ್ಲವೇ! ಇದರಂತೆ ಕರ್ಮಗಳನ್ನು ಮಾಡದೆ ತಡೆಗಟ್ಟುವುದು ಸರಿಯಲ್ಲ, ಸಾಧ್ಯವೂ ಇಲ್ಲ. ಒಂದಲ್ಲ ಒಂದು ಕರ್ಮವನ್ನು ಮಾಡಲೇಬೇಕಾಗುತ್ತದೆ. ಆದರೆ ಹೀಗೆ ಮಾಡಲೇಬೇಕಾಗಿರುವ ಕರ್ಮವನ್ನು ಪರಿಶುದ್ಧಿಗೊಳಿಸಿಕೊಂಡು, ನಿಷಿದ್ಧ ಕರ್ಮಗಳನ್ನು ತ್ಯಜಿಸಿ ವಿಹಿತ ಕರ್ಮಗಳನ್ನೇ ಮಾಡುವಂತೆಯೂ, ಅವುಗಳನ್ನು ಭಗವದರ್ಪಣ ಬುದ್ಧಿಯಿಂದ ಮಾಡುವಹಾಗೂ, ಇಷ್ಟುಮಾತ್ರ ಸರಿಪಡಿಸಿಕೊಂಡು ಎಲ್ಲರೂ ಕರ್ಮಗಳನ್ನು ಮಾಡಬಹುದು. ಇದರಿಂದ ಚಿತ್ತಶುದ್ಧಿಯಾಗಿ ಜ್ಞಾನವಾಗುತ್ತದೆ. ಆಗ ಕರ್ಮಗಳಿಂದ ಪ್ರಯೋಜನವೇ ಆಯಿತು. ಹೀಗೆ ಕರ್ಮಗಳನ್ನು ತೊರೆದು ಕರ್ಮಬಂಧನದಿಂದ ಪಾರಾಗುವ ಆಗ್ರಹವನ್ನು ಬಿಟ್ಟು, ವಿಹಿತ ಕರ್ಮಗಳನ್ನು ಈಶ್ವರ ಪ್ರೀತಿಗಾಗಿ ಮಾಡುವ ನವೀನ ಸ್ವಭಾವವನ್ನು ಪಡೆದು ಕರ್ಮಬಂಧನದಿಂದ ಮುಕ್ತರಾಗುವ ಉಪಾಯ ಮಾಡತಕ್ಕದ್ದು. ಹೀಗೆ ಮಾಡದೆ ಮೂಢತನದಿಂದ, ದುರಾಗ್ರಹದಿಂದ, ಕರ್ಮಗಳನ್ನು ತಡೆಗಟ್ಟುವುದರಿಂದ ಏನು ಪ್ರಯೋಜನವಾಗುತ್ತದೆ?

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ, ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್, ತೌ ಹ್ಯಸ್ಯ ಪರಿಪಂಥಿನೌ ॥೩೪॥**

ಒಂದೊಂದು ಇಂದ್ರಿಯಕ್ಕೂ ಅದರದರ ವಿಷಯ ಭೋಗಗಳಲ್ಲಿ ರಾಗದ್ವೇಷಗಳು ಇದ್ದೇ ಇರುತ್ತವೆ. ಆದುದರಿಂದ ವಿವೇಕಿಯಾದವನು ಅವುಗಳಿಗೆ ವಶನಾಗಬಾರದು. ಈ ರಾಗದ್ವೇಷಗಳೇ ಅವನಿಗೆ ಶತ್ರುಗಳು.

**ಶ್ರೇಯಾನ್ ಸ್ವಧರ್ಮೋ ವಿಗುಣಃ, ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ, ಪರಧರ್ಮೋ ಭಯಾವಹಃ ॥೩೫॥**

ಸ್ವಲ್ಪವೂ ವ್ಯತ್ಯಾಸವಿಲ್ಲದೆ ಮಾಡಲ್ಪಡುವ ಪರಧರ್ಮಕ್ಕಿಂತ ತನ್ನ ಧರ್ಮವು ಗುಣರಹಿತವಾದುದಾದರೂ, ಅದೇ ಶ್ರೇಯಸ್ಸಿಗೆ ಸಾಧನವಾಗಿರುವುದು. ಸ್ವಧರ್ಮಾಚರಣೆಯಲ್ಲಿ ಮರಣವಾದರೂ ಆದರಿಂದ ಶ್ರೇಯಸ್ಸನ್ನೇ ಹೊಂದುವನು. ಪರಧರ್ಮವಾದರೋ ಭಯವನ್ನು ಉಂಟುಮಾಡತಕ್ಕದ್ದಾಗಿರುವುದು.

**ಅರ್ಜುನ ಉವಾಚ**

**ಅಥ ಕೇನ ಪ್ರಯುಕ್ತೋಽಯಂ, ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ, ಬಲಾದಿವ ನಿಯೋಜಿತಃ ॥೩೬॥**

ಅರ್ಜುನನು ಹೀಗೆಂದು ಪ್ರಶ್ನೆಮಾಡಿದನು :– ಎಲೈ ವೃಷ್ಣಿ ವಂಶದಲ್ಲಿ ಹುಟ್ಟಿದ ಕೃಷ್ಣನೇ! ಪಾಪವನ್ನು ಮಾಡಬೇಕೆಂಬ ಇಚ್ಛೆ ಇಲ್ಲದಿದ್ದರೂ ಈ ಮನುಷ್ಯನು ಬಲಾತ್ಕಾರದಿಂದ ಪ್ರೇರಿಸಲ್ಪಟ್ಟವನಂತೆ ಯಾರ ಪ್ರೇರಣೆಯಿಂದ ಪಾಪವನ್ನು ಆಚರಿಸುತ್ತಾನೆ ?

**ಶ್ರೀ ಭಗವಾನುವಾಚ**

**ಕಾಮ ಏಷ ಕ್ರೋಧ ಏಷ, ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ, ವಿದ್ಧ್ಯೇನಮಿಹ ವೈರಿಣಮ್ ॥೩೭॥**

ಶ್ರೀ ಕೃಷ್ಣಭಗವಂತನು ಇಂತೆಂದನು ;– ಎಲೈ ಅರ್ಜುನನೇ! ಮನುಷ್ಯರನ್ನು ಪಾಪಕಾರ್ಯಗಳಲ್ಲಿ ಪ್ರವೃತ್ತಿಗೊಳಿಸುವುದು ಈ ಕಾಮವೇ; ಕ್ರೋಧರೂಪವಾಗಿರುವುದೂ ಈ ಕಾಮವೇ. ಇದು ರಜೋಗುಣದಿಂದ ಹುಟ್ಟಿದೆ. ಇದಲ್ಲದೆ ಈ ಕಾಮವನ್ನು ಭೋಗಗಳಿಂದ ತೃಪ್ತಿಪಡಿಸಲು ಆಗುವುದಿಲ್ಲ; ಮತ್ತು ಇದು ಎಲ್ಲಾ ಪಾಪಗಳನ್ನೂ ಮಾಡಿಸತಕ್ಕ ಮಹಾಪಾಪಿಯಾಗಿರುವುದು. ಆದುದರಿಂದ ಶ್ರೇಯೋಮಾರ್ಗಕ್ಕೆ ಈ ಕಾಮವೇ ವೈರಿ ಎಂದುತಿಳಿ.

**ಧೂಮೇನಾವ್ರಿಯತೇ ವಹ್ನಿ, ರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭ, ಸ್ತಥಾ ತೇನೇದಮಾವೃತಮ್ ॥೩೮॥**

ಹೊಗೆಯು ಅಗ್ನಿಯನ್ನು ಆವರಿಸಿರುವಂತೆ, ಧೂಳು ಕನ್ನಡಿಯನ್ನು ಮುಚ್ಚುವಂತೆ, ಜರಾಯುವೆಂಬ ಚರ್ಮವು ಗರ್ಭವನ್ನು ಆವರಿಸಿರುವಂತೆ, ಈ ಕಾಮವು ಜ್ಞಾನವನ್ನು ಆವರಿಸಿರುವುದು.

ಈ ಕಾಮವೇ ಮಲ, ವಿಕ್ಷೇಪ, ಆವರಣರೂಪದಿಂದ ಜ್ಞಾನವನ್ನು ಆವರಿಸಿದೆ: ಹೊಗೆಯ ದೃಷ್ಟಾಂತದಿಂದ ವಿಕ್ಷೇಪವೂ, ಕನ್ನಡಿ ದೃಷ್ಟಾಂತ ದಿಂದ ಮಲದೋಷವೂ, ಮತ್ತು ಜರಾಯುಜ ಚರ್ಮದಿಂದ ಆವರಣ ದೋಷವೂ, ವಿವಕ್ಷಿತವಾಗಿದೆ.

ಆವೃತಂ ಜ್ಞಾನಮೇತೇನ, ಜ್ಞಾನಿನೋ ನಿತ್ಯ ವೈರಿಣಾ ।
ಕಾಮರೂಪೇಣ ಕೌಂತೇಯ, ದುಷ್ಪೂರೇಣಾನಲೇನ ಚ ॥೩೯॥

ಎಲೈ ಕುಂತೀ ಪುತ್ರನೇ! ಜ್ಞಾನಿಗಳಿಗೆ ವೈರಿಯಾಗಿಯೂ, ತೃಪ್ತಿಪಡಿ ಸಲು ಅಸದಳವಾಗಿಯೂ, ಅಗ್ನಿಯಂತೆಯೂ ಇರುವ ಈ ಕಾಮದಿಂದಲೇ ಜ್ಞಾನವು ಮುಚ್ಚಲ್ಪಟ್ಟಿದೆ.

ಇಂದ್ರಿಯಾಣಿ ಮನೋಬುದ್ಧಿ, ರಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷ, ಜ್ಞಾನಮಾವೃತ್ಯ ದೇಹಿನಮ್ ॥೪೦॥

ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ—ಇವೇ ಈ ಕಾಮದ ವಾಸ ಸ್ಥಾನವು. ಈ ಇಂದ್ರಿಯ ಮನಸ್ಸು ಬುದ್ಧಿ—ಇವುಗಳನ್ನು ಆಶ್ರಯಿಸಿ ಈ ಕಾಮವು ಜ್ಞಾನವನ್ನು ಮುಸುಕಿ ದೇಹಿಯಾದ ಜೀವಾತ್ಮನನ್ನು ಮೋಹಗೊಳಿ ಸುವುದು.

ತಸ್ಮಾತ್ ತ್ವಮಿಂದ್ರಿಯಾಣ್ಯಾದೌ, ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ, ಜ್ಞಾನವಿಜ್ಞಾನ ನಾಶನಮ್ ॥೪೧॥

ಎಲೈ ಭರತ ಶ್ರೇಷ್ಠನೇ! ಆದಕಾರಣ ನೀನು ಮೊದಲು ಇಂದ್ರಿಯ ಗಳನ್ನು ನಿಗ್ರಹಿಸಿ ಜ್ಞಾನವಿಜ್ಞಾನವನ್ನು ನಾಶಮಾಡುವಂತಹ ಪಾಪಿಯಾದ ಈ ಕಾಮವನ್ನು ನಾಶಮಾಡು.

ಇಂದ್ರಿಯಾಣಿ ಪರಾಣ್ಯಾಹು, ರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿ ರ್ಯೋ, ಬುದ್ಧೇಃ ಪರತಸ್ತು ಸಃ ॥೪೨॥

ಈ ಸ್ಥೂಲಶರೀರಕ್ಕಿಂತಲೂ ಇಂದ್ರಿಯಗಳು ಶ್ರೇಷ್ಠವು. ಇಂದ್ರಿಯ ಗಳಿಗಿಂತಲೂ ಮನವು ಶ್ರೇಷ್ಠವು. ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವು. ಬುದ್ಧಿಗಿಂತಲೂ ಅತ್ಯಂತ ಶ್ರೇಷ್ಠವಾದುದೇ ಆತ್ಮವು.

ಏವಂ ಬುದ್ಧೇಃ ಪರಂ ಬುದ್ಧ್ವಾ, ಸಂಸ್ತಭ್ಯಾತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ, ಕಾಮರೂಪಂ ದುರಾಸದಮ್ ॥೪೩॥

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಕರ್ಮಯೋಗೋನಾಮ ತೃತೀಯೋಽಧ್ಯಾಯಃ**

ಎಲೈ ಮಹಾಬಾಹುವಾದ ಅರ್ಜುನನೇ! ಈ ರೀತಿಯಾಗಿ ಆತ್ಮನನ್ನು ಬುದ್ಧಿಗಿಂತಲೂ ಅತ್ಯಂತ ಶ್ರೇಷ್ಠನೆಂದು ತಿಳಿದವನಾಗಿ ವಿವೇಕಯುಕ್ತವಾದ ಬುದ್ಧಿಯಿಂದ ಮನಸ್ಸನ್ನು ವಶಪಡಿಸಿ, ದುರ್ಜಯವಾದ ಕಾಮರೂಪ ಶತ್ರುವನ್ನು ನಾಶಮಾಡು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಕರ್ಮಯೋಗವೆಂಬ
ಮೂರನೆಯ ಅಧ್ಯಾಯವು ಸಂಪೂರ್ಣವು.



## ಅಥ ಜ್ಞಾನಯೋಗೋನಾಮ ಚತುರ್ಥೋಽಧ್ಯಾಯಃ

### ಶ್ರೀ ಭಗವಾನುವಾಚ

**ಇಮಂ ವಿವಸ್ವತೇ ಯೋಗಂ, ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ, ಮನುರಿಕ್ಷ್ವಾಕವೇಽಬ್ರವೀತ್ ॥೧॥**

ಶ್ರೀ ಭಗವಂತನಿಂತೆಂದನು :- ನಾನು ನಾಶರಹಿತವಾದ ಈ ನಿಷ್ಕಾಮ ಕರ್ಮಯೋಗವನ್ನು ಪೂರ್ವದಲ್ಲಿ ಸೂರ್ಯನಿಗೆ ಹೇಳಿದೆನು. ಸೂರ್ಯನು ಅದನ್ನು ತನ್ನ ಪುತ್ರನಾದ ಮನುವಿಗೆ ಉಪದೇಶಿಸಿದನು. ಮನುಚಕ್ರವರ್ತಿಯು ಈ ಯೋಗವನ್ನು ತನ್ನ ಪುತ್ರನಾದ ಇಕ್ಷ್ವಾಕು ಮಹಾರಾಜನಿಗೆ ಹೇಳಿದನು.

**ಏವಂ ಪರಂಪರಾಪ್ರಾಪ್ತ, ಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ, ಯೋಗೋ ನಷ್ಟಃ ಪರಂತಪ ॥೨॥**

ಎಲೈ ಶತ್ರು ತಾಪಕನಾದ ಅರ್ಜುನನೇ ! ಈ ರೀತಿಯಾಗಿ ಪರಂಪರೆಯಿಂದ ಪ್ರಾಪ್ತವಾದ ಈ ನಿಷ್ಕಾಮಕರ್ಮಯೋಗವನ್ನು ರಾಜರ್ಷಿಗಳು ಬಲ್ಲರು. ಆದರೆ ಕಾಲಪ್ರವಾಹದಲ್ಲಿ ಬಹುಕಾಲ ಕಳೆದುಹೋಗಿರುವುದರಿಂದ ಈಗ ಈ ಲೋಕದಲ್ಲಿ ಆ ಯೋಗವು ನಷ್ಟವಾದಂತಾಗಿದೆ.

ಸ ಏವಾಯಂ ಮಯಾ ತೇಽದ್ಯ, ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾ ಚೇತಿ, ರಹಸ್ಯಂ ಹ್ಯೇತದುತ್ತಮಮ್ ॥೩॥

ನೀನು ನನ್ನ ಭಕ್ತನೂ ಮತ್ತು ಪ್ರಿಯ ಸಖನೂ ಆಗಿದ್ದೀಯೆ. ಆದ ಕಾರಣ ಆ ಪುರಾತನ ಯೋಗವನ್ನು ಈ ದಿನ ನಾನು ನಿನಗೆ ಹೇಳಿರುವೆನು. ಏಕೆಂದರೆ, ಈ ಯೋಗವು ಪುರಾತನವೂ, ರಹಸ್ಯವೂ ಮತ್ತು ಅತಿ ಉತ್ತಮವೂ ಆಗಿದೆ.

### ಅರ್ಜುನ ಉವಾಚ

ಅಪರಂ ಭವತೋ ಜನ್ಮ, ಪರಂ ಜನ್ಮ ವಿವಸ್ವತಃ ।
ಕಥಮೇತದ್ವಿಜಾನೀಯಾಂ, ತ್ವಮಾದೌ ಪ್ರೋಕ್ತವಾನಿತಿ ॥೪॥

ಅರ್ಜುನನಿಂತೆಂದನು :- ಎಲೈ ಭಗವಂತನೇ ! ನಿನ್ನ ಜನ್ಮವಾದರೋ ಈಗತಾನೇ (ಇತ್ತೀಚಿಗೆ) ಆಗಿರುವುದು. ಸೂರ್ಯನ ಜನ್ಮವಾದರೋ ಕಲ್ಪಾದಿಯಲ್ಲೇ ಆಗಿರುವುದು. ಹೀಗಿರುವಾಗ ನೀನೇ ಈ ಯೋಗವನ್ನು ಸೂರ್ಯನಿಗೆ ಹೇಳಿದೆ ಎಂಬುದನ್ನು ನಾನು ತಿಳಿಯುವ ಬಗೆ ಹೇಗೆ ?

### ಶ್ರೀ ಭಗವಾನುವಾಚ

ಬಹೂನಿ ಮೇ ವ್ಯತೀತಾನಿ, ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ, ನ ತ್ವಂ ವೇತ್ಥ ಪರಂತಪ ॥೫॥

ಶ್ರೀ ಭಗವಂತನಿಂತೆಂದನು :- ಎಲೈ ಅರ್ಜುನ ! ನಿನಗೂ ಮತ್ತು ನನಗೂ ಅನೇಕ ಜನ್ಮಗಳು ಕಳೆದುಹೋಗಿವೆ. ಎಲೈ ಪರಂತಪನೇ ! ಅವುಗಳೆಲ್ಲವನ್ನೂ ನಾನು ಬಲ್ಲೆ. ನೀನಾದರೋ ಅದನ್ನು ತಿಳಿಯದಿರುವೆ.

ಅಜೋಽಪಿ ಸನ್ನವ್ಯಯಾತ್ಮಾ, ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ, ಸಂಭವಾಮ್ಯಾತ್ಮಮಾಯಯಾ ॥೬॥

ನಾನು ಜನ್ಮರಹಿತನೂ, ಅವಿನಾಶಿಯೂ, ಸಮಸ್ತ ಪ್ರಾಣಿಗಳಿಗೆ ನಿಯಾಮಕನೂ ಆಗಿದ್ದಾಗ್ಯೂ, ನನ್ನ ಪ್ರಕೃತಿಯನ್ನು ನಾನು ಸ್ವಾಧೀನಮಾಡಿಕೊಂಡು ನನ್ನ ಯೋಗ ಮಾಯೆಯಿಂದಲೇ ಜನ್ಮಧಾರಣಮಾಡುವೆನು.

ಯದಾ ಯದಾ ಹಿ ಧರ್ಮಸ್ಯ, ಗ್ಲಾನಿರ್ಭವತಿ ಭಾರತ।
ಅಭ್ಯುತ್ಥಾನಮಧರ್ಮಸ್ಯ, ತದಾಽಽತ್ಮಾನಂ ಸೃಜಾಮ್ಯಹಮ್ ॥೭॥

ಎಲೈ ಭಾರತನೇ ! ಯಾವ ಯಾವ ಕಾಲದಲ್ಲಿ ಧರ್ಮಕ್ಕೆ ಹಾನಿಯಾಗುವುದೋ ಮತ್ತು ಅಧರ್ಮವು ವೃದ್ಧಿಯಾಗುವುದೋ ಆಯಾ ಸಮಯಗಳಲ್ಲಿ ನಾನು ದೇಹವನ್ನು ಸೃಷ್ಟಿಸಿಕೊಳ್ಳುವೆನು. ಅಂದರೆ, ಸ್ವೇಚ್ಛೆಯಿಂದ ಲೀಲಾಜಾಲವಾಗಿ ದೇಹಧಾರಣೆಗೈಯುವೆನು (ಅವತರಿಸುವೆನು).

**ಪರಿತ್ರಾಣಾಯ ಸಾಧೂನಾಂ, ವಿನಾಶಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ, ಸಂಭವಾಮಿ ಯುಗೇ ಯುಗೇ ॥೮॥**

ಸತ್ಪುರುಷರನ್ನು(ಉಪದೇಶದ್ವಾರಾ) ಉದ್ಧಾರಮಾಡುವುದಕ್ಕಾಗಿಯೂ, ದುಷ್ಟರನ್ನು(ಧರ್ಮ ವಿರೋಧಿಗಳನ್ನು)ನಾಶಗೊಳಿಸುವುದಕ್ಕಾಗಿಯೂ ಮತ್ತು ಧರ್ಮವನ್ನು ಪುನಃ ಸ್ಥಿರವಾಗಿ ಸ್ಥಾಪನೆಮಾಡುವುದಕ್ಕಾಗಿಯೂ, ಯುಗಯುಗದಲ್ಲಿಯೂ ನಾನು ಅವತಾರವನ್ನು ಮಾಡುತ್ತೇನೆ.

**ಜನ್ಮ ಕರ್ಮ ಚ ಮೇ ದಿವ್ಯ, ಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ, ನೈತಿ ಮಾಮೇತಿ ಸೋಽರ್ಜುನ ॥೯॥**

ಎಲೈ ಅರ್ಜುನನೇ ! ನನ್ನ ಜನ್ಮವೂ ಮತ್ತು ಕರ್ಮವೂ ದಿವ್ಯವಾದುವು, ಎಂದರೆ ನಿರ್ಮಲವೂ, ಅಲೌಕಿಕವೂ ಆದುದೆಂದು ಯಾರು ಯಥಾರ್ಥವಾಗಿ ತಿಳಿಯುವನೋ ಅವನು ಮರಣಾನಂತರ ಪುನರ್ಜನ್ಮವನ್ನು ಹೊಂದದೆ ನನ್ನನ್ನೇ ಸೇರುವನು.

**ವೀತರಾಗಭಯಕ್ರೋಧಾ, ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ, ಪೂತಾ ಮದ್ಭಾವಮಾಗತಾಃ ॥೧೦॥**

ರಾಗ ಭಯ ಕ್ರೋಧಗಳಿಂದ ರಹಿತನಾಗಿ, ನನ್ನಲ್ಲೇ ನೆಟ್ಟ ಚಿತ್ತವುಳ್ಳವರಾಗಿ, ನನ್ನನ್ನೇ ಶರಣು ಹೊಂದಿ, ಜ್ಞಾನವೆಂಬ ತಪಸ್ಸಿನಿಂದ ಪಾಪರಹಿತರಾದ (ಪವಿತ್ರರಾದ) ಅನೇಕ ಸದ್ಭಕ್ತರು ನನ್ನ ಸ್ವರೂಪವನ್ನು ಹೊಂದಿರುವರು.

**ಯೇ ಯಥಾ ಮಾಂ ಪ್ರಪದ್ಯಂತೇ, ತಾಂ ಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ, ಮನುಷ್ಯಾಃ ಪಾರ್ಥ ಸರ್ವಶಃ ॥೧೧॥**

ಯಾರು ಯಾರು ಯಾವ ಪ್ರಕಾರದಲ್ಲಿ ನನ್ನನ್ನು ಭಜಿಸುವರೋ ಅವರಿಗೆ ಅದೇಪ್ರಕಾರವಾಗಿ ಮನೋವಾಂಛಿತ ಫಲಗಳನ್ನು ಕೊಟ್ಟು ಅನುಗ್ರಹಿಸು

ತ್ತೇನೆ. ಹೇ ಅರ್ಜುನಾ ! ಇಂದ್ರಾದಿ ದೇವತೆಗಳ ಭಕ್ತರಾದವರೂ ಸಹ ಎಲ್ಲಾ ವಿಧದಲ್ಲಿಯೂ ನನ್ನ ಭಜನೆಯ ಮಾರ್ಗವನ್ನೇ ಅನುಸರಿಸುತ್ತಾರೆ.

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ, ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ, ಸಿದ್ಧಿರ್ಭವತಿ ಕರ್ಮಜಾ ॥೧೨॥**

ಈ ಲೋಕದಲ್ಲಿ ಸಕಾಮಿಗಳಾದವರು ಕರ್ಮಫಲಗಳನ್ನು ಅಪೇಕ್ಷಿಸಿ ಇಂದ್ರಾದಿ ದೇವತೆಗಳನ್ನು ಆರಾಧಿಸುತ್ತಾರೆ. ಕಾರಣವೇನೆಂದರೆ–ಮನುಷ್ಯ ಲೋಕದಲ್ಲಿ ಕರ್ಮಜನ್ಯವಾದ ಸಿದ್ಧಿಯು ಶೀಘ್ರದಲ್ಲೇ ಆಗುವುದು.

ತಮ್ಮನ್ನು ಆರಾಧಿಸಿದ ದೇವತೆಗಳು ಸಕಾಮಭಕ್ತರಿಗೆ ತಕ್ಷಣ ಅಭೀಷ್ಟ ಫಲಗಳನ್ನು ಕೊಟ್ಟು ತೃಪ್ತಿಪಡಿಸುವರು.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ, ಗುಣಕರ್ಮ ವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ, ವಿದ್ಧ್ಯಕರ್ತಾರಮವ್ಯಯಮ್ ॥೧೩॥**

ಪರಮೇಶ್ವರನಾದ ನನ್ನಿಂದ ಗುಣಕರ್ಮ ವಿಭಾಗದಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳೂ ಸೃಷ್ಟಿಸಲ್ಪಟ್ಟವು. ಈ ರೀತಿಯಾಗಿ ಸೃಷ್ಟಿಗೆ ನಾನು ಕರ್ತನಾದರೂ ವಾಸ್ತವವಾಗಿ ನನ್ನನ್ನು ಅಕರ್ತನೆಂತಲೂ, ಅವ್ಯಯನೆಂತಲೂ ತಿಳಿಯುವನಾಗು.

**ನ ಮಾಂ ಕರ್ಮಾಣಿ ಲಿಂಪಂತಿ, ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ, ಕರ್ಮಭಿರ್ನ ಸ ಬಧ್ಯತೇ ॥೧೪॥**

ಕರ್ಮಫಲದಲ್ಲಿ ನನಗೆ ಇಚ್ಛೆಯಿಲ್ಲದ ಕಾರಣ ಸೃಷ್ಟ್ಯಾದಿ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ. ಈ ರೀತಿಯಾಗಿರುವ ನನ್ನನ್ನು ಯಾವನು ತಿಳಿಯುವನೋ ಅವನೂ ಕರ್ಮಗಳಿಂದ ಬಂಧಿತನಾಗುವುದಿಲ್ಲ.

**ಏವಂ ಜ್ಞಾತ್ವಾ ಕೃತಂ ಕರ್ಮ, ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ, ಪೂರ್ವೈಃ ಪೂರ್ವತರಂ ಕೃತಮ್॥**

ಈ ರೀತಿಯಾಗಿ ನನ್ನನ್ನು ಅಕರ್ತಾ,ಅಭೋಕ್ತನೆಂದು ತಿಳಿದುಕೊಂಡು ಪೂರ್ವದ ಮುಮುಕ್ಷುಗಳೂ ಕೂಡ ಈ ಶ್ರೇಷ್ಟವಾದ ನಿಷ್ಕಾಮಕರ್ಮವನ್ನೇ ಆಚರಿಸುವರು. ಅಲ್ಲದೆ ಅವರಿಗಿಂತಲೂ ಪೂರ್ವಿಕರಾದ ಜನಕಾದಿಗಳು ಜ್ಞಾನಸಂಪನ್ನರಾದರೂ ಲೋಕ ಕಲ್ಯಾಣಾರ್ಥವಾಗಿ ಕರ್ಮಯೋಗವನ್ನು ಆಚರಿಸಿರುವರು. ಆದುದರಿಂದ ನೀನು ಮುಮುಕ್ಷುವಾಗಲಿ ಜ್ಞಾನಿಯಾಗಲಿ ಕರ್ಮಯೋಗವನ್ನು ಆಚರಿಸಲೇಬೇಕು.

**ಕಿಂ ಕರ್ಮ ಕಿಮಕರ್ಮೇತಿ, ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ, ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥**

ಕರ್ಮವೆಂದರೇನು ? ಅಕರ್ಮವೆಂದರೇನು ? ಎಂಬುದರ ವಿಷಯ ದಲ್ಲಿ ಶಾಸ್ತ್ರಜ್ಞರಾದವರೂ ಕೂಡ ಯಥಾರ್ಥವನ್ನು ತಿಳಿಯಲಾರದೆ ಮೋಹ ವನ್ನು ಹೊಂದಿದ್ದಾರೆ. ಆದಕಾರಣ ಈ ಕರ್ಮ, ಅಕರ್ಮಗಳ ಯಥಾರ್ಥ ಸ್ವರೂಪವನ್ನು ನಿನಗೆ ಹೇಳುತ್ತೇನೆ. ಇದರ ಯಥಾರ್ಥ ಜ್ಞಾನದಿಂದ ನೀನು ಅಶುಭವಾದ ಸಂಸಾರದಿಂದ ಮುಕ್ತನಾಗುವೆ.

**ಕರ್ಮಣೋಹ್ಯಪಿ ಬೋದ್ಧವ್ಯಂ, ಬೋದ್ಧವ್ಯಂ ಚ ವಿಕರ್ಮಣಃ।**
**ಅಕರ್ಮಣಶ್ಚ ಬೋದ್ಧವ್ಯಂ, ಗಹನಾ ಕರ್ಮಣೋ ಗತಿಃ ॥೧೭॥**

ಕರ್ಮ, ಅಕರ್ಮ, ವಿಕರ್ಮಗಳ(X)ಸ್ವರೂಪವು ತಿಳಿಯಲು ಯೋಗ್ಯವಾ ಗಿರುವುವು. ಏಕೆಂದರೆ, ಕರ್ಮದ ಗತಿಯು ಅತಿ ಗಹನವಾದುದು ಅಂದರೆ ಕರ್ಮದ ತತ್ವವು ಅತಿ ದುರ್ಬೋಧವಾಗಿರುವುದು.

**ಕರ್ಮಣ್ಯಕರ್ಮ ಯಃ ಪಶ್ಯೇ, ದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು, ಸ ಯುಕ್ತಃ ಕೃತ್ಸ್ನ ಕರ್ಮಕೃತ್ ॥**

ಯಾರು ಕರ್ಮದಲ್ಲಿ ಅಕರ್ಮವನ್ನು ನೋಡುವನೋ(A)ಅವನೇ ಮನು ಷ್ಯರಲ್ಲಿ ಬುದ್ಧಿವಂತನು; ಅವನೇ ಯೋಗಿಯು; ಮತ್ತು ಅವನೇ ಸಮಸ್ತ ಕರ್ಮವನ್ನೂ ಮಾಡತಕ್ಕವನು.

ಕರ್ಮದಲ್ಲಿ ಅಕರ್ಮವನ್ನು ನೋಡುವುದೆಂದರೆ—ಕರ್ಮಜನ್ಯವಾದ ಸ್ಥೂಲದೇಹದಲ್ಲಿ ಆತ್ಮನನ್ನು ಅಸಂಗ, ಅಕರ್ತಾ, ಅಭೋಕ್ತಾ, ಆನಂದ ರೂಪನೆಂದು ತಿಳಿಯುವಿಕೆ. ಉದಾ :- ನಾವೆಯಲ್ಲಿ ಕುಳಿತು ಹೋಗುತ್ತಿ ರುವವನಿಗೆ ನದಿಯ ದಡದ ಗಿಡಗಳು ಚಲಿಸಿದಂತೆ ಕಾಣಿಸುವುವು. ನಿಜ ವಾಗಿಯೂ ಗಿಡಗಳು ಚಲಿಸುತ್ತಿಲ್ಲ; ಚಲಿಸುತ್ತಿರುವುದು ದೋಣಿ. ಇದ ರಂತೆ ಕರ್ಮವು ದೇಹೇಂದ್ರಿಯಗಳಿಗೆ ಸಂಬಂಧಿಸಿದ್ದರೂ ಅಸಂಗಾತ್ಮನಲ್ಲಿ ಅಧ್ಯಾಸವಾಗಿದೆ. ಇದನ್ನು ಧರ್ಮಾಧ್ಯಾಸವೆನ್ನುವರು. ವಸ್ತುತಃ ಆತ್ಮ ನಲ್ಲಿ ಯಾವ ಕರ್ಮವೂ ಇಲ್ಲ; ಆತ್ಮನು ಅಸಂಗನು—ಈ ರೀತಿ ನೋಡುವುದೇ

---

(X) ಕರ್ಮ ಶಾಸ್ತ್ರಗಳು ವಿಧಿಸಿರುವ ಸತ್ಕರ್ಮ—ಅಕರ್ಮ—ಕರ್ಮ ಮಾಡದಿರುವುದು—ವಿಕರ್ಮ—ಶಾಸ್ತ್ರವಿರುದ್ಧ ಕರ್ಮ.

(A) ಮತ್ತು ಅಕರ್ಮದಲ್ಲಿ ಕರ್ಮವನ್ನು ನೋಡುವನೋ

ಕರ್ಮದಲ್ಲಿ ಅಕರ್ಮ ನೋಡುವಿಕೆ. ಅಥವಾ ಆಕಾಶದಲ್ಲಿ ಮೋಡಗಳು ಎಷ್ಟು ಚಲಿಸಿದರೂ ಆಕಾಶಮಾತ್ರ ಅಚಲವಾಗಿರುವಂತೆ.

ಅಕರ್ಮದಲ್ಲಿ ಕರ್ಮ :- ಅಸಂಗ, ನಿಷ್ಕ್ರಿಯಾತ್ಮನಲ್ಲಿ ದೇಹಧರ್ಮಗಳನ್ನು ಆರೋಪಣೆಗೈಯುವುದು.

ಹೀಗೆ ಆತ್ಮನ ಸ್ವರೂಪವನ್ನು ಚೆನ್ನಾಗಿ ತಿಳಿದವನೇ ಯೋಗಿ; ಅವನೇ ಸಕಲ ಕರ್ಮಗಳನ್ನು ಮಾಡತಕ್ಕವನು. ಏಕೆಂದರೆ, ಕರ್ಮಮಾಡಿದರೂ ಅಸಂಗನಾದ್ದರಿಂದ ಕರ್ಮರಹಿತನೆಂತಲೇ ಭಾವ.

ಯಸ್ಯ ಸರ್ವೇ ಸಮಾರಂಭಾಃ, ಕಾಮಸಂಕಲ್ಪ ವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ, ತಮಾಹುಃ ಪಂಡಿತಂ ಬುಧಾಃ ॥೧೯॥

ಯಾರ ಸಮಸ್ತ ಕರ್ಮವ್ಯಾಪಾರಗಳು ನಿಷ್ಕಾಮನೆಯಿಂದ ಆಗಿರುವುವೋ, ಜ್ಞಾನಾಗ್ನಿಯಿಂದ ಯಾರಕರ್ಮಗಳು ಭಸ್ಮವಾಗಿಹೋಗಿರುವುವೋ, ಅವನನ್ನು ಜ್ಞಾನಿಗಳು ಪಂಡಿತನೆಂದು ಕರೆಯುವರು.

ತ್ಯಕ್ತ್ವಾ ಕರ್ಮಫಲಾಸಂಗಂ, ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ, ನೈವ ಕಿಂಚಿತ್ಕರೋತಿ ಸಃ ॥೨೦॥

ಯಾವನು ಕರ್ಮದ ಫಲಾಪೇಕ್ಷೆಯನ್ನು ಬಿಟ್ಟು, ನಿರಾಶ್ರಯನಾಗಿ ನಿತ್ಯತೃಪ್ತನಾಗಿರುವನೋ ಅವನು ಪ್ರಾರಬ್ಧಾನುಸಾರವಾಗಿ ಕರ್ಮದಲ್ಲಿ ಪ್ರವೃತ್ತನಾದರೂ ಏನೂ ಮಾಡುವವನಲ್ಲವೆಂದು ತಿಳಿಯತಕ್ಕದ್ದು.

ನಿರಾಶೀರ್ಯತಚಿತ್ತಾತ್ಮಾ, ತ್ಯಕ್ತ ಸರ್ವಪರಿಗ್ರಹಃ ।
ಶಾರೀರಂ ಕೇವಲಂ ಕರ್ಮ, ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೨೧॥

ಯಾರು ಆಶೆಯಿಲ್ಲದವನಾಗಿರುವನೋ, ಶರೀರ ಇಂದ್ರಿಯ ಅಂತಃಕರಣವನ್ನು ಸ್ವಾಧೀನಪಡಿಸಿಕೊಂಡಿರುವನೋ ಮತ್ತು ಸ್ತ್ರೀ ಪುತ್ರ ಧನಾದಿ ವಿಷಯ ಸಂಗ್ರಹ ಮಾಡದೆ ತ್ಯಜಿಸಿರುವನೋ ಅವನು ಕರ್ತೃತ್ವಾಭಿಮಾನವಿಲ್ಲದೆ ಶರೀರ ಸ್ಥಿತಿಗಾಗಿ ಮಾತ್ರ (ಭಿಕ್ಷಾಟನಾದಿ) ಕರ್ಮವನ್ನು ಮಾಡುವವನಾದರೆ ಅದರಿಂದ ಪಾಪವನ್ನು ಹೊಂದುವುದಿಲ್ಲ. (ಅವನ ಕರ್ಮವು ಕರ್ಮವೇ ಅಲ್ಲವೆಂಬ ಭಾವ.)

ಯದೃಚ್ಛಾಲಾಭಸಂತುಷ್ಟೋ, ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವಸಿದ್ಧೌ ಚ, ಕೃತ್ವಾಪಿ ನ ನಿಬಧ್ಯತೇ ॥೨೨॥

ಯಾರು ತನ್ನ ಇಚ್ಛೆಯಿಲ್ಲದೆ ಪ್ರಾರಬ್ಧಾನುಸಾರವಾಗಿ ಪ್ರಾಪ್ತವಾದ ವಸ್ತುವಿನಿಂದಲೇ ಸಂತುಷ್ಟಪಡುವನೋ, ಶೀತೋಷ್ಣ ಸುಖದುಃಖಾದಿ ದ್ವಂದ್ವ ಧರ್ಮಗಳನ್ನು ದಾಟಿರುವನೋ, ಮಾತ್ಸರ್ಯವಿಲ್ಲದಿರುವನೋ, ಈಶ್ವರ ಪ್ರಸಾದ ಅಥವಾ ಚಿತ್ತಶುದ್ಧಿ ರೂಪವಾದ ಸಿದ್ಧಿಯು ಆದರೂ ಆಗದಿದ್ದರೂ ಸಮತೆ ಯಿಂದ ಇರುವನೋ, ಇಂತಹ ಕರ್ಮಯೋಗಿಯು ಪ್ರಾರಬ್ಧಜನಿತ ಕರ್ಮ ಗಳನ್ನು ಮಾಡಿದಾಗ್ಯೂ ಬಂಧಿಸಲ್ಪಡುವುದಿಲ್ಲ.

**ಗತಸಂಗಸ್ಯ ಮುಕ್ತಸ್ಯ, ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ, ಸಮಗ್ರಂ ಪ್ರವಿಲೀಯತೇ ॥೨೩॥**

ಫಲಾಭಿಲಾಷೆಯನ್ನು ಬಿಟ್ಟು ಅಧ್ಯಾಸದಿಂದ ನಿರ್ಮುಕ್ತನಾಗಿ ಯಾವನ ಆಸಕ್ತಿಯು ಸರ್ವಥಾ ನಷ್ಟವಾಗಿ ಹೋಗಿದೆಯೋ, ಯಾವನ ಚಿತ್ತವು ನಿರಂ ತರದಲ್ಲಿಯೂ ಜ್ಞಾನದಲ್ಲಿ ನಿಂತಿರುವುದೋ—ಇಂತಹ ಪುರುಷನು ಪರಮೇ ಶ್ವರ ಪ್ರೀತ್ಯರ್ಥವಾಗಿ ಮಾಡುವ ಸಮಸ್ತ ಕರ್ಮಗಳೂ ಬಂಧಕರವಾಗದೆ ವಿಲೀನವಾಗುತ್ತವೆ.

**ಬ್ರಹ್ಮಾರ್ಪಣಂ ಬ್ರಹ್ಮ ಹವಿ, ರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ, ಬ್ರಹ್ಮ ಕರ್ಮಸಮಾಧಿನಾ ॥೨೪॥**

ಸರ್ವತ್ರ ಬ್ರಹ್ಮದೃಷ್ಟಿಯುಳ್ಳವನು ಲೋಕಸಂಗ್ರಹಾರ್ಥವಾಗಿ ಯಜ್ಞಾ ದಿ ಕರ್ಮಗಳನ್ನು ಮಾಡತಕ್ಕವನಾದರೂ ಅವನ ಸೃಕ್ ಸ್ರುವಾದಿ ಹವನ ಪಾತ್ರೆಗಳೂ ಬ್ರಹ್ಮವೇ, ಹವನ ದ್ರವ್ಯವೂ ಬ್ರಹ್ಮವೇ, ಬ್ರಹ್ಮರೂಪ ಅಗ್ನಿ ಯಲ್ಲಿ ಬ್ರಹ್ಮರೂಪ ಯಜಮಾನನಿಂದ ಮಾಡಲ್ಪಟ್ಟ ಹವನವೂ ಬ್ರಹ್ಮವೇ. ಈ ರೀತಿಯಾಗಿ ಸರ್ವತ್ರ ಬ್ರಹ್ಮದೃಷ್ಟಿಯುಕ್ತವಾದ ಅಂತಃಕರಣವುಳ್ಳವನಿಂದ ಹೊಂದಲು ಯೋಗ್ಯವಾದ ಸ್ಥಾನವೂಕೂಡ ಬ್ರಹ್ಮವೇ ಆಗಿರುವುದು.

**ದೈವಮೇವಾಪರೇ ಯಜ್ಞಂ, ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ, ಯಜ್ಞೇನೈವೋಪಜುಹ್ವತಿ ॥೨೫॥**

ಬೇರೆ ಕೆಲವು ಯೋಗಿಗಳು ಇಂದ್ರಾದಿ ದೇವತೆಗಳನ್ನು ಉದ್ದೇಶಿಸಿ ಯಜ್ಞವನ್ನು ಮಾಡುವರು. ಮತ್ತು ಜ್ಞಾನಯೋಗಿಗಳಾದವರು ಜ್ಞಾನ ಯಜ್ಞದಿಂದ ಬ್ರಹ್ಮರೂಪ ಅಗ್ನಿಯಲ್ಲಿ ಆತ್ಮವೆಂಬ ಹವಿಸ್ಸನ್ನು ಹವನಮಾಡು ವರು (ಅಂದರೆ, ಬ್ರಹ್ಮಾತ್ಮ ಐಕ್ಯಾನುಸಂಧಾನ ಮಾಡುತ್ತಾರೆ).

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ, ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ ವಿಷಯಾನನ್ಯ, ಇಂದ್ರಿಯಾಗ್ನಿಷು ಜುಹ್ವತಿ ॥೨೬॥**

ಇನ್ನು ಕೆಲವರು ಶ್ರೋತ್ರಾದಿ ಅದರದರ ವ್ಯಾಪಾರ ನಿರೋಧರೂಪ ಸಂಯಮಾಗ್ನಿಗಳಲ್ಲಿ ಹವನಮಾಡುತ್ತಾರೆ; ಹಾಗೆಯೇ ಇನ್ನುಕೆಲವರು ಶಬ್ದಾದಿ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಯಲ್ಲಿ ಹವನಮಾಡುತ್ತಾರೆ.

**ಸರ್ವಾಣೀಂದ್ರಿಯಕರ್ಮಾಣಿ, ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ, ಜುಹ್ವತಿ ಜ್ಞಾನ ದೀಪಿತೇ ॥೨೭॥**

ಮತ್ತೆ ಕೆಲವರು ಇಂದ್ರಿಯಗಳ ಮತ್ತು ಪ್ರಾಣಗಳ ಸಮಸ್ತ ಕರ್ಮಗಳನ್ನೂ ಜ್ಞಾನದಿಂದ ಪ್ರಜ್ವಲಿತವಾದ ಆತ್ಮಧ್ಯಾನವೆಂಬ ಅಗ್ನಿಯಲ್ಲಿ ಹವನ ಮಾಡುವರು.

**ದ್ರವ್ಯಯಜ್ಞಾಸ್ತಪೋಯಜ್ಞಾ, ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯ ಜ್ಞಾನಯಜ್ಞಾಶ್ಚ, ಯತಯಃ ಸಂಶಿತವ್ರತಾಃ ॥೨೮॥**

ಕೆಲವರು ಸತ್ಪಾತ್ರದಲ್ಲಿ ದ್ರವ್ಯಾರ್ಪಣರೂಪವಾದ ಯಜ್ಞವನ್ನೂ, ತೀಕ್ಷ್ಣವ್ರತವುಳ್ಳ ಕೆಲವರು ಕೃಚ್ಛ್ರ ಚಾಂದ್ರಾಯಣ ಪಂಚಾಗ್ನಿ ತಪಸ್ಸು—ಮುಂತಾದ ತಪೋಯಜ್ಞವನ್ನೂ, ಕೆಲವರು ಚಿತ್ತವೃತ್ತಿ ನಿರೋಧ ರೂಪವಾದ ಅಷ್ಟಾಂಗಯೋಗರೂಪ ಯಜ್ಞವನ್ನೂ, ಕೆಲವರು ವಿಧಿಪೂರ್ವಕ ಗುರುಕುಲವಾಸಮಾಡಿ ವೇದಾಧ್ಯಯನವೆಂಬ ಸ್ವಾಧ್ಯಾಯ ಯಜ್ಞವನ್ನೂ, ಯತಿಗಳಾದ ಸಂನ್ಯಾಸಿಗಳು ಜ್ಞಾನಯಜ್ಞವನ್ನೂ ಮಾಡುವರು.

**ಅಪಾನೇ ಜುಹ್ವತಿ ಪ್ರಾಣಂ, ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ, ಪ್ರಾಣಾಯಾಮ ಪರಾಯಣಾಃ ॥೨೯॥**

ಪ್ರಾಣಾಯಾಮ ತತ್ಪರರಾದ ಕೆಲವರು ಅಪಾನವೆಂಬ ಅಗ್ನಿಯಲ್ಲಿ ಪ್ರಾಣವನ್ನೂ, ಹಾಗೆಯೇ ಪ್ರಾಣವೆಂಬ ಅಗ್ನಿಯಲ್ಲಿ ಅಪಾನವನ್ನೂ ಹವನ ಮಾಡುವರು. ಇನ್ನೂ ಕೆಲವರು ಪ್ರಾಣಾಪಾನಗತಿಗಳೆರಡನ್ನೂ ನಿರೋಧ ಮಾಡಿ ಕುಂಭಕವೆಂಬ ಪ್ರಾಣಾಯಾಮವನ್ನು ಮಾಡುವರು.

**ಅಪರೇ ನಿಯತಾಹಾರಾಃ, ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ, ಯಜ್ಞಕ್ಷಪಿತ ಕಲ್ಮಷಾಃ ॥೩೦॥**

ಇನ್ನೂ ಕೆಲವರು ನಿಯತಾಹಾರವುಳ್ಳವರಾಗಿ ಪ್ರಾಣಾದಿ ವಾಯುಗಳಲ್ಲಿ ಯಾವ ವಾಯುವು ಸ್ವಾಧೀನವಾಗಿರುವುದೋ ಅದನ್ನೇ ಅಗ್ನಿಎಂದು ಭಾವಿಸಿ

ಅವುಗಳಲ್ಲಿ ನಿರುದ್ಧವಾಗದ ವಾಯುಗಳನ್ನು ಹವನಮಾಡುವರು ಅಥವಾ ನಿರೋಧಮಾಡುವರು. ಈ ಹಿಂದೆ ಹೇಳಿದವರೆಲ್ಲರೂ ಯಜ್ಞವನ್ನು ಬಲ್ಲವರಾಗಿ ಯಜ್ಞದಿಂದಲೇ ಸಮಸ್ತ ಪಾಪಗಳನ್ನೂ ಕಳೆದುಕೊಂಡಿರುವವರಾಗಿರುತ್ತಾರೆ.

ಯಜ್ಞಶಿಷ್ಟಾಮೃತಭುಜೋ, ಯಾಂತಿ ಬ್ರಹ್ಮ ಸನಾತನಮ್ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ, ಕುತೋಽನ್ಯಃ ಕುರುಸತ್ತಮ॥

ಹಿಂದೆ ಹೇಳಿದ ಯಜ್ಞಗಳನ್ನು ಮಾಡಿ ಅಮೃತಪ್ರಾಯವಾದ ಯಜ್ಞಶೇಷವನ್ನು ಯಾರು ಭುಂಜಿಸುವರೋ ಅಂತಹ ಯೋಗಿಗಳು ನಿತ್ಯವಾದ ಪರಬ್ರಹ್ಮವನ್ನೇ ಹೊಂದುವರು. ಎಲೈ ಕುರುಶ್ರೇಷ್ಟನಾದ ಅರ್ಜುನನೇ! ಯಜ್ಞವನ್ನು ಮಾಡದಿರುವವನಿಗೆ ಈ ಲೋಕದಲ್ಲಿಯೂ ಸುಖವುಂಟಾಗುವುದಿಲ್ಲ ಅಂದಮೇಲೆ ಇನ್ನು ಪರಲೋಕದಲ್ಲಿ ಸುಖವೆಲ್ಲಿಯದು ?

ಏವಂ ಬಹುವಿಧಾ ಯಜ್ಞಾ, ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾ೯ ವಿದ್ಧಿ ತಾನ್ಸರ್ವಾ, ನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥

ಈ ರೀತಿಯಾಗಿ ಅನೇಕ ವಿಧವಾದ ಯಜ್ಞಗಳನ್ನು ವೇದವಾಣಿಯು ವಿಸ್ತಾರವಾಗಿ ನಿರೂಪಿಸಿದೆ. ಅವುಗಳೆಲ್ಲವೂ ಕರ್ಮದಿಂದ ಹುಟ್ಟಿದವುಗಳೆಂದು ತಿಳಿ. ಈ ಪ್ರಕಾರ ಯಜ್ಞಗಳ ಸ್ವರೂಪವನ್ನು ತಿಳಿಯುವೆಯಾದರೆ ಮುಕ್ತನಾಗುವೆ.

ಶ್ರೇಯಾ೯ ದ್ರವ್ಯಮಯಾದ್ಯಜ್ಞಾ, ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ, ಜ್ಞಾನೇ ಪರಿಸಮಾಪ್ಯತೇ ॥೩೩॥

ಎಲೈ ಶತ್ರುತಾಪಕನಾದ ಅರ್ಜುನನೇ! ದ್ರವ್ಯದಿಂದ ಸಾಧ್ಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಶ್ರೇಷ್ಠವಾಗಿರುವುದು. ಏಕೆಂದರೆ, ಜ್ಞಾನದಲ್ಲಿ ಸಮಸ್ತ ಕರ್ಮಗಳು ಪರ್ಯವಸಾನವಾಗುತ್ತವೆ.

ತದ್ವಿದ್ಧಿ ಪ್ರಣಿಪಾತೇನ, ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ, ಜ್ಞಾನಿನಸ್ತತ್ತ್ವದರ್ಶಿನಃ ॥೩೪॥

ಆ ಜ್ಞಾನವನ್ನು ನೀನು ಶ್ರೋತ್ರಿಯ ಬ್ರಹ್ಮನಿಷ್ಠರಾದ ಆಚಾರ್ಯರ ಬಳಿಗೆ ಹೋಗಿ ವಿಧಿಪೂರ್ವಕವಾಗಿ ಅವರಿಗೆ ದೀರ್ಘದಂಡ ಪ್ರಣಾಮಗಳನ್ನು ಮಾಡುವುದರಿಂದಲೂ, ಅವರ ಸೇವೆಯಿಂದಲೂ ಮತ್ತು ವಿನಯದಿಂದ ಅವರಿಗೆ

ಪ್ರಶ್ನೆಮಾಡುವುದರಿಂದಲೂ ತಿಳಿಯುವವನಾಗು. ಈ ರೀತಿಯಾಗಿ ಸೇವಾದಿಗಳಿಂದ ಪ್ರಸನ್ನರಾದ ಜ್ಞಾನಿಗಳು ಅಧಿಕಾರಿಯಾದ ನಿನಗೆ ಆತ್ಮಜ್ಞಾನವನ್ನು ಉಪದೇಶಿಸುತ್ತಾರೆ.

(1) ಪ್ರಮಾಣದಿಂದ ವಿನಯಶ್ರದ್ಧಾಭಕ್ತಿಗಳನ್ನೂ, (2) ಸೇವೆಯಿಂದ ಅಹಂಕಾರ ಪರಿತ್ಯಾಗವನ್ನೂ (3) ಪ್ರಶ್ನೆಯಿಂದ ಮುಮುಕ್ಷುತೆ (ಉತ್ಕಟ ಇಚ್ಛೆ) ಯನ್ನೂ ಸೂಚಿಸಲಾಗಿದೆ.

ಯಜ್ಜ್ಞಾತ್ವಾ ನ ಪುನರ್ಮೋಹ, ಮೇವಂ ಯಾಸ್ಯಸಿ ಪಾಂಡವ ।
ಯೇನ ಭೂತಾನ್ಯಶೇಷೇಣ, ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥೩೫॥

ಎಲೈ ಪಾಂಡುಪುತ್ರನೇ, ಯಾವ ಜ್ಞಾನವನ್ನು ಪಡೆದಮೇಲೆ ಪುನಃ ಯಾವಾಗಲೂ ನೀನು ಈ ಪ್ರಕಾರವಾದ ಮೋಹವನ್ನು ಪಡೆಯುವುದಿಲ್ಲವೋ ಅಂಥಾ ಜ್ಞಾನದಿಂದ ಸರ್ವ ಭೂತಗಳನ್ನೂ ನಿನ್ನಲ್ಲಿಯೂ ಹಾಗೆಯೇ ಪರಮೇಶ್ವರನಾದ ನನ್ನಲ್ಲಿಯೂ ನೋಡುವೆ.

ಅಪಿ ಚೇದಸಿ ಪಾಪೇಭ್ಯಃ, ಸರ್ವೇಭ್ಯಃ ಪಾಪ ಕೃತ್ತಮಃ ।
ಸರ್ವಂ ಜ್ಞಾನಪ್ಲವೇನೈವ, ವೃಜಿನಂ ಸಂತರಿಷ್ಯಸಿ ॥೩೬॥

ನೀನು ಪಾಪವನ್ನು ಮಾಡುವವರಲ್ಲಿ ಅತ್ಯಂತ ಪಾಪಮಾಡತಕ್ಕವನಾಗಿದ್ದರೂ ಜ್ಞಾನರೂಪವಾದ ನಾವೆಯ ಸಹಾಯದಿಂದ ಪಾಪಸಮುದ್ರವನ್ನು ದಾಟುವೆ.

ಯಥೈಧಾಂಸಿ ಸಮಿದ್ಧೋಽಗ್ನಿ, ರ್ಭಸ್ಮಸಾತ್ ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ, ಭಸ್ಮಸಾತ್ಕುರುತೇ ತಥಾ ॥೩೭॥

ಅರ್ಜುನಾ ! ಉರಿಯುತ್ತಿರುವ ಅಗ್ನಿಯು ಕಟ್ಟಿಗೆಗಳನ್ನು ಸುಟ್ಟು ಹೇಗೆ ಬೂದಿಮಾಡುವುದೋ, ಹಾಗೆಯೇ ಜ್ಞಾನವೆಂಬ ಅಗ್ನಿಯು ಸಮಸ್ತ ಕರ್ಮಗಳನ್ನು ಭಸ್ಮಮಾಡಿಬಿಡುವುದು.

ನಹಿ ಜ್ಞಾನೇನ ಸದೃಶಂ, ಪವಿತ್ರಮಿಹ ವಿದ್ಯತೇ ।
ತತ್ ಸ್ವಯಂ ಯೋಗಸಂಸಿದ್ಧಃ, ಕಾಲೇನಾತ್ಮನಿ ವಿಂದತಿ ॥೩೮॥

ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರವಾದ ವಸ್ತುವು ಯಾವುದೂ ಇರುವುದಿಲ್ಲ. ನಿಷ್ಕಾಮಕರ್ಮಯೋಗದಿಂದ ಅಂತಃಕರಣ ಶುದ್ಧಿಯನ್ನು ಪಡೆದ ಅಧಿಕಾರಿಯು ಆ ಜ್ಞಾನವನ್ನು ಕಾಲಾನುಸಾರ ತನ್ನ ಅಂತಃಕರಣದಲ್ಲಿ ಪಡೆಯುವನು.

**ಶ್ರದ್ಧಾವಾನ್ ಲಭತೇ ಜ್ಞಾನಂ, ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿ, ಮಚಿರೇಣಾಧಿಗಚ್ಛತಿ ॥೩೯॥**

ಗುರುಗಳಲ್ಲಿಯೂ ಸತ್‌ಶಾಸ್ತ್ರಗಳಲ್ಲಿಯೂ ಶ್ರದ್ಧೆಯಿಂದ ಕೂಡಿರುವವನೂ, ಜಿತೇಂದ್ರಿಯನೂ ಜ್ಞಾನಪರನೂ ಆದವನೇ ಆತ್ಮಜ್ಞಾನವನ್ನು ಪಡೆಯುವನು. ಈ ರೀತಿ ಜ್ಞಾನವನ್ನು ಹೊಂದಿದನಂತರ ಶೀಘ್ರದಲ್ಲಿಯೇ ಮೋಕ್ಷರೂಪವಾದ ಶಾಂತಿಯನ್ನು ಹೊಂದುತ್ತಾನೆ.

ಶ್ರದ್ಧೆಯಿಂದ ಸಾಧನದಲ್ಲಿ ತತ್ಪರತೆ, ತತ್ಪರತೆಯಿಂದ ಇಂದ್ರಿಯನಿಗ್ರಹ, ಇದರಿಂದ ಜ್ಞಾನ, ಜ್ಞಾನದಿಂದ ಶಾಂತಿಯು ಕ್ರಮವಾಗಿ ಉಂಟಾಗುತ್ತವೆ.

**ಅಜ್ಞಶ್ಚಾಶ್ರದ್ದಧಾನಶ್ಚ, ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ, ನ ಸುಖಂ ಸಂಶಯಾತ್ಮನಃ ॥**

ಗುರೂಪದಿಷ್ಟವಾದ ಅರ್ಥವನ್ನು ತಿಳಿಯುವ ವಿವೇಕವಿಲ್ಲದವನೂ, ತಿಳಿದರೂ ಅದರಲ್ಲಿ ಶ್ರದ್ಧೆ ಇಲ್ಲದವನೂ, ಗುರುವು ಉಪದೇಶಿಸಿದ ಅರ್ಥದಲ್ಲಿ ಸಂಶಯವಿರುವವನೂ,—ಈ ಮೂವರೂ ಪರಮಾರ್ಥವನ್ನು ಪಡೆಯದೆ ಭ್ರಷ್ಟರಾಗುತ್ತಾರೆ. ಸಂಶಯಾತ್ಮನಿಗಾದರೋ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಿಲ್ಲ.

**ಯೋಗಸಂನ್ಯಸ್ತಕರ್ಮಾಣಂ, ಜ್ಞಾನಸಂಛಿನ್ನ ಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ, ನಿಬಧ್ನಂತಿ ಧನಂಜಯ ॥೪೧॥**

ಎಲೈ ಧನಂಜಯನೇ ! ನಿಷ್ಕಾಮಕರ್ಮಯೋಗದಿಂದ ಯಾರು ಸಮಸ್ತ ಕರ್ಮಗಳನ್ನೂ ಪರಮೇಶ್ವರನಿಗೆ ಸಮರ್ಪಿಸುವನೋ, ಆತ್ಮಜ್ಞಾನದಿಂದ ಎಲ್ಲಾ ಸಂಶಯಗಳನ್ನೂ (ಅಸಂಭಾವನೆ, ವಿಪರೀತ ಭಾವನೆಗಳನ್ನು) ಭೇದಿಸಿರುವನೋ (ನಾಶಮಾಡಿರುವನೋ) ಇನ್ನು (ಆತ್ಮವಂತಂ) ಮನಸ್ಸು, ಬುದ್ಧಿ, ಇಂದ್ರಿಯಾದಿಗಳನ್ನು ಸ್ವಾಧೀನಪಡಿಸಿಕೊಂಡಿರುವನೋ, ಇಂತಹ ವಿವೇಕಿಯನ್ನು ಕರ್ಮಗಳು ಬಂಧಿಸಲಾರವು. (X)

(X) ಇಂತಹವರನ್ನು ಶ್ರುತಿಯೂ ಹೀಗೆ ವರ್ಣಿಸಿದೆ :-
ಶ್ಲೋ॥ ಭಿದ್ಯತೇ ಹೃದಯಗ್ರಂಥಿ, ಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯಕರ್ಮಾಣಿ, ಯಸ್ಮಿನ್ ದೃಷ್ಟೇ ಪರಾವರೇ ॥
ಪರಾತ್ಪರನಾದ ಪರಮೇಶ್ವರನನ್ನು ಕಂಡಮೇಲೆ ಆ ಪುರುಷನ ಹೃದಯಗ್ರಂಥಿಯು (ಅಜ್ಞಾನವು) ನಾಶವಾಗುವುದು ; ಸಂಶಯಗಳು ನಷ್ಟವಾಗುವುವು ; ಮತ್ತು ಕರ್ಮಗಳೆಲ್ಲವೂ ವಿನಾಶವಾಗುವುವು.

ತಸ್ಮಾದಜ್ಞಾನಸಂಭೂತಂ, ಹೃತ್ಸ್ಥಂ ಜ್ಞಾನಾಸಿನಾತ್ಮನಃ ।
ಛಿತ್ವೈನಂ ಸಂಶಯಂ ಯೋಗ,ಮಾತಿಷ್ಠೋತ್ತಿಷ್ಠ ಭಾರತ ॥೪೨॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನಯೋಗೋನಾಮ ಚತುರ್ಥೋಽಧ್ಯಾಯಃ

ಎಲೈ ಅರ್ಜುನಾ ! ಆದಕಾರಣ ಅಜ್ಞಾನದಿಂದ ಹೃದಯದಲ್ಲಿ ಉತ್ಪನ್ನವಾದ ಈ ನಿನ್ನ ಸಂಶಯವನ್ನು ಜ್ಞಾನವೆಂಬ ಖಡ್ಗದಿಂದ ಛೇದಿಸಿ, ನಿಷ್ಕಾಮ ಕರ್ಮವನ್ನು ಅನುಷ್ಠಿಸುವವನಾಗು. ಯುದ್ಧಕ್ಕಾಗಿ ಏಳು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ
ನಾಲ್ಕನೆಯ ಅಧ್ಯಾಯವು ಸಂಪೂರ್ಣವು.



## ಅಥ ಕರ್ಮ ಸಂನ್ಯಾಸಯೋಗೋನಾಮ ಪಂಚಮೋಽಧ್ಯಾಯಃ

### ಅರ್ಜುನ ಉವಾಚ

ಸಂನ್ಯಾಸಂ ಕರ್ಮಣಾಂ ಕೃಷ್ಣ, ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯಃ ಏತಯೋರೇಕಂ, ತನ್ಮೇ ಬ್ರೂಹಿ ಸುನಿಶ್ಚಿತಮ್ ॥೧॥

ಅರ್ಜುನನು ಶ್ರೀ ಭಗವಂತನನ್ನು ಕುರಿತು ಇಂತೆಂದನು:— ಎಲೈ ಶ್ರೀ ಕೃಷ್ಣಪರಮಾತ್ಮನೇ! ನೀನು ಕರ್ಮಗಳ ಸಂನ್ಯಾಸವನ್ನು ಹೇಳುತ್ತೀಯೆ, ಪುನಃ ಕರ್ಮಯೋಗವನ್ನೂ ಹೇಳುತ್ತೀಯೆ. ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಅದನ್ನು ನನಗೆ ಚೆನ್ನಾಗಿ ನಿರ್ಣಯಿಸಿ ಹೇಳು.

### ಶ್ರೀ ಭಗವಾನುವಾಚ

ಸಂನ್ಯಾಸಃ ಕರ್ಮಯೋಗಶ್ಚ, ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸಂನ್ಯಾಸಾತ್, ಕರ್ಮಯೋಗೋ ವಿಶಿಷ್ಯತೇ ॥೨॥

ಶ್ರೀ ಭಗವಂತನು ಅರ್ಜುನನನ್ನು ಕುರಿತು ಇಂತೆಂದನು:— ಸಂನ್ಯಾಸವೂ, ಕರ್ಮಯೋಗವೂ ಎರಡೂ ಮೋಕ್ಷಕ್ಕೆ ಹೇತುವಾಗಿರುವುವು. ಅವುಗಳಲ್ಲಿ ಮಲಿನಾಂತಃಕರಣವುಳ್ಳವನಿಗೆ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಶ್ರೇಷ್ಠವು.

**ಜ್ಞೇಯಃ ಸ ನಿತ್ಯಸಂನ್ಯಾಸೀ, ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ, ಸುಖಂ ಬಂಧಾತ್ ಪ್ರಮುಚ್ಯತೇ॥**

ಎಲೈ ಮಹಾಬಾಹುವೇ ! ಯಾವನು ನಿಷ್ಕಾಮಕರ್ಮವನ್ನು ಮಾಡುವಾಗ ಅನಿಷ್ಟವಸ್ತುವನ್ನು ದ್ವೇಷಿಸದೆ ಇಷ್ಟವಸ್ತುವನ್ನು ಅಪೇಕ್ಷಿಸದೆ ಇರುವನೋ ಅವನು ಕರ್ಮವನ್ನು ಮಾಡತಕ್ಕವನಾದರೂ ಸಂನ್ಯಾಸಿಯೆಂತಲೇ ತಿಳಿಯತಕ್ಕದ್ದು. ಹಾಗೆಯೇ ರಾಗದ್ವೇಷಾದಿ ದ್ವಂದ್ವರಹಿತನಾದ ಆ ಸಾಧಕನು ಅನಾಯಾಸವಾಗಿ ಕರ್ಮಬಂಧನದಿಂದ ಮುಕ್ತನಾಗುತ್ತಾನೆ.

**ಸಾಂಖ್ಯಯೋಗೌ ಪೃಥಗ್ಬಾಲಾಃ, ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯ, ಗುಭಯೋರ್ವಿಂದತೇ ಫಲಮ್ ॥೪॥**

ವಿಚಾರವಿಲ್ಲದವರು ಸಂನ್ಯಾಸ ಮತ್ತು ಕರ್ಮಯೋಗಗಳು ವಿರುದ್ಧ ಫಲಗಳನ್ನು ಕೊಡತಕ್ಕವುಗಳೆಂದು ಹೇಳುವರು. ಆದರೆ ವಿಚಾರಶೀಲರಾದ ಜ್ಞಾನಿಗಳು ಹೀಗೆ ಹೇಳುವುದಿಲ್ಲ. ಏಕೆಂದರೆ ಅವೆರಡರಲ್ಲಿ ಒಂದನ್ನಾದರೂ ಚೆನ್ನಾಗಿ ಅಭ್ಯಾಸಮಾಡುವ ಪುರುಷನು ಅವೆರಡಕ್ಕೂ ಏಕಫಲವಾದ ಮೋಕ್ಷರೂಪ ಪರಮಾತ್ಮನನ್ನು ಪಡೆಯುತ್ತಾನೆ.

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ, ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ, ಯಃ ಪಶ್ಯತಿ ಸ ಪಶ್ಯತಿ ॥೫॥**

(ಸಾಕ್ಷಾತ್ತಾಗಿ ಮೋಕ್ಷವನ್ನು ಕೊಡುವಂಥಾ ಜ್ಞಾನ)—ಈ ಜ್ಞಾನನಿಷ್ಠೆಯಿಂದ ಕೂಡಿದವರು (ಸಾಂಖ್ಯರು) ಪರಮಪದವಿ ಎಂಬ ಯಾವ ಸ್ಥಾನವನ್ನು ಪಡೆಯುವರೋ ಅದನ್ನೇ (ಅಂತಃಕರಣಶುದ್ಧಿದ್ವಾರಾ ಜ್ಞಾನಮೂಲಕ ಮೋಕ್ಷಫಲವನ್ನು ಕೊಡುವಂಥಾದ್ದು ನಿಷ್ಕಾಮಕರ್ಮ) ಈ ನಿಷ್ಕಾಮಕರ್ಮಯೋಗಿಗಳೂ ಸಹ ಪಡೆಯುತ್ತಾರೆ. ಆದುದರಿಂದ ಸಾಂಖ್ಯ ಮತ್ತು ಕರ್ಮಯೋಗಗಳೆರಡರ ಫಲವು ಒಂದೇ ಎಂಬುದಾಗಿ ಯಾವ ವಿಚಾರಶೀಲನಾದವನು ನೋಡುವನೋ ಅವನೇ ಯಥಾರ್ಥವಾಗಿ ನೋಡತಕ್ಕಂಥವನು.

**ಸಂನ್ಯಾಸಸ್ತು ಮಹಾಬಾಹೋ, ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ, ನಚಿರೇಣಾಧಿಗಚ್ಛತಿ ॥೬॥**

ಎಲೈ ಮಹಾಬಾಹುವೇ ! ನಿಷ್ಕಾಮಕರ್ಮಾನುಷ್ಠಾನವಿಲ್ಲದೆ ಮಲಿನ ಅಂತಃಕರಣವುಳ್ಳವನಿಂದ ಮಾಡಲ್ಪಡುವ ಕೇವಲ ಸಂನ್ಯಾಸವು (ಕರ್ಮತ್ಯಾಗವು) ದುಃಖವನ್ನೇ ಕೊಡುವುದು. ನಿಷ್ಕಾಮಕರ್ಮಯೋಗಯುಕ್ತನಾದ ಮುನಿಯಾದರೋ ಶೀಘ್ರವಾಗಿ ಪವಿತ್ರಾಂತಃಕರಣವುಳ್ಳವನಾಗಿ ಜ್ಞಾನವನ್ನು ಪಡೆದು ಬ್ರಹ್ಮಭಾವವನ್ನು ಹೊಂದುವನು.

**ಯೋಗಯುಕ್ತೋ ವಿಶುದ್ಧಾತ್ಮಾ । ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ, ಕುರ್ವನ್ನಪಿ ನ ಲಿಪ್ಯತೇ ॥೭॥**

ರಜತಮಗಳಿಲ್ಲದ ಶುದ್ಧಾತ್ಮನಾಗಿಯೂ, ವಶಗೈದ ದೇಹವುಳ್ಳವನಾಗಿಯೂ, ವಶಗೈದ ಇಂದ್ರಿಯಗಳುಳ್ಳವನಾಗಿಯೂ, ಸಮಸ್ತ ಭೂತಗಳಿಗೂ ಯಾವನ ಆತ್ಮವು ಆತ್ಮವಾಗಿರುವುದೋ ಅಂತಹ ಯೋಗಯುಕ್ತನು ಕರ್ಮಗಳನ್ನು ಮಾಡುತ್ತಿದ್ದರೂ ಲಿಪ್ತನಾಗುವುದಿಲ್ಲ.

(1) ವಿಶುದ್ಧಾತ್ಮಾ (2) ವಿಜಿತಾತ್ಮ (3) ಜಿತೇಂದ್ರಿಯ ಈ ಮೂರು ಪದಗಳಿಂದ ಕ್ರಮವಾಗಿ ಮನೋದಂಡ, ಕಾಯದಂಡ, ವಾಕ್ ದಂಡವೆಂಬ ಮೂರು ದಂಡಗಳಿಂದ ಕೂಡಿದ ತ್ರಿದಂಡಿ ಯತಿಯನ್ನು ಸೂಚಿಸಿದೆ.

**ನೈವ ಕಿಂಚಿತ್‌ಕರೋಮೀತಿ, ಯುಕ್ತೋ ಮನ್ಯೇತ ತತ್ತ್ವವಿತ್. ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರ, ನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥೮॥**
**ಪ್ರಲಪನ್ ವಿಸೃಜನ್ ಗೃಹ್ಣ, ನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು, ವರ್ತಂತ ಇತಿ ಧಾರಯನ್ ॥೯॥**

ತತ್ತ್ವವೇತ್ತನಾದ ಸಾಂಖ್ಯಯೋಗಿಯಾದರೋ ನೋಡುತ್ತಿದ್ದರೂ, ಕೇಳುತ್ತಿದ್ದರೂ, ಸ್ಪರ್ಶಮಾಡುತ್ತಿದ್ದರೂ, ಗಂಧವನ್ನು ಗ್ರಹಿಸುತ್ತಿದ್ದರೂ, ಭಕ್ಷಣೆಮಾಡುತ್ತಿದ್ದರೂ, ಗಮನಮಾಡುತ್ತಿದ್ದರೂ, ಉಸಿರಾಡುತ್ತಿದ್ದರೂ, ಮಾತನಾಡುತ್ತಿದ್ದರೂ, ರೆಪ್ಪೆಗಳನ್ನು ತೆರೆಯುತ್ತಿದ್ದರೂ, ಮುಚ್ಚುತ್ತಲಿದ್ದರೂ, ಈ ಇಂದ್ರಿಯಗಳೇ ತಮ್ಮ ತಮ್ಮ ರೂಪಾದಿ ವಿಷಯಗಳಲ್ಲಿ ಪ್ರವೃತ್ತಿಸುತ್ತಿರು

ವುವು, ಹೀಗೆಂದು ಎಣಿಸುತ್ತಾ ತನ್ನನ್ನು ಏನೂ ಮಾಡತಕ್ಕವನಲ್ಲವೆಂದು ತಿಳಿದಿರುವನು.

ಬ್ರಹ್ಮಣ್ಯಾಧಾಯ ಕರ್ಮಾಣಿ, ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ, ಪದ್ಮಪತ್ರಮಿವಾಂಭಸಾ ॥೧೦॥

ಯಾವ ನಿಷ್ಕಾಮಕರ್ಮ ಯೋಗಿಯಾದವನು ಕರ್ತೃತ್ವಾಭಿಮಾನವನ್ನೂ ಫಲಾಪೇಕ್ಷೆಯನ್ನೂ ಸಹ ಬಿಟ್ಟವನಾಗಿ ಸಮಸ್ತ ಕರ್ಮಗಳನ್ನೂ ಈಶ್ವರಾರ್ಪಣಬುದ್ಧಿಯಿಂದ ಮಾಡುವನೋ ಅವನು ನೀರಿನಲ್ಲಿರುವ ಕಮಲದ ದಳವು ಆ ನೀರಿನಿಂದ ಹೇಗೆ ಲಿಪ್ತವಾಗದೆ ಇರುವುದೋ ಹಾಗೆ ಪುಣ್ಯ ಪಾಪಗಳೆಂಬ ಕರ್ಮಗಳಿಂದ ಲಿಪ್ತನಾಗುವುದಿಲ್ಲ.

ಕಾಯೇನ ಮನಸಾ ಬುದ್ಧ್ಯಾ, ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವಂತಿ, ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ ॥

ನಿಷ್ಕಾಮಕರ್ಮಯೋಗಿಗಳು ಕರ್ತೃತ್ವಾಭಿಮಾನವನ್ನು ತೊರೆದು ಮನೋವಾಕ್ಕಾಯ ಬುದ್ಧಿಗಳಿಂದಲೂ ಇತರ ಇಂದ್ರಿಯಗಳಿಂದಲೂ ಚಿತ್ತಶುದ್ಧಿಗಾಗಿ ಕರ್ಮವನ್ನು ಮಾಡುತ್ತಾರೆ.

ಯುಕ್ತಃ ಕರ್ಮಫಲಂ ತ್ಯಕ್ತ್ವಾ, ಶಾಂತಿಮಾಪ್ನೋತಿ ನೈಷ್ಠಿಕೀಮ್ ।
ಅಯುಕ್ತಃ ಕಾಮಕಾರೇಣ, ಫಲೇ ಸಕ್ತೋ ನಿಬಧ್ಯತೇ ॥೧೨॥

ನಿಷ್ಕಾಮಕರ್ಮ ಯೋಗಿಯು ಕರ್ಮಫಲವನ್ನು ಬಿಟ್ಟವನಾಗಿ ಬ್ರಹ್ಮನಿಷ್ಠಾರೂಪವಾದ ಶಾಂತಿಯನ್ನು ಹೊಂದುವನು. ಸಕಾಮನಾದರೋ ಕರ್ಮಫಲಾಪೇಕ್ಷೆಯುಳ್ಳವನಾದುದರಿಂದ ಕರ್ಮಗಳಿಂದ ಬಂಧಿಸಲ್ಪಡುವನು.

ಸರ್ವಕರ್ಮಾಣಿ ಮನಸಾ, ಸಂನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ, ನೈವ ಕುರ್ವನ್ನ ಕಾರಯನ್ ॥೧೩॥

ಸರ್ವ ಕರ್ಮಗಳನ್ನೂ ಮನದಿಂದ ತ್ಯಾಗಮಾಡಿ, ದೇಹಕ್ಕಿಂತ ಭಿನ್ನವಾಗಿರುವ ಆತ್ಮನನ್ನು ನೋಡಿದ ಸ್ವಾಧೀನಾಂತಃಕರಣವುಳ್ಳವನು ನವದ್ವಾರಗಳುಳ್ಳ ದೇಹವೆಂಬ ಪುರದಲ್ಲಿ ಸುಖದಿಂದಿರುತ್ತಿರುವನು. ಮತ್ತು ಯಾವ ಕಾರ್ಯವನ್ನೂ ಮಾಡದವನಾಗಿಯೂ ಮಾಡಿಸದವನಾಗಿಯೂ ಇರುತ್ತಿರುವನು.

ನ ಕರ್ತೃತ್ವಂ ನ ಕರ್ಮಾಣಿ, ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ, ಸ್ವಭಾವಸ್ತು ಪ್ರವರ್ತತೇ ॥೧೪॥

ಈ ಆತ್ಮದೇವನು ಸರ್ವ ದೇಹಾದಿಗಳ ಕರ್ತೃತ್ವವನ್ನಾಗಲಿ, ಕರ್ಮಗಳನ್ನಾಗಲಿ ಮತ್ತು ಕರ್ಮಗಳ ಫಲದ ಸಂಬಂಧವನ್ನಾಗಲಿ ಹುಟ್ಟಿಸುವುದಿಲ್ಲ. ಪ್ರಕೃತಿಯೇ ಎಲ್ಲಾ ಕಾರ್ಯಗಳನ್ನು ಮಾಡುವುದರಲ್ಲಿ ಪ್ರವರ್ತಿಸುವುದು.

**ನಾದತ್ತೇ ಕಸ್ಯಚಿತ್ಪಾಪಂ, ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ, ತೇನ ಮುಹ್ಯಂತಿ ಜಂತವಃ ॥೧೫॥**

ಆತ್ಮನು ಯಾರೊಬ್ಬರ ಪಾಪವನ್ನೂ ಗ್ರಹಿಸುವುದಿಲ್ಲ. ಮತ್ತು ಪುಣ್ಯವನ್ನೂ ಗ್ರಹಿಸುವುದಿಲ್ಲ. ಅಜ್ಞಾನದಿಂದ ಜ್ಞಾನವು ಆವರಿಸಲ್ಪಟ್ಟಿದೆ. ಇದರಿಂದ ಸರ್ವಜೀವಿಗಳೂ ಮೋಹವನ್ನು ಹೊಂದಿರುವರು.

**ಜ್ಞಾನೇನ ತು ತದಜ್ಞಾನಂ, ಯೇಷಾಂ ನಾಶಿತ ಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ, ಪ್ರಕಾಶಯತಿ ತತ್ಪರಮ್ ॥೧೬॥**

ಯಾವ ಪುರುಷರ ಅಜ್ಞಾನವು ಆತ್ಮನ ಜ್ಞಾನದಿಂದ ನಿವೃತ್ತಿಯಾಗಿರುವುದೋ ಅವರ ಜ್ಞಾನವು ಸೂರ್ಯನಂತೆ ಪರತತ್ವವನ್ನು ಪ್ರಕಾಶಿಸುವುದು.

**ತದ್ಬುದ್ಧಯಸ್ತದಾತ್ಮಾನ, ಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ, ಜ್ಞಾನನಿರ್ಧೂತ ಕಲ್ಮಷಾಃ ॥೧೭॥**

ಯಾರ ಬುದ್ಧಿಯು ಪರಬ್ರಹ್ಮದಲ್ಲಿ ಅಭೇದರೂಪದಿಂದ ನಿಂತಿದೆಯೋ (ತದ್ರೂಪವಾಗಿದೆಯೋ), ಹಾಗೆಯೇ ಯಾರಿಗೆ ಆ ಪರಬ್ರಹ್ಮವೇ ಆತ್ಮವಾಗಿರುವುದೋ (ತದ್ಗತಮನಸ್ಸು), ಯಾರಿಗೆ ಪರಬ್ರಹ್ಮದಲ್ಲಿಯೇ ನಿಷ್ಠೆಯಿದೆಯೋ ಯಾರು ಬ್ರಹ್ಮಪರಾಯಣರಾಗಿರುವರೋ, ಜ್ಞಾನದಿಂದ ಯಾರ ಪುಣ್ಯ ಪಾಪಗಳು ನಿವೃತ್ತಿಯಾಗಿರುವುವೋ, ಅಂತಹ ಜ್ಞಾನಿಗಳು ಪುನರಾವೃತ್ತಿ ರಹಿತವಾದ (ಹುಟ್ಟು ಸಾವುಗಳಿಲ್ಲದ) ಮೋಕ್ಷವನ್ನು ಹೊಂದುತ್ತಾರೆ.

ತದ್ಬುದ್ಧಯಃ—ತದಾತ್ಮಾನಃ—ತನ್ನಿಷ್ಠಾಃ—ತತ್ಪರಾಯಣಾಃ ಈ ನಾಲ್ಕು ವಿಶೇಷಣಗಳಿಂದ ಕೂಡಿದ ಜ್ಞಾನಯೋಗಿಯು ಪುನಃ ಶರೀರಸಂಬಂಧವಿಲ್ಲದ ಅಪುನರಾವೃತ್ತಿಯನ್ನು (ವಿದೇಹಕೈವಲ್ಯವನ್ನು) ಹೊಂದುವನು.

**ವಿದ್ಯಾವಿನಯಸಂಪನ್ನೇ, ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ, ಪಂಡಿತಾಃ ಸಮದರ್ಶಿನಃ ॥೧೮॥**

ಜ್ಞಾನಿಗಳು ವಿದ್ಯಾದಿ ವಿನಯ ಸಂಪನ್ನನಾದ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ ಮತ್ತು ಚಂಡಾಲ

ನಲ್ಲಿಯೂ ಸಮದರ್ಶಿಯೇ ಆಗಿರುವರು. ಅಂದರೆ, ತನ್ನ ಆತ್ಮರೂಪವಾದ ಬ್ರಹ್ಮವನ್ನೇ ನೋಡುವರು. ಉತ್ತಮ, ಮಧ್ಯಮ, ಕನಿಷ್ಠವಾದ ಸಮಸ್ತ ಪ್ರಾಣಿಗಳಲ್ಲೂ ಮತ್ತು ವಸ್ತುಗಳಲ್ಲೂ ಒಂದೇ ಬ್ರಹ್ಮವಸ್ತು ವ್ಯಾಪಕವಾಗಿರುವುದೆಂದು ತಿಳಿಯುವನೆಂಬ ಅಭಿಪ್ರಾಯ.

**ಇಹೈವ ತೈರ್ಜಿತಃ ಸರ್ಗೋ, ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ, ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥**

ಸರ್ವತ್ರ ಸಮಭಾವದಿಂದಿರುವ ಪರಬ್ರಹ್ಮದಲ್ಲಿ ಯಾರ ಮನಸ್ಸು ಸ್ಥಿರವಾಗಿ ನಿಂತಿರುವುದೋ, ಅಂತಹವರಿಂದ ಜೀವಿತಾವಸ್ಥೆಯಲ್ಲಿಯೇ ಈ ಪ್ರಪಂಚವು ಜಯಿಸಲ್ಪಟ್ಟಿರುವುದು. ಪರಬ್ರಹ್ಮವು ನಿರ್ದೋಷವಾಗಿಯೂ ಮತ್ತು ಸರ್ವತ್ರ ಸಮವಾಗಿಯೂ ಇರುವಕಾರಣದಿಂದ ಆ ಬ್ರಹ್ಮವೇತ್ತರಾದ ಜ್ಞಾನಿಗಳು ಪರಬ್ರಹ್ಮದಲ್ಲಿಯೇ ಸ್ಥಿತರಾಗಿರುವರು.

**ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ, ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ । ಸ್ಥಿರಬುದ್ಧಿರಸಂಮೂಢೋ, ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥**

ಪ್ರಿಯವಸ್ತುವಿನ ಪ್ರಾಪ್ತಿಯಲ್ಲಿ ಯಾವನ ಮನಸ್ಸು ಹರ್ಷವನ್ನು ಪಡೆಯುವುದಿಲ್ಲವೋ, ಅಪ್ರಿಯವಸ್ತುವಿನ ಪ್ರಾಪ್ತಿಯಲ್ಲಿ ಕಳವಳವನ್ನು ಪಡುವುದಿಲ್ಲವೋ, ಅಂತಹ ಸ್ಥಿರಬುದ್ಧಿಯುಳ್ಳ(X)ವನೂ ಸಂಮೋಹವಿಲ್ಲದವನೂ ಆದ ಬ್ರಹ್ಮವೇತ್ತನು ಬ್ರಹ್ಮದಲ್ಲಿಯೇ ಸ್ಥಿರನಾಗಿ ನಿಂತಿರುವನು.

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ, ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ, ಸುಖಮಕ್ಷಯಮಶ್ನುತೇ ॥೨೧॥**

ಬಾಹ್ಯವಿಷಯಗಳಲ್ಲಿ ಆಸಕ್ತಿಯಿಲ್ಲದವನು ಆತ್ಮನಲ್ಲಿರುವ ನಿರತಿಶಯವಾದ ಅಕ್ಷಯವಾದ ಸುಖವನ್ನು ಪಡೆಯುತ್ತಾನೆ. ಅವನೇ ಜ್ಞಾನಯೋಗನಿಷ್ಠನಾಗಿದ್ದು ಅಕ್ಷಯವಾದ ಆ ಸುಖವನ್ನೇ ಸದಾ ಅನುಭವಿಸುತ್ತಾನೆ.

**ಯೇ ಹಿ ಸಂಸ್ಪರ್ಶಜಾ ಭೋಗಾ, ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ, ನ ತೇಷು ರಮತೇ ಬುಧಃ ॥೨೨॥**

ಎಲೈ ಕುಂತಿಪುತ್ರನಾದ ಅರ್ಜುನನೇ ! ವಿಷಯ ಮತ್ತು ಇಂದ್ರಿಯಗಳ ಸಂಬಂಧದಿಂದ ಉಂಟಾಗುವ ಸಮಸ್ತ ಭೋಗಗಳೂ ದುಃಖಕ್ಕೇ ಕಾರಣ

---

(X) ಸ್ಥಿರಬುದ್ಧಿ—ಸಂಶಯ, ಭ್ರಮೆ, ಮೋಹಾದಿಗಳನ್ನು ಕಳೆದುಕೊಂಡು ಅಭೇದ ಭಾವದಿಂದ ಬ್ರಹ್ಮದಲ್ಲೇ ಅಚಲವಾಗಿ ನಿಂತಿರುವ ಬುದ್ಧಿ.

ಗಳಾಗಿರುವುವು. ಇದಲ್ಲದೆ ಅವುಗಳೆಲ್ಲವೂ ಉತ್ಪತ್ತಿ ವಿನಾಶಗಳುಳ್ಳವುಗಳಾಗಿರುವುವು. ಜ್ಞಾನಿಯಾದವನು ಅವುಗಳಲ್ಲಿ ರಮಿಸುವುದಿಲ್ಲ.

**ಶಕ್ನೋತೀಹೈವ ಯಃ ಸೋಢುಂ, ಪ್ರಾಕ್ ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ, ಸ ಯುಕ್ತಃ ಸ ಸುಖೀ ನರಃ ॥**

ಯಾವ ಮನುಷ್ಯನು ಈ ಲೋಕದಲ್ಲಿ ತನ್ನ ಜೀವಿತ ಕಾಲದಲ್ಲಿಯೇ ಕಾಮ ಕ್ರೋಧದಿಂದ ಉತ್ಪನ್ನನಾಗುವ ವೇಗವನ್ನು ತಡೆಯಲು ಸಮರ್ಥನಾಗುವನೋ ಅವನೇ ಬ್ರಹ್ಮನಿಷ್ಠನಾದ ಯೋಗಿಯು, ಅವನೇ ಸುಖಿಯು.

**ಯೋಽನ್ತಸ್ಸುಖೋಽನ್ತರಾರಾಮಃ, ಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ, ಬ್ರಹ್ಮಭೂತೋಽಧಿಗಚ್ಛತಿ ॥೨೪॥**

ಯಾವನು ತನ್ನ ಅಂತರಾತ್ಮನಲ್ಲಿಯೇ ನಿರತಿಶಯಾನಂದವನ್ನು ಅನುಭವಿಸುವನೋ, ಆತ್ಮನಲ್ಲಿಯೇ ವಿಶ್ರಾಂತಿಯನ್ನು ಹೊಂದುವವನಾಗಿರುವನೋ, ಆತ್ಮ ಜ್ಯೋತಿಸ್ವರೂಪನೇ ಆಗಿರುವನೋ, ಅಂತಹ ಬ್ರಹ್ಮನಿಷ್ಠನಾದ ಯೋಗಿಯು ಜೀವಿತಾವಸ್ಥೆಯಲ್ಲಿಯೇ ಬ್ರಹ್ಮಭಾವವನ್ನು ಹೊಂದಿ ಅವಿದ್ಯಾತತ್ಕಾರ್ಯರಹಿತವಾದ ಪರಬ್ರಹ್ಮವನ್ನು ಹೊಂದುವನು.

**ಲಭಂತೇ ಬ್ರಹ್ಮನಿರ್ವಾಣಂ, ವೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ, ಸರ್ವ ಭೂತಹಿತೇ ರತಾಃ । ॥೨೫॥**

ಯಾರ ಸಮಸ್ತಪಾಪಗಳೂ ನಷ್ಟವಾಗಿಹೋಗಿವೆಯೋ, ಜ್ಞಾನದಿಂದ ಯಾರ ಸಂಶಯುಗಳು ನಿವೃತ್ತಿಯಾಗಿವೆಯೋ, ಯಾರು ಸರ್ವ ಭೂತಗಳ ಹಿತದಲ್ಲಿಯೇ ಪ್ರೀತಿಯುಳ್ಳವರಾಗಿರುವರೋ, ಮತ್ತು ಯಾರು ಆತ್ಮದಲ್ಲಿಯೇ ರಮಿಸುವರಾಗಿರುವರೋ ಇಂತಹ ಋಷಿಗಳು ಪರಮ ಶಾಂತ ಸ್ವರೂಪವಾದ ಬ್ರಹ್ಮವನ್ನು ಹೊಂದುವರು. (X)

**ಕಾಮಕ್ರೋಧವಿಯುಕ್ತಾನಾಂ, ಯತೀನಾಂ ಯತಚೇತಸಾಮ್ ।**
**ಅಭಿತೋಬ್ರಹ್ಮನಿರ್ವಾಣಂ, ವರ್ತತೇ ವಿದಿತಾತ್ಮನಾಮ್ ॥೨೬॥**

ಕಾಮ ಕ್ರೋಧಗಳಿಲ್ಲದವರಾಗಿಯೂ, ಮನಸ್ಸನ್ನು ಜಯಿಸಿದವರಾಗಿಯೂ, ಆತ್ಮಜ್ಞಾನಿಗಳಾಗಿಯೂ ಇರುವ ಸಂನ್ಯಾಸಿಗಳಿಗೆ ಸರ್ವಾವಸ್ಥೆಗಳಲ್ಲಿಯೂ ನಿರ್ವಾಣರೂಪವಾದ ಬ್ರಹ್ಮವು ಪ್ರಾಪ್ತವೇ ಆಗಿರುವುದು.

---

(X) ಋಷಿ ಎಂದರೆ ಬ್ರಹ್ಮವೇತ್ತರು. ಕ್ಷೀಣಕಲ್ಮಷಾಃ (ಮಲನಿವೃತ್ತಿ), ಛಿನ್ನದ್ವೈಧಾ (ವಿಕ್ಷೇಪನಿವೃತ್ತಿ), ಯತಾತ್ಮಾನಃ (ಆವರಣದ ನಿವೃತ್ತಿ).

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂ, ಶ್ಚಕ್ಷುಶ್ಚೈವಾಂತರೇ ಭ್ರುವೋಃ।**
**ಪ್ರಾಣಾಪಾನೌ ಸಮೌ ಕೃತ್ವಾ, ನಾಸಾಭ್ಯಂತರಚಾರಿಣೌ ॥೨೭॥**
**ಯತೇಂದ್ರಿಯ ಮನೋಬುದ್ಧಿ, ರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾ ಭಯಕ್ರೋಧೋ, ಯಃ ಸದಾ ಮುಕ್ತ ಏವ ಸಃ ॥೨೮॥**

ಬಾಹ್ಯದಲ್ಲಿರುವ ವಿಷಯಗಳನ್ನು (ಒಳಗೆ ಚಿಂತಿಸದೆ) ಬಾಹ್ಯದಲ್ಲಿಯೇ ಬಿಟ್ಟು, ನೇತ್ರದೃಷ್ಟಿಯನ್ನು ಹುಬ್ಬುಗಳ ನಡುವೆ ನಿಲ್ಲಿಸಿ, ನಾಸಿಕಾರಂಧ್ರದಲ್ಲಿ ಸಂಚರಿಸುವ ಪ್ರಾಣಾಪಾನಗಳೆರಡನ್ನೂ ನಿರುದ್ಧಪಡಿಸಿ, ಯಾವನು ಮನೋಬುದ್ಧಿ ಇಂದ್ರಿಯಗಳನ್ನು ಜಯಿಸಿರುವನೋ ಮತ್ತು ಯಾವನ ಇಚ್ಛಾಭಯ ಕ್ರೋಧಾದಿಗಳು ಕಳೆದುಹೋಗಿರುವುವೋ ಮತ್ತು ಯಾವನು ಸರ್ವ ವಿಷಯಗಳಿಂದ ವಿರಕ್ತನಾಗಿ ಮೋಕ್ಷವೇ ಪರಮಪುರುಷಾರ್ಥವೆಂಬುದಾಗಿ ತಿಳಿದಿರುವನೋ ಇಂತಹ ಮನನಶೀಲನಾದ ಸಂನ್ಯಾಸಿಯು ಸದಾ ಮುಕ್ತನೇ ಆಗಿರುವನು.

**ಭೋಕ್ತಾರಂ ಯಜ್ಞತಪಸಾಂ, ಸರ್ವಲೋಕ ಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ, ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥೨೯॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಕರ್ಮಸಂನ್ಯಾಸಯೋಗೋನಾಮ**
**ಪಂಚಮೋಽಧ್ಯಾಯಃ.**

ನನ್ನ ಭಕ್ತನು ನನ್ನನ್ನು ಸಮಸ್ತ ಯಜ್ಞಗಳ ಮತ್ತು ತಪಸ್ಸುಗಳ ಭೋಕ್ತನೆಂದೂ, ಸರ್ವಲೋಕಗಳಿಗೆ ಮಹೇಶ್ವರನೆಂದೂ, ಸರ್ವಪ್ರಾಣಿಗಳ ಹಿತಚಿಂತಕನೆಂದೂ, ನನ್ನನ್ನು ಆತ್ಮರೂಪನೆಂದೂ ತಿಳಿದುಕೊಂಡು ಶಾಂತಿಯನ್ನು ಹೊಂದುವನು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಕರ್ಮಸಂನ್ಯಾಸಯೋಗವೆಂಬ
ಐದನೇ ಅಧ್ಯಾಯ ಸಂಪೂರ್ಣವು.



# ಅಥ ಅಭ್ಯಾಸಯೋಗೋನಾಮ ಷಷ್ಠೋಽಧ್ಯಾಯಃ

## ಶ್ರೀ ಭಗವಾನುವಾಚ

**ಅನಾಶ್ರಿತಃ ಕರ್ಮಫಲಂ। ಕಾರ್ಯಂ, ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀಚ, ನ ನಿರಗ್ನಿರ್ನ ಚಾಕ್ರಿಯಃ ॥೧॥**

ಶ್ರೀ ಭಗವಂತ ನಿಂತೆಂದನು ;– ಯಾವನು ಕರ್ಮಫಲಾಪೇಕ್ಷೆಯನ್ನು ಬಿಟ್ಟು ಮಾಡಲು ಯೋಗ್ಯವಾದ ಶಾಸ್ತ್ರವಿಹಿತಕರ್ಮಗಳನ್ನು ಮಾಡುವನೋ ಆವನೇ ಸಂನ್ಯಾಸಿಯೂ ಮತ್ತು ಅವನೇ ಯೋಗಿಯೂ ಆಗಿರುವನು. ಅಗ್ನಿ ಹೋತ್ರಾದಿ ಕರ್ಮಗಳನ್ನು ತ್ಯಾಗಮಾಡಿದವನುಮಾತ್ರ ಸಂನ್ಯಾಸಿ ಮತ್ತು ಕ್ರಿಯಾರಹಿತವಾಗಿರುವನು ಮಾತ್ರ ಯೋಗಿ ಎಂಬ ನಿಯಮವೇನೂ ಇರುವುದಿಲ್ಲ.

**ಯಂ ಸಂನ್ಯಾಸಮಿತಿ ಪ್ರಾಹು, ರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ, ಯೋಗೀ ಭವತಿ ಕಶ್ಚನ ॥೨॥**

ಎಲೈ ಪಾಂಡವನೇ ! ಯಾವುದನ್ನು ಶೃತಿಗಳು ಸಂನ್ಯಾಸವೆಂದು ಹೇಳುವುವೋ ಅದನ್ನು ನೀನು ಯೋಗವೆಂದು ತಿಳಿ. ಏಕೆಂದರೆ–ಸಂಕಲ್ಪವನ್ನು ತ್ಯಾಗಮಾಡದವನು ಯೋಗಿಯಾಗಲಾರನು.

**ಆರುರುಕ್ಷೋರ್ಮುನೇರ್ಯೋಗಂ, ಕರ್ಮ ಕಾರಣ ಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ, ಶಮಃ ಕಾರಣ ಮುಚ್ಯತೇ ॥೩॥**

ಯೋಗದಲ್ಲಿ ಆರೂಢನಾಗುವುದಕ್ಕೆ ಇಚ್ಛೆಯುಳ್ಳ ಮನನಶೀಲನಾದ ಮುನಿಗೆ ಆ ಯೋಗಪ್ರಾಪ್ತಿಗಾಗಿ ನಿಷ್ಕಾಮಕರ್ಮವೇ ಸಾಧನವೆಂದು ಹೇಳಿಸಿಕೊಳ್ಳುವುದು. ಹಾಗೆಯೇ ಆ ಯೋಗದಲ್ಲಿ ಆರೂಢನಾದವನಿಗೆ ಜ್ಞಾನ ನಿಷ್ಠೆಯ ಪ್ರಾಪ್ತಿಯ ಸಲುವಾಗಿ ಸಂನ್ಯಾಸವೇ ಸಾಧನವೆಂದು ಹೇಳಿಸಿಕೊಳ್ಳುವುದು.

**ಯದಾ ಹಿ ನೇಂದ್ರಿಯಾರ್ಥೇಷು, ನ ಕರ್ಮ ಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ, ಯೋಗಾರೂಢಸ್ತದೋಚ್ಯತೇ ॥೪॥**

ಯಾವಕಾಲದಲ್ಲಿ ಶಬ್ದಾದಿ ವಿಷಯಗಳಲ್ಲಿಯೂ ಅವುಗಳ ಸಾಧನಗಳಾದ ಕರ್ಮಗಳಲ್ಲಿಯೂ ಇಚ್ಛೆಯಿಲ್ಲದೆ ಸರ್ವಸಂಕಲ್ಪವನ್ನು ಬಿಟ್ಟಿರುವನೋ ಆ ಕಾಲದಲ್ಲಿ ಅವನು ಯೋಗಾರೂಢನಾಗಿರುವನೆಂದು ತಿಳಿದವರಿಂದ ಹೇಳಿಸಿ ಕೊಳ್ಳುತ್ತಾನೆ.

**ಉದ್ಧರೇದಾತ್ಮನಾಽಽತ್ಮಾನಂ, ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧು, ರಾತ್ಮೈವ ರಿಪುರಾತ್ಮನಃ ॥೫॥**

ಮಾಯಾಮಯವಾದ ಸಂಸಾರದಲ್ಲಿ ಮುಳುಗಿರುವ ಜೀವಾತ್ಮನನ್ನು ವಿವೇಕಿಯುತ ಬುದ್ಧಿಯಿಂದ ಉದ್ಧರಿಸಬೇಕು. ಅವಿವೇಕಯುತಬುದ್ಧಿಯಿಂದ ಆತ್ಮನನ್ನು ನಾಶಗೊಳಿಸಬಾರದು. ಏಕೆಂದರೆ—ಜೀವಾತ್ಮನಿಗೆ ವಿವೇಕಯುತವಾದ ಬುದ್ಧಿಯೇ ಬಂಧುವು. ಅವಿವೇಕಿಯುತ ಬುದ್ಧಿಯೇ ಶತ್ರುವಾಗಿರುವುದು.

**ಬಂಧುರಾತ್ಮಾಽಽತ್ಮನಸ್ತಸ್ಯ, ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ, ವರ್ತೇತಾತ್ಮೈವ ಶತ್ರುವತ್ ॥೬॥**

ಯಾವ ಜೀವಾತ್ಮನು ಮನ, ಇಂದ್ರಿಯಗಳ ಸಹಿತ ಶರೀರವನ್ನು ವಿವೇಕಯುತಬುದ್ಧಿಯಿಂದ ಜಯಿಸಿರುವನೋ ಆ ಜೀವನಿಗೆ ತನ್ನ ನಿಜ ಸ್ವರೂಪವಾದ ಆತ್ಮವೇ ಬಂಧುವು. ಮತ್ತು ಅಜಿತಾತ್ಮನಿಗೆ ಶತೃಭಾವದಲ್ಲಿ ಬಾಹ್ಯಶತೃವಿನಂತೆ ತನ್ನ ಆತ್ಮನೇ ವರ್ತಿಸುವನು. ಯಾವನು ಜಿತೇಂದ್ರಿಯನೋ ಮತ್ತು ಜಿತಮನಸ್ಕನೋ ಅವನು ತನಗೆ ತಾನೇ ಮಿತ್ರನು; ಆದರೆ ಯಾರು ದೇಹೇಂದ್ರಿಯಾದಿ ಕರಣಗಳನ್ನು ಜಯಿಸದೆ ವಿಷಯ ಲೋಲುಪನಾಗಿರುವನೋ ಅವನು ತನ್ನ ಆತ್ಮವನ್ನು ಅಧೋಗತಿಗೆ ಇಳಿಸುವನಾದ್ದರಿಂದ ತನಗೆ ತಾನೇ ಶತ್ರುವಾಗಿರುವನೆಂಬರ್ಥ.

**ಜಿತಾತ್ಮನಃ ಪ್ರಶಾಂತಸ್ಯ, ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣ ಸುಖದುಃಖೇಷು, ತಥಾ ಮಾನಾಪ ಮಾನಯೋಃ ॥೭॥**

ಶೀತೋಷ್ಣ, ಸುಖದುಃಖ, ಮಾನಾಪಮಾನಗಳು ಪ್ರಾಪ್ತವಾಗುವಾಗ್ಯೆ ಯಾರ ಅಂತಃಕರಣವು ವಿಕಾರಗೊಳ್ಳದೆ ಪ್ರಶಾಂತವಾಗಿರುವುದೋ ಇಂಥಹ ಸ್ವಾಧೀನಾಂತಃಕರಣವುಳ್ಳವನೂ ಮತ್ತು ಪ್ರಶಾಂತ ಚಿತ್ತನೂ ಆದವನ ಹೃದಯದಲ್ಲಿ ಪರಮಾತ್ಮನು ಸದಾ ಸ್ಥಿರವಾಗಿ ನೆಲಸಿರುವನು.

**ಜ್ಞಾನವಿಜ್ಞಾನತೃಪ್ತಾತ್ಮಾ, ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ, ಸಮಲೋಷ್ಟಾಶ್ಮಕಾಂಚನಃ ॥೮॥**

ಯಾವನು ಮಣ್ಣು, ಕಲ್ಲು, ಸುವರ್ಣವನ್ನು ಸಮಾನವಾಗಿ ಭಾವಿಸುವನೋ, ಮತ್ತು ಜ್ಞಾನ ವಿಜ್ಞಾನಗಳಿಂದ ತೃಪ್ತನಾಗಿಯೂ ನಿರ್ವಿಕಾರನಾಗಿಯೂ ಜಿತೇಂದ್ರಿಯನಾಗಿಯೂ ಇರುವನೋ ಆ ಯೋಗಿಯು ಯೋಗಾರೂಢ (ಯೋಗಿಗಳಲ್ಲಿ ಶ್ರೇಷ್ಠನು) ಎಂದು ಹೇಳಲ್ಪಡುವನು.

**ಸುಹೃನ್ಮಿತ್ರಾರ್ಯುದಾಸೀನ, ಮಧ್ಯಸ್ಥ ದ್ವೇಷ್ಯ ಬಂಧುಷು ।**
**ಸಾಧುಷ್ವಪಿ ಚ ಪಾಪೇಷು, ಸಮಬುದ್ಧಿರ್ವಿಶಿಷ್ಯತೇ ॥೯॥**

ಯಾವನು ಪ್ರತ್ಯುಪಕಾರಾಪೇಕ್ಷೆಯಿಲ್ಲದೆ ಉಪಕಾರ ಮಾಡುವ ಸುಹೃತ್ತಿನಲ್ಲಿಯೂ, ಪ್ರತ್ಯುಪಕಾರಾಪೇಕ್ಷೆಯಿಂದ ಉಪಕಾರವನ್ನು ಮಾಡುವ ಮಿತ್ರನಲ್ಲಿಯೂ, ಶತ್ರುವಿನಲ್ಲಿಯೂ, ಎರಡು ಪಕ್ಷಗಳನ್ನೂ ವಹಿಸದ ತಟಸ್ಥನಾದ ಉದಾಸೀನನಲ್ಲಿಯೂ, ನ್ಯಾಯಪಕ್ಷವನ್ನು ವಹಿಸಿದ ಮಧ್ಯಸ್ಥನಲ್ಲಿಯೂ ದುಷ್ಟನಲ್ಲಿಯೂ, ಬಂಧುವಿನಲ್ಲಿಯೂ, ಸತ್ಪುರುಷರಲ್ಲಿಯೂ, ಮತ್ತು ಪಾಪಿಗಳಲ್ಲಿಯೂ ಸಮಬುದ್ಧಿಯುಳ್ಳವನಾಗಿರುವನೋ ಅವನೇ ಯೋಗಾರೂಢರಲ್ಲಿ ಶ್ರೇಷ್ಠನೆನಿಸಿಕೊಳ್ಳುವನು.

**ಯೋಗೀ ಯುಂಜೀತ ಸತತ, ಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ, ನಿರಾಶೀರಪರಿಗ್ರಹಃ ॥೧೦॥**

ಧನಾದಿ ಭೋಗ್ಯವಸ್ತುಗಳನ್ನು ಅವಶ್ಯಕತೆಗಿಂತಲೂ ಅಧಿಕವಾಗಿ ಸಂಗ್ರಹಮಾಡದಿರುವವನಾಗಿಯೂ, ಆಶಾರಹಿತನಾಗಿಯೂ, ಶರೀರೇಂದ್ರಿಯ ಮತ್ತು ಅಂತಃಕರಣಗಳನ್ನು ಸ್ವಾಧೀನ ಮಾಡಿಕೊಂಡಿರುವವನಾಗಿಯೂ ಏಕಾಂಗಿಯಾಗಿಯೂ ಇರುವ ಯೋಗಿಯು ರಹಸ್ಯ (ಏಕಾಂತ) ಸ್ಥಾನದಲ್ಲಿದ್ದುಕೊಂಡು ನಿರಂತರದಲ್ಲಿಯೂ ಮನಸ್ಸನ್ನು ಪರಮಾತ್ಮನಲ್ಲಿಯೇ ನಿಲ್ಲಿಸಬೇಕು. (ಅಧ್ಯಾಯ 3 ಶ್ಲೋಕ 42 ನ್ನು ನೋಡತಕ್ಕದ್ದು)

**ಶುಚೌ ದೇಶೇ ಪ್ರತಿಷ್ಠಾಪ್ಯ, ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ, ಚೈಲಾಜಿನಕುಶೋತ್ತರಮ್ ॥೧೧॥**
**ತತ್ರೈಕಾಗ್ರಂ ಮನಃ ಕೃತ್ವಾ, ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾ, ದ್ಯೋಗಮಾತ್ಮ ವಿಶುದ್ಧಯೇ ॥೧೨॥**

ಯೋಗಾಭ್ಯಾಸಮಾಡುವವನು ಶುಚಿಯಾದ ಸ್ಥಳದಲ್ಲಿ ದರ್ಭಾಸನದ ಮೇಲೆ ಮೃಗಚರ್ಮವೂ ಅದರಮೇಲೆ ವಸ್ತ್ರವೂ ಹಾಕಿರುವ ಆಸನವನ್ನು, ಎತ್ತು ತಗ್ಗುಗಳಿಲ್ಲದ ಸಮತಲ ಪ್ರದೇಶದಲ್ಲಿ ಸ್ಥಾಪಿಸಿ ಆ ಆಸನದ ಮೇಲೆ ಕುಳಿತುಕೊಂಡವನಾಗಿ, ಇಂದ್ರಿಯ ಮತ್ತು ಅಂತಃಕರಣದ ವ್ಯಾಪಾರಗಳನ್ನು ಜಯಿಸಿ, ಮನಸ್ಸನ್ನು ಏಕಾಗ್ರವಾಗಿ ಮಾಡಿಕೊಂಡು ಚಿತ್ತಶುದ್ಧಿಗಾಗಿ ಯೋಗಾಭ್ಯಾಸವನ್ನು ಮಾಡತಕ್ಕದ್ದು.

**ಸಮಂ ಕಾಯಶಿರೋಗ್ರೀವಂ, ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ, ದಿಶಶ್ಚಾನವಲೋಕಯನ್ ॥೧೩॥**

**ಪ್ರಶಾಂತಾತ್ಮಾ ವಿಗತಭೀಃ, ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಸ್ಸಂಯಮ್ಯ ಮಚ್ಚಿತ್ತೋ, ಯುಕ್ತ ಆಸೀತ ಮತ್ಪರಃ ॥೧೪॥**

ಪೂರ್ವೋಕ್ತ ಆಸನದಲ್ಲಿ ಕುಳಿತು ಶರೀರವನ್ನೂ ಶಿರಸ್ಸನ್ನೂ ಕೊರಳನ್ನೂ ಸಮವಾಗಿ ಚಲನೆಯಿಲ್ಲದೆ ಸ್ಥಿರವಾಗಿ ಇರಿಸಿಕೊಂಡವನಾಗಿ ಯಾವ ದಿಕ್ಕನ್ನೂ ನೋಡದೆ ತನ್ನ ನಾಸಿಕಾಗ್ರ ( ಮೂಗಿನ ತುದಿ ) ಭಾಗವನ್ನೇ ನೋಡುವವನಾಗಿ, ಶಾಂತಚಿತ್ತನಾಗಿ ನಿರ್ಭಯನಾಗಿ ಬ್ರಹ್ಮಚಾರಿವ್ರತದಲ್ಲಿರುತ್ತಾ ಮನಸ್ಸನ್ನು ವಿಷಯಗಳಿಂದ ನಿರೋಧಗೊಳಿಸಿ, ಪರಮಾತ್ಮನಲ್ಲಿಯೇ ತತ್ಪರ (ಸಂಲಗ್ನ) ವಾದ ಚಿತ್ತವುಳ್ಳವನಾಗಿ ಪರಬ್ರಹ್ಮಕ್ಕಿಂತಲೂ ಶ್ರೇಷ್ಠತಮವಾದದ್ದು ಮತ್ತಾವುದೂ ಇಲ್ಲವೆಂದು ತಿಳಿದು ಸಮಾಧಿಯ ಅಭ್ಯಾಸವನ್ನು ಮಾಡುತ್ತಿರಬೇಕು.

**ಯುಂಜನ್ನೇವಂ ಸದಾತ್ಮಾನಂ, ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ, ಮತ್ಸಂಸ್ಥಾಮಧಿಗಚ್ಛತಿ ॥೧೫॥**

ಮೇಲೆ ಹೇಳಿದ ರೀತಿಯಲ್ಲಿ ಸದಾ ಯೋಗಾಭ್ಯಾಸವನ್ನು(X)ಮಾಡುವ ಯೋಗಿಯು ಮನೋನಿರೋಧವುಳ್ಳವನಾಗಿ ನನ್ನ ಸ್ವರೂಪಭೂತವಾದ ಪರಮಾನಂದದ ಪರಾಕಾಷ್ಟವಾದ ನಿರ್ವಾಣವೆಂಬ ಪರಮ ಶಾಂತಿಯನ್ನು ಹೊಂದುವನು.

---

(x) ಅಭ್ಯಾಸದ ಧೃಡತೆಯಿಂದ ಮನಸ್ಸನ್ನು ನಿರುದ್ಧ ಪಡಿಸಿಕೊಂಡಿರುವವನಿಗೆ 'ನಿಯತಮಾನಸ ನೆಂದು' ಹೆಸರು.

**ನಾತ್ಯಶ್ನತಸ್ತು ಯೋಗೋಽಸ್ತಿ, ನ ಚೈಕಾಂತ ಮನಶ್ನತಃ ।**
**ನಚಾತಿ ಸ್ವಪ್ನಶೀಲಸ್ಯ, ಜಾಗ್ರತೋ ನೈವ ಚಾರ್ಜುನ ॥೧೬॥**

ಎಲೈ ಅರ್ಜುನಾ ! ಹೆಚ್ಚಾಗಿ ಭೋಜನಮಾಡುವವನಿಗೂ, ಭೋಜನವೇ ಮಾಡದೆ ಕೇವಲ ಉಪವಾಸ ಮಾಡುವವನಿಗೂ, ಅತಿ ನಿದ್ರಾಳುವಾದವನಿಗೂ ಮತ್ತು ನಿದ್ರೆಯನ್ನೇ ಬಿಟ್ಟು ಸದಾ ಜಾಗರಣೆ ಮಾಡುವವನಿಗೂ ಯೋಗವು ಸಿದ್ಧಿಸುವುದಿಲ್ಲ.

**ಯುಕ್ತಾಹಾರವಿಹಾರಸ್ಯ, ಯುಕ್ತ ಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ, ಯೋಗೋ ಭವತಿ ದುಃಖಹಾ ॥೧೭॥**

ಆಹಾರ ವಿಹಾರಗಳಲ್ಲಿ ನಿಯಮವುಳ್ಳವನಾಗಿಯೂ, ಕಾರ್ಯಕಲಾಪಗಳನ್ನು ಮಿತವಾಗಿ ಮಾಡುವವನಾಗಿಯೂ ಮತ್ತು ಯುಕ್ತವಾದ ನಿದ್ರೆಯೂ ಕಾಲನಿಯಮ ಪೂರ್ವಕವಾದ ಜಾಗರಣೆಯೂ ಉಳ್ಳವನಾಗಿಯೂ ಇರುವ ಇಂತಹ ಸಾಧನ ಸಂಪನ್ನನಿಗೇ ದುಃಖವನ್ನು ಹೋಗಲಾಡಿಸುವ ಯೋಗವು ಲಭಿಸುವುದು.

**ಯದಾ ವಿನಿಯತಂ ಚಿತ್ತ, ಮಾತ್ಮನ್ಯೇವಾವತಿಷ್ಠತೇ ।**
**ನಿಸ್ಪೃಹಃ ಸರ್ವಕಾಮೇಭ್ಯೋ, ಯುಕ್ತ ಇತ್ಯುಚ್ಯತೇ ತದಾ ॥೧೮॥**

ಯಾವ ಸಮಯದಲ್ಲಿ ದೃಢತರ ಅಭ್ಯಾಸಬಲದಿಂದ ನಿಗ್ರಹಿಸಲ್ಪಟ್ಟಂತಹ ಚಿತ್ತವು ಪರಮಾತ್ಮನಲ್ಲಿಯೇ ಸ್ಥಿರವಾಗಿರುವುದೋ, ಅಲ್ಲದೆ ಸಮಸ್ತ ಭೋಗಗಳಲ್ಲಿಯೂ ರಾಗದ್ವೇಷಗಳಿಲ್ಲವೆಂಬ ನಿಃಸ್ಪೃಹತೆ ಉಂಟಾಗುವುದೋ, ಆಗ ಆ ಸಾಧಕನು ಯೋಗಾರೂಢನೆಂದು ಹೇಳಿಸಿಕೊಳ್ಳುವನು.

**ಯಥಾ ದೀಪೋ ನಿವಾತಸ್ಥೋ, ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ, ಯುಂಜತೋ ಯೋಗಮಾತ್ಮನಃ ॥೧೯॥**

ಗಾಳಿ ಇಲ್ಲದಿರುವ ಸ್ಥಾನದಲ್ಲಿ ಇಡಲ್ಪಟ್ಟ ದೀಪವು ಹೇಗೆ ನಿಶ್ಚಲವಾಗಿದ್ದು ಉರಿಯುವುದೋ ಅದರಂತೆ ಸ್ವಾಧೀನಗೈದ ಯೋಗಿಯ ಮನಸ್ಸು ಪರಮಾತ್ಮನ ಧ್ಯಾನದಲ್ಲಿ ಏಕಾಗ್ರತೆ (ನಿಶ್ಚಲತೆ) ಯನ್ನು ಹೊಂದಿದೆ ಎಂದು ಯೋಗವೇತ್ತರಿಂದ ಹೇಳಲ್ಪಟ್ಟಿದೆ.

**ಯತ್ರೋಪರಮತೇ ಚಿತ್ತಂ, ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾಽಽತ್ಮಾನಂ, ಪಶ್ಯನ್ನಾತ್ಮನಿ ತುಷ್ಯತಿ ॥೨೦॥**

ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ, ಸ್ಥಿತಶ್ಚಲತಿ ತತ್ತ್ವತಃ ॥೨೧॥
ಯಂ ಲಬ್ಧ್ವಾ ಚಾಪರಂ ಲಾಭಂ, ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ, ಗುರುಣಾಪಿ ವಿಚಾಲ್ಯತೇ ॥೨೨॥
ತಂ ವಿದ್ಯಾದ್ದುಃಖಸಂಯೋಗ, ವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ, ಯೋಗೋಽನಿರ್ವಿಣ್ಣಚೇತಸಾ ॥೨೩॥

ಯೋಗಾಭ್ಯಾಸ ಬಲದಿಂದ ನಿರುದ್ಧವಾದ ಯೋಗಿಯ ಚಿತ್ತವು ಎಲ್ಲಿ ಉಪರಾಮವನ್ನು ಹೊಂದುವುದೋ, ಯಾವ ಅವಸ್ಥೆಯಲ್ಲಿ ಪರಮಾತ್ಮನಧ್ಯಾನದಿಂದ ನಿರ್ಮಲವಾದ ಬುದ್ಧಿಯಮೂಲಕ ಆತ್ಮನನ್ನು ತಿಳಿದವನಾಗಿ ತನ್ನಲ್ಲಿಯೇ ಸಂತುಷ್ಟನಾಗಿರುವನೋ, ಯಾವ ಅವಸ್ಥೆಯಲ್ಲಿ ಇಂದ್ರಿಯಗಳಿಗೆ ಅಗೋಚರವಾಗಿಯೂ ಪರಂತು ಪರಿಶುದ್ಧ ಬುದ್ಧಿಗೆ ಮಾತ್ರ ಗ್ರಾಹ್ಯವಾಗಿಯೂ ಇರುವ ಅತ್ಯಧಿಕವಾದ ಸುಖವನ್ನು ತಿಳಿಯುವನೋ, ಮತ್ತು ಯಾವ ಸ್ಥಳದಲ್ಲಿ ನಿಂತಿರುವ ಬುದ್ಧಿಯು ಯಥಾರ್ಥ ವಸ್ತುವನ್ನು ಬಿಟ್ಟು ಸ್ವಲ್ಪವೂ ಚಲಿಸುವುದಿಲ್ಲವೋ, ಹಾಗೆಯೇ ಯಾವುದನ್ನು ಹೊಂದಿದವನಾಗಿ ಅದಕ್ಕಿಂತ ಅಧಿಕವಾದ ಲಾಭವು ಯಾವುದೂ ಇಲ್ಲವೆಂದು ಭಾವಿಸುವನೋ, ಮತ್ತು ಯಾವುದರಲ್ಲಿ ನಿಂತರೆ ಅತಿ ಕಠಿಣವಾದ ದುಃಖದಿಂದಲೂ ಅಲ್ಲಾಡಿಸಲ್ಪಡುವುದಿಲ್ಲವೋ, ಅದನ್ನು ದುಃಖವನ್ನು ಹೋಗಲಾಡಿಸುವ ಯೋಗವೆಂಬುದಾಗಿ ತಿಳಿಯತಕ್ಕದ್ದು. ಉತ್ಸಾಹಯುಕ್ತವಾದ ಚಿತ್ತದಿಂದ ಈ ಯೋಗವು ಅವಶ್ಯಕವಾಗಿ ಅಭ್ಯಾಸಿಸಲು ಯೋಗ್ಯವಾಗಿರುವುದು.

ಸಂಕಲ್ಪಪ್ರಭವಾನ್ ಕಾಮಾಂ, ಸ್ತ್ಯಕ್ತ್ವಾ ಸರ್ವಾನಶೇಷತಃ ।
ಮನಸೈವೇಂದ್ರಿಯಗ್ರಾಮಂ, ವಿನಿಯಮ್ಯ ಸಮಂತತಃ ॥೨೪॥
ಶನೈಶ್ಶನೈರುಪರಮೇ, ದ್ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ, ನ ಕಿಂಚದಪಿ ಚಿಂತಯೇತ್ ॥೨೫॥

ಸಂಕಲ್ಪದಿಂದ ಹುಟ್ಟಿದ ಸಮಸ್ತ ಕಾಮನೆಗಳನ್ನೂ ಬಿಟ್ಟು ಶಬ್ದಾದಿ ವಿಷಯಗಳಲ್ಲಿ ಪ್ರವರ್ತಿಸುವ ಸರ್ವೇಂದ್ರಿಯಗಳನ್ನು ಮನಸ್ಸಿನಿಂದ ನಿರೋಧಿಸಿ, ಧಾರಣಾಯುಕ್ತವಾದ ಬುದ್ಧಿಯಿಂದ ಸಾವಧಾನದಿಂದ ಮನವನ್ನು ಆತ್ಮಾಭಿಮುಖವಾಗಿಮಾಡಿ, ಆತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿದನಂತರ ಪರಮಾತ್ಮನ ವಿನಹ ಮತ್ತಾವುದನ್ನೂ ಸ್ವಲ್ಪವಾದರೂ ಚಿಂತಿಸಬಾರದು.

**ಯತೋ ಯತೋ ನಿಶ್ಚರತಿ, ಮನಶ್ಚಂಚಲ ಮಸ್ಥಿರಮ್ ।**
**ತತಸ್ತತೋ ನಿಯಮ್ಯೈತ, ದಾತ್ಮನ್ಯೇವ ವಶಂ ನಯೇತ್ ॥೨೬॥**

ಈ ಪ್ರಕಾರವಾಗಿ ಆತ್ಮನಲ್ಲಿಯೇ ನಿರುದ್ಧಗೊಳಿಸಿದ ಮನಸ್ಸು ಅಲ್ಲಿ ಸ್ಥಿರವಾಗಿ ನಿಲ್ಲದೆ ವಿಷಯಾಂತರವನ್ನು ಪ್ರವೇಶಿಸುವುದಾದರೆ ಕೂಡಲೇ— ತತ್ಕಾಲದಲ್ಲಿಯೇ ಆಯಾಯ ವಿಷಯಗಳಿಂದ ಮನಸ್ಸನ್ನು ಹಿಮ್ಮೆಟ್ಟಿಸಿಕೊಂಡು ಆತ್ಮನಲ್ಲಿಯೇ ಸ್ಥಿರವಾಗಿ ನಿಲ್ಲುವಂತೆ ನಿರೋಧಗೊಳಿಸುವುದು.

**ಪ್ರಶಾಂತಮನಸಂ ಹ್ಯೇನಂ, ಯೋಗಿನಂ ಸುಖ ಮುತ್ತಮಮ್ ।**
**ಉಪೈತಿ ಶಾಂತರಜಸಂ, ಬ್ರಹ್ಮಭೂತಮಕಲ್ಮಷಮ್ ॥೨೭॥**

ಏಕೆಂದರೆ—ಪ್ರಶಾಂತಚಿತ್ತನಾಗಿಯೂ, ನಿಷ್ಪಾಪನಾಗಿಯೂ, ರಜೋ ಗುಣವಿಲ್ಲದವನಾಗಿಯೂ, ಬ್ರಹ್ಮಭಾವವನ್ನು ಹೊಂದಿರುವ ಈ ಯೋಗಿಗೆ ಉತ್ತಮವಾದ ಸುಖವು ಪ್ರಾಪ್ತವಾಗುವುದು.

**ಯುಂಜನ್ನೇವಂ ಸದಾಽಽತ್ಮಾನಂ, ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶ, ಮತ್ಯಂತಂ ಸುಖಮಶ್ನುತೇ ॥೨೮॥**

ಈ ರೀತಿಯಾಗಿ ಯೋಗಿಯಾದವನು ಸರ್ವದಾ ಮನಸ್ಸನ್ನು ಆತ್ಮನಲ್ಲಿ ನಿರೋಧಗೊಳಿಸಿ ಸಮಸ್ತ ದೋಷಗಳನ್ನು ಕಳೆದುಕೊಂಡವನಾಗಿ ಆತ್ಮಚಿಂತನೆ ಮಾಡುತ್ತಾ ಅನಾಯಾಸದಿಂದ ಬ್ರಹ್ಮಸಂಬಂಧವಾದ ನಿರತಿಶಯಾನಂದವನ್ನೇ ಅನುಭವಿಸುತ್ತಾನೆ.

**ಸರ್ವಭೂತಸ್ಥಮಾತ್ಮಾನಂ, ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ, ಸರ್ವತ್ರ ಸಮದರ್ಶನಃ ॥೨೯॥**

ಸರ್ವತ್ರ ಸಮದರ್ಶಿಯಾದ ಯೋಗಾರೂಢನು ಎಲ್ಲಾ ಭೂತಗಳಲ್ಲಿಯೂ ತನ್ನ ಆತ್ಮನು ಇರುವುದಾಗಿಯೂ, ಸಮಸ್ತ ಭೂತಗಳೂ ತನ್ನ ಆತ್ಮನಲ್ಲಿಯೇ ಇರುವಂತೆಯೂ ನೋಡುವನು.

**ಯೋ ಮಾಂ ಪಶ್ಯತಿ ಸರ್ವತ್ರ, ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ, ಸ ಚ ಮೇ ನ ಪ್ರಣಶ್ಯತಿ ॥೩೦॥**

ಯಾವ ಯೋಗಿಯು ಸರ್ವ ಪ್ರಪಂಚದಲ್ಲಿಯೂ ಪರಮೇಶ್ವರನಾದ ನನ್ನನ್ನು ನೋಡುವನೋ, ಹಾಗೆಯೇ ಸರ್ವ ಪ್ರಪಂಚವನ್ನೂ ನನ್ನಲ್ಲಿಯೇ ನೋಡುವನೋ ಆ ಜ್ಞಾನಿಗೆ ನಾನು ಪರೋಕ್ಷನಲ್ಲ, ಸದಾ ಪ್ರತ್ಯಕ್ಷನೇ; ಮತ್ತು ನನಗೆ ಅವನೂ ಸದಾ ಪ್ರತ್ಯಕ್ಷನೇ.

**ಸರ್ವಭೂತಸ್ಥಿತಂ ಯೋ ಮಾಂ । ಭಜತ್ಯೇಕತ್ವ ಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ, ಸ ಯೋಗೀ ಮಯಿ ವರ್ತತೇ ॥೩೦॥**

ಯಾವನು ಸರ್ವಭೂತಗಳಲ್ಲಿಯೂ ಇರುವ ನನ್ನನ್ನು ಅಭೇದ ಬುದ್ಧಿಯಿಂದ ಭಜಿಸುವನೋ ಆ ಯೋಗಿಯು ಪ್ರಾರಬ್ಧವಶದಿಂದ ಯಾವ ಯಾವ ರೀತಿಯಿಂದ ವ್ಯವಹರಿಸುತ್ತಿದ್ದಾಗ್ಯೂ (X) ಪರಮಾತ್ಮನಾದ ನನ್ನಲ್ಲಿಯೇ ಅಭೇದರೂಪದಿಂದ ವರ್ತಿಸುವನು.

**ಆತ್ಮೌಪಮ್ಯೇನ ಸರ್ವತ್ರ, ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ, ಸ ಯೋಗೀ ಪರಮೋ ಮತಃ॥೩೨॥**

ಎಲೈ ಅರ್ಜುನಾ ! ಯಾವ ಪುರುಷನು ಸರ್ವಪ್ರಾಣಿಗಳಲ್ಲಿಯೂ ತನ್ನ ಆತ್ಮನೇ ಇದ್ದಾನೆಂದು ತಿಳಿದು ಸಮದೃಷ್ಟಿಯಿಂದ ನೋಡುವನೋ, ಹಾಗೆಯೇ ಸುಖದುಃಖಗಳನ್ನೂ ಸಮವಾಗಿ ನೋಡುವನೋ, ಆ ಯೋಗಿಯು (ಬ್ರಹ್ಮಜ್ಞಾನಿಯು) ಅತ್ಯಂತ ಶ್ರೇಷ್ಠನೆಂದು ನನ್ನ ಅಭಿಪ್ರಾಯವು.

## ಅರ್ಜುನ ಉವಾಚ

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ, ಸಾಮ್ಯೇನ ಮಧುಸೂದನ।**
**ಏತಸ್ಯಾಹಂ ನ ಪಶ್ಯಾಮಿ, ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥**

ಅರ್ಜುನನಿಂತೆಂದನು :- ಹೇ ಮಧುಸೂದನ ! ನಿನ್ನಿಂದ ಹೇಳಲ್ಪಟ್ಟ ಯಾವ ಈ ಸಮಭಾವ ರೂಪವಾದಯೋಗವುಂಟೋ ಅದನ್ನು, ನನ್ನ ಮನವು ಚಂಚಲವಾಗಿರುವುದರಿಂದ, ಯಥಾರ್ಥವಾದ ರೀತಿಯಲ್ಲಿ ನೋಡಲಾರದೆ (ತಿಳಿಯಲಾರದೆ) ಇರುವೆನು.

---

(X) ತಮ್ಮ ತಮ್ಮ ಪ್ರಾರಬ್ಧಾನುಸಾರ ಜನಕಾದಿಗಳಂತೆ ರಾಜ್ಯಪರಿಪಾಲನಾದಿ ರಾಜಸಕರ್ಮದಿಂದಾದರೂ, ಯಾಜ್ಞವಲ್ಕ್ಯಾದಿಗಳಂತೆ ಉತ್ತರಾವಸ್ಥೆಯೊಳ್ ಕರ್ಮತ್ಯಾಗವೆಂಬ ಸಂನ್ಯಾಸದಿಂದಾದರೂ ಅಥವಾ ವಶಿಷ್ಠಾದಿಗಳಂತೆ ವಿಹಿತ ಕರ್ಮದಿಂದಾದರೂ, ಶುಕ ದತ್ತಾತ್ರೇಯಾದಿ ಅವಧೂತರಂತೆ ಯಥೇಚ್ಛಾಚಾರವೆಂಬ ಅವಿಹಿತಕರ್ಮದಿಂದಾದರೂ ಜೀವನ್ಮುಕ್ತರ ವಿಲಕ್ಷಣವ್ಯವಹಾರವು ನಾನಾ ಬಗೆಯಾಗಿ ಕಂಡುಬರುವುದು. ಆದರೆ ಇದರ ತಾತ್ಪರ್ಯವು ನಿಷಿದ್ಧ ಕರ್ಮದಲ್ಲಿ ಪ್ರವೃತ್ತಿ ಎಂಬುದಲ್ಲ.

ಚಂಚಲಂ ಹಿ ಮನಃ ಕೃಷ್ಣ, ಪ್ರಮಾಥಿ ಬಲವದ್ದೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ, ವಾಯೋರಿವ ಸುದುಷ್ಕರಮ್ ॥೩೪॥

ಎಲೈ ಕೃಷ್ಣನೇ ! ಈ ಮನಸ್ಸಾದರೋ ಚಂಚಲಸ್ವಭಾವವುಳ್ಳದ್ದಾಗಿಯೂ, ಶರೀರೇಂದ್ರಿಯಗಳಿಗೆ ಕ್ಷೋಭೆಯನ್ನು ಉಂಟು ಮಾಡತಕ್ಕದ್ದಾಗಿಯೂ, ಬಲವುಳ್ಳದ್ದಾಗಿಯೂ, ಭೇದಿಸಲು ಅಸಾಧ್ಯವಾಗಿಯೂ ಇರುವುದು. ಹೀಗಿರುವ ಮನಸ್ಸನ್ನು ನಿಗ್ರಹಮಾಡುವುದು, ಗಾಳಿಯನ್ನು ಹಿಡಿದು ಕಟ್ಟಿ ಹಾಕುವುದಕ್ಕೆ ಹೇಗೆ ಆಗುವುದಿಲ್ಲವೋ ಅದರಂತೆ, ಅತ್ಯಂತ ದುಷ್ಕರ ವೆಂಬುದಾಗಿ ಭಾವಿಸುತ್ತೇನೆ.

## ಶ್ರೀ ಭಗವಾನುವಾಚ

ಅಸಂಶಯಂ ಮಹಾಬಾಹೋ, ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ, ವೈರಾಗ್ಯೇಣ ಚ ಗೃಹ್ಯತೇ ॥೩೫॥

ಶ್ರೀ ಭಗವಂತನಿಂತೆಂದನು ;–ಎಲೈ ಮಹಾಬಾಹುವಾದ ಅರ್ಜುನನೇ! ಚಂಚಲಸ್ವಭಾವವುಳ್ಳ ಮನಸ್ಸನ್ನು ನಿಗ್ರಹಿಸುವುದು ಕಠಿಣವೇ ಸರಿ. ಈ ವಿಷಯದಲ್ಲಿ ಸಂಶಯವಿಲ್ಲ. ಆದರೆ ಎಲೈ ಕೌಂತೇಯನೇ ! ಅಭ್ಯಾಸದಿಂದಲೂ ಮತ್ತು ವೈರಾಗ್ಯದಿಂದಲೂ ಇದನ್ನು ನಿರೋಧಗೊಳಿಸಬಹುದು.

ಅಸಂಯತಾತ್ಮನಾ ಯೋಗೋ, ದುಷ್ಪ್ರಾಪ ಇತಿ ಮೇ ಮತಿಃ ।
ವಶ್ಯಾತ್ಮನಾ ತು ಯತತಾ, ಶಕ್ಯೋಽವಾಪ್ತುಮುಪಾಯತಃ ॥೩೬॥

ಅಭ್ಯಾಸ ವೈರಾಗ್ಯಗಳಿಲ್ಲದವನಿಂದ ಈ ಯೋಗವು ಹೊಂದಲು ಅತ್ಯಂತ ಕಠಿಣವೆಂಬುದಾಗಿ ನನ್ನ ಅಭಿಪ್ರಾಯವು. ಸದಾ ಧ್ಯಾನಯೋಗದಲ್ಲಿ ಪ್ರಯತ್ನ ಶೀಲನಾಗಿಯೂ, ಮನಸ್ಸನ್ನು ತನ್ನ ವಶಮಾಡಿಕೊಂಡವನಾಗಿಯೂ ಇರುವವನಿಂದ ಮಾತ್ರ ನನ್ನಿಂದ ಹೇಳಲ್ಪಟ್ಟ ಈ ಸಮತ್ವರೂಪ ಯೋಗವು ಸುಲಭವಾಗಿ ಹೊಂದಲ್ಪಡುವುದು.

## ಅರ್ಜುನ ಉವಾಚ

ಅಯತಿಃ ಶ್ರದ್ಧಯೋಪೇತೋ, ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ, ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥

ಅರ್ಜುನನು ಶ್ರೀ ಕೃಷ್ಣಪರಮಾತ್ಮನನ್ನು ಕುರಿತು ಈರೀತಿ ಪ್ರಶ್ನೆ ಮಾಡಿದನು ;–ಎಲೈ ಶ್ರೀಕೃಷ್ಣ ಭಗವಂತನೇ ! ಶ್ರದ್ಧಾವಂತನಾದರೂ ತಕ್ಕಷ್ಟು

ಪ್ರಯತ್ನ ಮಾಡದ ಕಾರಣ ಯೋಗದಿಂದ ಚಲಿಸಲ್ಪಟ್ಟ ಮನವುಳ್ಳವನು ಯೋಗಸಿದ್ಧಿಯನ್ನು ಹೊಂದಲಾರನಾದುದರಿಂದ ಮುಂದೆ ಅವನು ಯಾವ ಗತಿಯನ್ನು ಹೊಂದುವನು ?

**ಕಚ್ಚಿನ್ನೋಭಯವಿಭ್ರಷ್ಟ, ಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ, ವಿಮೂಢೋ ಬ್ರಹ್ಮಣಃ ಪಥಿ ॥೩೮॥**

ಎಲೈ ಮಹಾಬಾಹುವಾದ ಶ್ರೀ ಕೃಷ್ಣಪರಮಾತ್ಮನೇ ! ಈರೀತಿಯಾಗಿ ಯೋಗಭ್ರಷ್ಟನಾದವನು ಬ್ರಹ್ಮಮಾರ್ಗದಲ್ಲಿ ಸ್ಥಿತಿಯನ್ನುಪಡೆಯದೆ, ಗಾಳಿಯಿಂದ ಛಿನ್ನ ಭಿನ್ನವಾದ ಮೋಡದಂತೆ, ಭೋಗ ಮೋಕ್ಷಗಳೆರಡರಿಂದಲೂ ಭ್ರಷ್ಟನಾಗಿ ನಾಶವನ್ನು ಹೊಂದುತ್ತಾನೆಯೋ ಏನು ?

**ಏತನ್ಮೇ ಸಂಶಯಂ ಕೃಷ್ಣ, ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ, ಛೇತ್ತಾ ನ ಹ್ಯುಪಪದ್ಯತೇ ॥೩೯॥**

ಹೇ ಶ್ರೀ ಕೃಷ್ಣನೇ ! ಈ ನನ್ನ ಸಂಶಯುವನ್ನು ನಿಶ್ಶೇಷವಾಗಿ ಪರಿಹರಿಸಲು ನೀನೇ ಅರ್ಹನಾಗಿದ್ದೀಯೆ. ಏತಕ್ಕೆಂದರೆ—ನನ್ನ ಈ ಸಂಶಯುವನ್ನು ಪರಿಹರಿಸಲು ನಿನ್ನ ಹೊರತು ಇನ್ನಾರೂ ಸಮರ್ಥರಾಗಿಲ್ಲ.

ಯೋಗಭ್ರಷ್ಟನ ಪ್ರಶ್ನೆ ಮರಣಾಂತರದ ಸ್ಥಿತಿಗೆ ಸಂಬಂಧಿಸಿದ' ಪ್ರಶ್ನೆ ಆದ್ದರಿಂದ ಇದಕ್ಕೆ ನಿಜವಾದ ಉತ್ತರ ಕೊಡಲು ಸೃಷ್ಟಿಕರ್ತನೂ, ಲೋಕಸಂಚಾಲಕನೂ, ಸರ್ವಜ್ಞನೂ ಸರ್ವಾಂತರ್ಯಾಮಿಯೂ, ಸರ್ವಸಮರ್ಥನೂ ಆದ ಶ್ರೀ ಕೃಷ್ಣ ಭಗವಂತನೊಬ್ಬನೇ ಸಮರ್ಥನು. ಅಲ್ಲದೆ ಶ್ರೀಕೃಷ್ಣನಿಗೆ ಸಮಾನವಾದ ಜ್ಞಾನವುಳ್ಳವರು ಬೇರೆಯಾರೂ ಅರ್ಜುನನಿಗೆ ಇಷ್ಟು ಸುಲಭವಾಗಿ ದೊರಕುವಂತೆಯೂ ಇರಲಿಲ್ಲ. ಆದುದರಿಂದ ಈ ಸಂದರ್ಭದಲ್ಲಿ ಅರ್ಜುನನ ಈ ಮಾತುಗಳು ತುಂಬ ಸಮಂಜಸವಾಗಿವೆ.

### ಶ್ರೀ ಭಗವಾನುವಾಚ

**ಪಾರ್ಥ ನೈವೇಹ ನಾಮುತ್ರ, ವಿನಾಶಸ್ತಸ್ಯ ವಿದ್ಯತೇ ।**
**ನಹಿ ಕಲ್ಯಾಣ ಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥**

ಶ್ರೀ ಭಗವಂತನಿಂತೆಂದನು :– ಎಲೈ ಪಾರ್ಥನೇ ! ಯೋಗಭ್ರಷ್ಟನಾದವನಿಗೆ ಇಹ ಲೋಕದಲ್ಲಿಯೂ, ಪರಲೋಕದಲ್ಲಿಯೂ ಎಂದಿಗೂ ಹಾನಿ

ಸಂಭವಿಸುವುದಿಲ್ಲ. ಉತ್ತಮ ಕಾರ್ಯವನ್ನು ಮಾಡುವ ಯಾವನೂ ದುರ್ಗತಿಯನ್ನು ಹೊಂದುವುದಿಲ್ಲವಯ್ಯಾ! ಹೀಗಿರುವಲ್ಲಿ ಯೋಗಭ್ರಷ್ಟನ ಮಾತೇನು?

**ಪ್ರಾಪ್ಯ ಪುಣ್ಯಕೃತಾನ್ ಲೋಕಾ, ಸುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ, ಯೋಗಭ್ರಷ್ಟೋಽಭಿಜಾಯತೇ ॥**

ಹೀಗೆ ಯೋಗಭ್ರಷ್ಟನಾದವನು ಅಶ್ವಮೇಧಾದಿ ಯಾಗಗಳನ್ನು ಮಾಡಿದವರು ಹೊಂದಲು ಯೋಗ್ಯವಾದ ಸ್ವರ್ಗಾದಿ ಉತ್ತಮ ಲೋಕಗಳನ್ನು ಸೇರಿ ಅಲ್ಲಿ ಬಹುಕಾಲದವರೆಗೂ ಇದ್ದು ಅನಂತರ ಸದಾಚಾರಸಂಪನ್ನರಾದ ಶ್ರೀಮಂತರ ಗೃಹದಲ್ಲಿ ಹುಟ್ಟುವನು.

**ಅಥವಾ ಯೋಗಿನಾಮೇವ, ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ, ಲೋಕೇ ಜನ್ಮ ಯದೀದೃಶಮ್ ॥೪೨॥**

ಅಥವಾ ಯೋಗಸಿದ್ಧಿಯನ್ನು ಪಡೆಯಲು ಪ್ರಯತ್ನಿಸಿ ಸಾಕ್ಷಾತ್ಕಾರಕ್ಕೆ ಇನ್ನುಕೊಂಚಮಾತ್ರ ಉಳಿದಿರುವ ಸಾಧನವುಳ್ಳ ಯೋಗಭ್ರಷ್ಟನು ಪೂರ್ವೋಕ್ತವಾದ ಉತ್ತಮ ಲೋಕವನ್ನು ಸೇರದೆ ಪ್ರಾಜ್ಞರಾದ ಯೋಗಿಗಳ ಕುಲದಲ್ಲಿ ಹುಟ್ಟುತ್ತಾನೆ. ಲೋಕದಲ್ಲಿ ಈ ರೀತಿಯಾದ ಯೋಗಭ್ರಷ್ಟನ ಜನ್ಮವು ಶುಕವಾಮದೇವ ಜಡಭರತಾದಿಗಳ ಜನ್ಮದಂತೆ ಅತಿ ದುರ್ಲಭವಾಗಿರುವುದು.

**ತತ್ರ ತಂ ಬುದ್ಧಿಸಂಯೋಗಂ, ಲಭತೇ ಪೌರ್ವ ದೈಹಿಕಮ್ ।**
**ಯತತೇ ಚ ತತೋ ಭೂಯಃ, ಸಂಸಿದ್ಧೌ ಕುರುನಂದನ ॥೪೩॥**

ಎಲೈ ಅರ್ಜುನಾ! ಆ ಯೋಗಭ್ರಷ್ಟನು ಹಿಂದೆ ಹೇಳಿದ ಎರಡು ಪ್ರಕಾರವಾದ ಜನ್ಮಗಳಲ್ಲಿ ಪೂರ್ವದೇಹದಲ್ಲಿ ಪ್ರಾರಂಭಿಸಿರುವ ಶ್ರವಣಾದಿ ಜ್ಞಾನಸಾಧನಗಳನ್ನು ಪಡೆದುಕೊಂಡು, ಅನಂತರ ಮೋಕ್ಷಕ್ಕೋಸುಗ ಇನ್ನೂ ಅಧಿಕವಾದ ಪ್ರಯತ್ನವನ್ನು ಮಾಡುವನು.

**ಪೂರ್ವಾಭ್ಯಾಸೇನ ತೇನೈವ, ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ, ಶಬ್ದಬ್ರಹ್ಮಾತಿ ವರ್ತತೇ ॥೪೪॥**

ಆ ಯೋಗಭ್ರಷ್ಟನು ಪ್ರಯತ್ನವನ್ನು ಮಾಡದಿದ್ದರೂ ಹಿಂದಿನ ಅಭ್ಯಾಸವೇ ಅವನನ್ನು ಯೋಗದಲ್ಲಿ ಪ್ರವೃತ್ತಿ ಉಂಟುಮಾಡುವುದು. ಆ ಕಾರಣದಿಂದ ಪ್ರತ್ಯಗಭಿನ್ನಬ್ರಹ್ಮದ ಜಿಜ್ಞಾಸುವೂ. ವೇದೋಕ್ತ ಕರ್ಮಾನುಷ್ಠಾನಗಳ

ಫಲವನ್ನೂ ಗಣನೆಗೆ ತಾರದಿರುವನು. ಹೀಗಿರುವಲ್ಲಿ ಪರಮಾರ್ಥಸಿದ್ಧಿಗಾಗಿ ಜನ್ಮಜನ್ಮಾಂತರಗಳಿಂದ ಯೋಗನಿಷ್ಠೆಯನ್ನು ಸಂಪಾದಿಸಿರುವ ಯೋಗ ಭ್ರಷ್ಟನು ವೇದಪ್ರಣೀತ ಕಾಮ್ಯಕರ್ಮಗಳ ಫಲವಂ ಬಯಸುವನೇ ? ಇಲ್ಲ ವೆಂದರ್ಥ. (ಕರ್ಮಾಧಿಕಾರವಂಬಿಟ್ಟು ಜ್ಞಾನಸಾಧನಗಳನ್ನೇ ಅವಲಂಬಿ ಸುವನೆಂಬ ಅಭಿಪ್ರಾಯವು.)

**ಪ್ರಯತ್ನಾದ್ಯತಮಾನಸ್ತು, ಯೋಗೀ ಸಂಶುದ್ಧ ಕಿಲ್ಬಿಷಃ ।**
**ಅನೇಕಜನ್ಮ ಸಂಸಿದ್ಧ, ಸ್ತತೋ ಯಾತಿ ಪರಾಂ ಗತಿಮ್ ॥೪೫॥**

ಈರೀತಿಯಾಗಿ ಉತ್ತರೋತ್ತರ ಅಧಿಕ ಪ್ರಯತ್ನವನ್ನು ಮಾಡುವ ಯೋಗಿಯು ಪಾಪದಿಂದ ಮುಕ್ತನಾಗಿ, ಅನೇಕ ಜನ್ಮಗಳಲ್ಲಿ ಮಾಡಿದ ಧ್ಯಾನ ಜಪ ತಪಾದಿ ಪುಣ್ಯವಿಶೇಷದಿಂದ ಲಭಿಸಿದ ಈ ಅಂತಿಮ ಜನ್ಮದಲ್ಲಿ ಯೋಗ ಸಂಸಿದ್ಧನಾಗಿ, ಆ ನಂತರ ಪರಮಗತಿಯೆಂಬ ಮೋಕ್ಷವನ್ನು ಹೊಂದುವನು.

**ತಪಸ್ವಿಭ್ಯೋಽಧಿಕೋ ಯೋಗೀ, ಜ್ಞಾನಿಭ್ಯೋಽಪಿ ಮತೋಽಧಿಕಃ।**
**ಕರ್ಮಿಭ್ಯಶ್ಚಾಧಿಕೋ ಯೋಗೀ, ತಸ್ಮಾದ್ಯೋಗೀ ಭವಾರ್ಜುನ ॥**

ತತ್ವಜ್ಞನಾದ ಯೋಗಿಯು ಕಾಮ್ಯಭಾವನೆಯಿಂದ ಮಾಡುವ (a)ಕೃಚ್ಛ್ರ. (b) ಚಾಂದ್ರಾಯಣಾದಿಗಳನ್ನು ಮಾಡುವವರಿಗಿಂತ ಶ್ರೇಷ್ಠನು; ಶಾಸ್ತ್ರಜ್ಞಾನವುಳ್ಳವರಿಗಿಂತ ಯೋಗಿಯು ಶ್ರೇಷ್ಠನು ; ಇನ್ನು (c) ಇಷ್ಟಾ (d) ಪೂರ್ತಾದಿ ಕರ್ಮಾನುಷ್ಠಾನ ಮಾಡುವವರಿಗಿಂತಲೂ ಯೋಗಿಯು ಶ್ರೇಷ್ಠನಾಗಿರುವನು. ಆದುದರಿಂದ ಅರ್ಜುನಾ! ನೀನೂ ಯೋಗಿಯಾಗು.

**ಯೋಗಿನಾಮಪಿ ಸರ್ವೇಷಾಂ, ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ, ಸ ಮೇ ಯುಕ್ತತಮೋ ಮತಃ॥**

---

(a) ಒಂದು ದಿವಸ ಹಗಲು ಭೋಜನ ಒಪ್ಪತ್ತುಮಾತ್ರ. ಒಂದು ದಿನರಾತ್ರಿ ಒಂದು ಸಲ. ಒಂದು ದಿನ ಅಯಾಚಿತವಾಗಿ ದೊರೆತರೆ ಮಾತ್ರ ಒಂದು ಸಲ. ಇನ್ನೊಂದು ದಿನ ಉಪವಾಸ. ಹೀಗೆ ಮೂರಾವರ್ತಿ, ಅಂತು 12 ದಿವಸ ಒಟ್ಟು. b) ಪೂರ್ಣಮಾದಿಂದ ಅಮಾವಾಸ್ಯೆವರೆಗೆ15ಗ್ರಾಸದಿಂದ ಪ್ರಾರಂಭಿಸಿ ಒಂದೊಂದು ಗ್ರಾಸ ಕಡಿಮೆಮಾಡಿ ಅಮಾವಾಸ್ಯೆ ದಿನ ಉಪವಾಸ. ಪುನಃ ಪಾಡ್ಯಮಿಯಿಂದ ಒಂದುಗ್ರಾಸದಿಂದ ಪ್ರಾರಂಭಿಸಿ ಪೂರ್ಣಮಾದಿವಸ 15 ಗ್ರಾಸದವರೆಗೆ ಹೆಚ್ಚಿಸು ವುದು. (c) ಯಜ್ಞಾದಿಗಳು (d) ಕೊಳ ಕೆರೆ ದೇವಸ್ಥಾನ ವಗೈರೆ ನಿರ್ಮಾಣ.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಅಭ್ಯಾಸಯೋಗೋನಾಮ ಷಷ್ಠೋಽಧ್ಯಾಯಃ

ಎಲ್ಲಾ ಯೋಗಿಗಳಲ್ಲಿಯೂ ಅತ್ಯಂತ ಶ್ರದ್ಧಾವಂತನಾಗಿ, ನನ್ನಲ್ಲೇ ಚಿತ್ತವುಳ್ಳವನಾಗಿ ಯಾವನು ನನ್ನನ್ನು ಅಭೇದ ಭಾವದಿಂದ ಭಜಿಸುವನೋ ಅವನು ಪರಮ ಶ್ರೇಷ್ಠನೆಂದು ನನ್ನ ಅಭಿಮತ.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಅಭ್ಯಾಸಯೋಗವೆಂಬ
ಆರನೆಯ ಅಧ್ಯಾಯ ಸಂಪೂರ್ಣವು.



# ಅಥ ಜ್ಞಾನವಿಜ್ಞಾನಯೋಗೋನಾಮ ಸಪ್ತಮೋಽಧ್ಯಾಯಃ

## ॥ ದ್ವಿತೀಯ ಷಟ್ಕಮ್ ॥

### (ಉಪಾಸನಾಕಾಂಡಂ--ತತ್ಪದಾರ್ಥ ನಿರೂಪಣಮ್)

ಶ್ರೀ ಭಗವಾನುವಾಚ

ಮಯ್ಯಾಸಕ್ತಮನಾಃ ಪಾರ್ಥ, ಯೋಗಂ ಯುಂಜನ್ ಮದಾಶ್ರಯಃ।
ಅಸಂಶಯಂ ಸಮಗ್ರಂ ಮಾಂ, ಯಥಾ ಜ್ಞಾಸ್ಯಸಿ ತಚ್ಛೃಣು ॥೧॥

ಶ್ರೀ ಭಗವಂತನು ಅರ್ಜುನನನ್ನು ಕುರಿತು ಇಂತೆಂದನು :- ಎಲೈ ಪಾರ್ಥನೇ ! ನನ್ನಲ್ಲಿಯೇ ಆಸಕ್ತ ಚಿತ್ತವುಳ್ಳವನಾಗಿ ನನ್ನನ್ನೇ ಆಶ್ರಯಿಸಿ ಯೋಗಾಭ್ಯಾಸವನ್ನು ಮಾಡುವ ನೀನು ಸರ್ವತ್ರ ಪರಿಪೂರ್ಣವಾದ ನನ್ನ ಸ್ವರೂಪವನ್ನು ನಿಸ್ಸಂಶಯವಾಗಿ ಹೇಗೆ ತಿಳಿದುಕೊಳ್ಳುವಿಯೋ ಅದರ ವಿಧಾನವನ್ನು ಹೇಳುವೆನು, ಕೇಳು.

ಜ್ಞಾನಂ ತೇಽಹಂ ಸವಿಜ್ಞಾನ, ಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್, ಜ್ಞಾತವ್ಯಮವಶಿಷ್ಯತೇ ॥

ಈ ಲೋಕದಲ್ಲಿ ಯಾವುದನ್ನು ತಿಳಿದಮೇಲೆ ಪುನಃ ತಿಳಿಯಬೇಕಾದುದು ಉಳಿದಿರುವುದಿಲ್ಲವೋ, ಅಂತಹ ವಿಜ್ಞಾನ (x) ಸಹಿತವಾದ ಜ್ಞಾನದ ಸ್ವರೂಪವನ್ನು ನಿಶ್ಶೇಷವಾಗಿ ನಾನು ನಿನಗೆ ಹೇಳುವೆನು.

**ಮನುಷ್ಯಾಣಾಂ ಸಹಸ್ರೇಷು, ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ, ಕಶ್ಚಿನ್ಮಾಂ, ವೇತ್ತಿ ತತ್ತ್ವತಃ ॥೩॥**

ಅನೇಕ ಸಹಸ್ರ ಮನುಷ್ಯರಲ್ಲಿ ಯಾರೋ ಒಬ್ಬನು ಜ್ಞಾನಸಿದ್ಧಿಗಾಗಿ ಪ್ರಯತ್ನಿಸುತ್ತಾನೆ. ಹೀಗೆ ಯತ್ನಮಾಡುವ ಅನೇಕ ಸಾವಿರ ಸಾಧಕರ ಮಧ್ಯದಲ್ಲಿ ನನ್ನ ಸ್ವರೂಪವನ್ನು ಯಥಾರ್ಥವಾಗಿ ತಿಳಿಯುವವನು ಯಾರೋ ಒಬ್ಬನು.

**ಭೂಮಿರಾಪೋಽನಲೋ ವಾಯುಃ, ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥೪॥**

ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರ ಎಂಬುದಾಗಿ ಪರಮೇಶ್ವರನಾದ ನನ್ನ ಈ ಪ್ರಕೃತಿಯು ಎಂಟು ಬಗೆಯಾಗಿದೆ. ಸರ್ವಜಗತ್ತಿಗೂ ಇವೇ ಮೂಲಕಾರಣ ತತ್ವಗಳು. (ಸಾಂಖ್ಯರು ಇದನ್ನೇ ಪಂಚತನ್ಮಾತ್ರೆಗಳೂ, ಅಹಂಕಾರ ತತ್ವ, ಮಹತ್ತತ್ವ ಮತ್ತು ಅವ್ಯಕ್ತ ಎಂದು ಎಂಟು ಬಗೆಯ ಪ್ರಕೃತಿಗಳನ್ನು ಗಣನೆಮಾಡಿದ್ದಾರೆ.)

**ಅಪರೇಯಮಿತಸ್ತ್ವನ್ಯಾಂ, ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ, ಯಯೇದಂ ಧಾರ್ಯತೇ ಜಗತ್ ॥**

ಎಲೈ ಮಹಾಬಾಹುವಾದ ಅರ್ಜುನನೇ ! ಈ ಎಂಟು ಪ್ರಕಾರದ ಪ್ರಕೃತಿಯು ಅಪರಾ ಪ್ರಕೃತಿ ಎನಿಸುವುದು. ಇದಕ್ಕಿಂತಲೂ ಉತ್ಕೃಷ್ಟವಾಗಿರುವ ಜೀವಭೂತವಾದ ನನ್ನ ಪ್ರಕೃತಿಯನ್ನು ಪರಾಪ್ರಕೃತಿ ಎಂದು ತಿಳಿ. ಈ ಪ್ರಕೃತಿಯೇ ಸರ್ವ ಜಗತ್ತನ್ನು ಧಾರಣೆಮಾಡಿರುವುದು.

ಅಪರಾ ಪ್ರಕೃತಿಯು ಜಡವೂ, ಜ್ಞೇಯವೂ, ಜೀವನಿಗೆ ಬಂಧನವುಂಟುಮಾಡತಕ್ಕದ್ದಾಗಿಯೂ ಇರುವುದು. ಆದ್ದರಿಂದ ಇದು ಪರಾಪ್ರಕೃತಿಗಿಂತ ನಿಕೃಷ್ಟವಾಗಿದೆ. ಇದನ್ನೇ ಅಧ್ಯಾಯ 13, ಶ್ಲೋಕ 5–6ರಲ್ಲಿ ಕ್ಷೇತ್ರವೆಂದು ಹೇಳಿದೆ.

---

(x) ಅನುಭವಜ್ಞಾನ ಅಥವಾ ಅಪರೋಕ್ಷಜ್ಞಾನ.

ಪರಾಪ್ರಕೃತಿಯು ಚೇತನಾತ್ಮಕವೂ, ಜ್ಞಾತೃವೂ, ಕ್ಷೇತ್ರಜ್ಞರೂಪವೂ, ವಿಶುದ್ಧವೂ ಆಗಿದೆ. ಪರಾ ಎಂದರೆ ಸರ್ವೋತ್ಕೃಷ್ಟವಾದುದು ಎಂದರ್ಥ.

**ಏತದ್ಯೋನೀನಿ ಭೂತಾನಿ, ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ, ಪ್ರಭವಃ ಪ್ರಲಯಸ್ತಥಾ ॥೬॥**

ಸಮಸ್ತ ಭೂತಗಳೂ ಪೂರ್ವೋಕ್ತ ಪರಾ, ಅಪರಾ ಪ್ರಕೃತಿಗಳಿಂದಲೇ ಉತ್ಪನ್ನವಾಗಿವೆಯೆಂದು ನಿಶ್ಚಯಿಸು. ನಾನು ಈ ಸಂಪೂರ್ಣ ಜಗತ್ತಿನ ಉತ್ಪತ್ತಿಗೂ, ಪ್ರಳಯಕ್ಕೂ ಕಾರಣನಾಗಿರುವೆನು.

ಜಗತ್ತಿನ ಉತ್ಪತ್ತಿ ಪ್ರಳಯಾದಿ ಕಾರ್ಯಗಳಲ್ಲಿ ನಿಮಿತ್ತ ಕಾರಣನೂ ಮತ್ತು ಉಪಾದಾನ ಕಾರಣವೂ ನಾನೇ. ಆದ್ದರಿಂದ ಜಗತ್ತಿಗೆ ನಾನು ಅಭಿನ್ನನಿಮಿತ್ತ ಉಪಾದಾನ ಕಾರಣನಾಗಿರುವೆನು.

**ಮತ್ತಃ ಪರತರಂ ನಾನ್ಯತ್, ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ, ಸೂತ್ರೇ ಮಣಿಗಣಾ ಇವ ॥೭॥**

ಎಲೈ ಧನಂಜಯನೇ ! ನನಗಿಂತಲೂ ಶ್ರೇಷ್ಠವಾದ ವಸ್ತುವು ಈ ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ. ಸೂತ್ರದಲ್ಲಿ ಮಣಿಗಳು ಪೋಣಿಸಲ್ಪಟ್ಟಿರುವಂತೆ (ಬಂಗಾರದ ಸೂತ್ರದಲ್ಲಿ ಕೆತ್ತಲ್ಪಟ್ಟ ಮಣಿಗಣದಂತೆ) ಈ ಸಮಸ್ತ ಜಗತ್ತು ನನ್ನಲ್ಲಿಯೇ ಪೋಣಿಸಲ್ಪಟ್ಟಿರುವುದು.

**ರಸೋಽಹಮಪ್ಸು ಕೌಂತೇಯ, ಪ್ರಭಾಽಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು, ಶಬ್ದಃ ಖೇ ಪೌರುಷಂ ನೃಷು ॥೮॥**

ಎಲೈ ಅರ್ಜುನನೇ ! ನಾನು ಜಲದಲ್ಲಿ ರಸವಾಗಿಯೂ, ಚಂದ್ರಸೂರ್ಯರಲ್ಲಿ ಪ್ರಭೆಯಾಗಿಯೂ, ಸರ್ವವೇದಗಳಲ್ಲಿ ಪ್ರಣವ (ಓಂಕಾರ) ವಾಗಿಯೂ, ಆಕಾಶದಲ್ಲಿ ಶಬ್ದವೂ, ಪುರುಷರಲ್ಲಿ ಪೌರುಷವಾಗಿಯೂ ಇರುವೆನು.

**ಪುಣ್ಯೋ ಗಂಧಃ ಪೃಥಿವ್ಯಾಂ ಚ, ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು, ತಪಶ್ಚಾಸ್ಮಿ ತಪಸ್ವಿಷು ॥೯॥**

ಭೂಮಿಯಲ್ಲಿ ಪುಣ್ಯಗಂಧವೂ, ಅಗ್ನಿಯಲ್ಲಿ ತೇಜಸ್ಸೂ, ಸರ್ವ ಭೂತಗಳಲ್ಲಿ ಜೀವನವೂ (ಅಂದರೆ ಪ್ರಾಣಧಾರಣೆಯೂ) ಮತ್ತು ತಪಸ್ವಿಗಳಲ್ಲಿರುವ ತಪವೂ ನಾನಾಗಿರುವೆನು.

**ಬೀಜಂ ಮಾಂ ಸರ್ವಭೂತಾನಾಂ, ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ, ತೇಜಸ್ತೇಜಸ್ವಿನಾಮಹಮ್ ॥೧೦॥**

ಎಲೈ ಪಾರ್ಥನೇ ! ಸರ್ವ ಭೂತಗಳ ಉತ್ಪತ್ತಿಗೆ ಕಾರಣರೂಪವಾದ ಅನಾದಿ ಬೀಜವು ನಾನೆಂಬುದಾಗಿ ತಿಳಿಯುವನಾಗು. ಮತ್ತು ಬುದ್ಧಿವಂತರಲ್ಲಿ ಬುದ್ಧಿಯೂ, ತೇಜಸ್ವಿಗಳಲ್ಲಿರುವ ತೇಜಸ್ಸೂ ನಾನೇ ಆಗಿರುವೆನು.

**ಬಲಂ ಬಲವತಾಂ ಚಾಹಂ, ಕಾಮರಾಗ ವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು, ಕಾಮೋಽಸ್ಮಿ ಭರತರ್ಷಭ ॥೧೧॥**

ಎಲೈ ಭರತಶ್ರೇಷ್ಠನೇ ! ಬಲಶಾಲಿಗಳಲ್ಲಿ ಕಾಮರಾಗಗಳಿಲ್ಲದ ಯಾವ ಬಲವುಂಟೋ ಆ ಬಲವು ನಾನಾಗಿರುವೆನು. ಪ್ರಾಣಿಗಳಲ್ಲಿ ಧರ್ಮವಿರುದ್ಧವಲ್ಲದ ಕಾಮವು ನಾನಾಗಿರುವೆನು.

**ಯೇ ಚೈವ ಸಾತ್ವಿಕಾ ಭಾವಾ, ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ ವಿದ್ಧಿ, ನ ತ್ವಹಂ ತೇಷು ತೇ ಮಯಿ ॥೧೨॥**

ಇದಲ್ಲದೆ ಇನ್ನೂ ಯಾವ ಯಾವ ಸಾತ್ವಿಕ, ರಾಜಸ, ತಾಮಸಗಳೆಂಬ ಭಾವಪದಾರ್ಥಗಳಿರುವುವೋ ಅವುಗಳೆಲ್ಲವೂ ನನ್ನಿಂದಲೇ ಉತ್ಪನ್ನವಾಗಿರುವವೆಂಬುದಾಗಿ ತಿಳಿಯುವವನಾಗು. ಆದರೆ ಅವುಗಳೆಲ್ಲವೂ ಪರಮೇಶ್ವರನಾದ ನನ್ನಲ್ಲಿ ಇರುವುದೇ ವಿನಹ ನಾನು ಅವುಗಳಲ್ಲಿ ಇರುವವನಲ್ಲ. ಅಂದರೆ, ಅವೆಲ್ಲಕ್ಕೂ ನಾನು ಅಧಿಷ್ಠಾನನೇ ಹೊರತು ನನಗೆ ಅವು ಅಧಿಷ್ಠಾನಗಳಲ್ಲ.

**ತ್ರಿಭಿರ್ಗುಣಮಯೈರ್ಭಾವೈ, ರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ, ಮಾಮೇಭ್ಯಃ ಪರಮವ್ಯಯಮ್ ॥೧೩॥**

ಹಿಂದೆ ಹೇಳಿದ ಗುಣಮಯವಾದ ಮೂರು ಪ್ರಕಾರದ ಭಾವಗಳು ಈ ಸಮಸ್ತ ಜಗತ್ತನ್ನು ಮೋಹಪಡಿಸುವುವು. ಆದಕಾರಣ ತ್ರಿಗುಣಮಯವಾದ ಭಾವಪದಾರ್ಥಗಳಿಗಿಂತ ಪರನಾಗಿಯೂ (ಶ್ರೇಷ್ಠನಾಗಿಯೂ) ನಾಶರಹಿತನಾಗಿಯೂ ಇರುವ ನನ್ನನ್ನು ಈ ಲೋಕವು ತಿಳಿಯದೆ ಇರುವುದು.

**ದೈವೀ ಹ್ಯೇಷಾ ಗುಣಮಯೀ, ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ, ಮಾಯಾಮೇತಾಂ ತರಂತಿ ತೇ ॥೧೪॥**

ಏಕೆಂದರೆ, ಅಲೌಕಿಕ ಶಕ್ತಿಯುಳ್ಳ ತ್ರಿಗುಣಾತ್ಮಕವಾದ ಈ ನನ್ನ ಮಾಯೆಯು ಜಯಿಸಲು ಅಶಕ್ಯವಾದುದು. ಆದರೆ ಯಾರು ಪರಮೇಶ್ವರ

ನಾದ ನನ್ನನ್ನೇ ಶರಣು ಹೊಂದುವರೋ ಅವರು ಮಾತ್ರ ಈ ನನ್ನ ಮಾಯೆಯನ್ನು (ನನ್ನ ಕೃಪೆಯಿಂದಲೇ) ದಾಟುವರು.

**ನ ಮಾಂ ದುಷ್ಕೃತಿನೋ ಮೂಢಾಃ, ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ, ಆಸುರಂ ಭಾವಮಾಶ್ರಿತಾಃ ॥೧೫॥**

ಪಾಪಕರ್ಮಗಳಲ್ಲೇ ಆಸಕ್ತರಾಗಿರುವ ಪಾಪಾತ್ಮರೂ, ಕರ್ತವ್ಯ-ಅಕರ್ತವ್ಯಗಳ ವಿವೇಕವಿಲ್ಲದ ಮೂಢರೂ, ದಂಭ ದರ್ಪಾದಿ ಆಸುರೀಸ್ವಭಾವವನ್ನು ಆಶ್ರಯಿಸಿದವರೂ, ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರಾದ ಸರ್ವಮನುಷ್ಯರಲ್ಲಿ ಅಧಮರೂ ಆಗಿರುವವರು ನನ್ನನ್ನು ಭಜಿಸುವುದಿಲ್ಲ.

**ಚತುರ್ವಿಧಾ ಭಜಂತೇ ಮಾಂ, ಜನಾಃ ಸುಕೃತಿ ನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ, ಜ್ಞಾನೀ ಚ ಭರತರ್ಷಭ ॥೧೬॥**

ಎಲೈ ಅರ್ಜುನಾ ! ಸುಕೃತಿಗಳಾದ ( ಪುಣ್ಯಶೀಲರಾದ ) ನಾಲ್ಕು ಬಗೆಯ ಜನಗಳು ನನ್ನನ್ನು ಭಜಿಸುತ್ತಾರೆ. ಅವರು ಯಾರ್ಯಾರೆಂದರೆ :- 1) ಆರ್ತಭಕ್ತನು (ದುಃಖಿ) 2) ಜಿಜ್ಞಾಸು (ಬ್ರಹ್ಮಸ್ವರೂಪವನ್ನು ತಿಳಿಯುವ ಉತ್ಕಟೇಚ್ಛೆಯುಳ್ಳ ವಿಚಾರಪರನು) 3) ಅರ್ಥಾರ್ಥೀ (ಭೋಗವಸ್ತುಗಳನ್ನು ಕೋರುವವನು) ಮತ್ತು ಜ್ಞಾನಿ (ನನ್ನಸ್ವರೂಪವನ್ನು ಪಡೆದವನು).

ಉದಾ :- 1) ಆರ್ತಭಕ್ತರು : ದ್ರೌಪದಿಯು ತನ್ನ ವಸ್ತ್ರಾಪಹರಣ ಕಾಲದಲ್ಲಿ ಕೃಷ್ಣನನ್ನು ಸ್ಮರಿಸಿದುದು; ಮತ್ತು ಮೊಸಳೆಯಿಂದ ಪೀಡಿಸಲ್ಪಟ್ಟ ಗಜೇಂದ್ರನು ವೈಕುಂಠಾಧಿಪತಿಯನ್ನು ಸ್ಮರಿಸಿದುದರಿಂದ ಆರ್ತ ಭಕ್ತನೆನಿಸಿದನು. 2) ಜಿಜ್ಞಾಸು ಭಕ್ತರು—ಉದ್ಧವ. ೩) ಅರ್ಥಾರ್ಥೀ ಭಕ್ತರು— ಸುಗ್ರೀವ, ವಿಭೀಷಣ, ಧ್ರುವಾದಿಗಳು. 4) ಜ್ಞಾನೀ— ಪ್ರಹ್ಲಾದ, ಶ್ರೀ ಶುಕಮುನಿ, ವಾಮದೇವ, ಜಡಭರತ, ದತ್ತಾತ್ರೇಯಾದಿಗಳು.

**ತೇಷಾಂ ಜ್ಞಾನೀ ನಿತ್ಯಯುಕ್ತ, ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥ, ಮಹಂ ಸ ಚ ಮಮ ಪ್ರಿಯಃ ॥**

ಈ ನಾಲ್ವರ ಮಧ್ಯದಲ್ಲಿ ನಿತ್ಯಯುಕ್ತನಾದ ಜ್ಞಾನಿಯು ಅಖಂಡ ಅದ್ವಿತೀಯ ಸ್ವರೂಪನಾದ ನನ್ನಲ್ಲಿಯೇ ಅಭೇದ ಚಿಂತನೆ ಎಂಬ ಭಕ್ತಿಯನ್ನು

ಮಾಡುವನಾದುದರಿಂದ ಶ್ರೇಷ್ಠನಾಗಿರುವನು. ಜ್ಞಾನಿಗೆ ನಾನು ಅತ್ಯಂತ ಪ್ರಿಯನು. ಹಾಗೆಯೇ ನನಗೆ ಜ್ಞಾನಿಯೂ ಪ್ರಿಯನಾಗಿರುವನು.

**ಉದಾರಾಃ ಸರ್ವ ಏವೈತೇ, ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ, ಮಾಮೇವಾನುತ್ತಮಾಂ ಗತಿಮ್ ॥**

ನನ್ನ ಭಕ್ತರೆಲ್ಲರೂ ಉದಾರಿಗಳೇ ಸರಿ. ಆದರೆ ಜ್ಞಾನಿಯಾದರೋ ನನ್ನ ಸ್ವರೂಪವೇ ಆಗಿರುವನು ಎಂಬುದು ನನ್ನ ಮತ. ಜ್ಞಾನಿಯು ಸರ್ವದಾ ನನ್ನಲ್ಲೇ ಸಮಾಹಿತ ಚಿತ್ತ ಉಳ್ಳವನಾಗಿ ಅಭೇದಭಾವದಿಂದ ಚಿಂತಿಸುತ್ತಾ ಇದ್ದು ಸರ್ವೋತ್ಕೃಷ್ಟಗತಿರೂಪವಾದ ನನ್ನನ್ನೇ ಹೊಂದುವನು.

**ಬಹೂನಾಂ ಜನ್ಮನಾಮಂತೇ, ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ, ಸ ಮಹಾತ್ಮಾ ಸುದುರ್ಲಭಃ ॥೧೯॥**

ಅನೇಕ ಜನ್ಮಗಳ ಕೊನೆಯಲ್ಲಿ ಜ್ಞಾನಿಯಾಗಿ "ಈ ಸಮಸ್ತ ಜಗತ್ತೂ ವಾಸುದೇವನೇ" ಎಂಬುದಾಗಿ ಭಾವಿಸಿ ನನ್ನನ್ನು ಅಭೇದಭಾವದಿಂದ ಭಜಿಸುತ್ತಾನೆ. ಅವನೇ ಮಹಾತ್ಮನು. ಅಂತಹ ಮಹಾತ್ಮನು ಅತಿ ದುರ್ಲಭನು.

**ಕಾಮೈಸ್ತೈಸ್ತೈರ್ಹೃತಜ್ಞಾನಾಃ, ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ, ಪ್ರಕೃತ್ಯಾ ನಿಯತಾಃ ಸ್ವಯಾ ॥೨೦॥**

ಸಕಾಮರಾದವರು ಭಿನ್ನ ಭಿನ್ನವಾದ ಯಜ್ಞಾದಿ ಕರ್ಮಫಲಗಳಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರಾಗಿ ಆಯಾಯ ನಿಯಮಗಳನ್ನನುಸರಿಸಿ ತಮ್ಮ ತಮ್ಮ ಪೂರ್ವ ಸಂಸ್ಕಾರ ವಿಶೇಷದಿಂದ ಪ್ರೇರಿತರಾಗಿ,ನನ್ನನ್ನು ಬಿಟ್ಟು, ಇಂದ್ರಾದಿ ಅನ್ಯ ದೇವತೆಗಳನ್ನು ಭಜಿಸುವರು

**ಯೋ ಯೋ ಯಾಂ ಯಾಂ ತನುಂ ಭಕ್ತಃ,ಶ್ರದ್ಧಯಾರ್ಚಿತುಮಿಚ್ಛತಿ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ, ತಾಮೇವ ವಿದಧಾಮ್ಯಹಮ್ ॥೨೧॥**

ಯಾವಯಾವ ಭಕ್ತನು ನನ್ನ ನಿಜರೂಪವನ್ನು ಅರಿಯದಿದ್ದರೂ ನನ್ನ ಸಂಬಂಧದವರಾದ ಯಾವಯಾವ ದೇವತಾಮೂರ್ತಿಗಳನ್ನು ಪೂಜಿಸಲು ಇಷ್ಟಪಡುವನೋ, ಆಯಾಯ ದೇವತಾಭಜಕರಿಗೆ ಆಯಾಯ ದೇವತಾ ಸಂಬಂಧವಾದ ಶ್ರದ್ಧೆಯನ್ನೇ ಅಂತರ್ಯಾಮಿಯಾದ ನಾನು ಸ್ಥಿರಪಡಿಸುತ್ತೇನೆ.

**ಸ ತಯಾ ಶ್ರದ್ಧಯಾ ಯುಕ್ತ, ಸ್ತಸ್ಯಾರಾಧನ ಮೀಹತೇ ।**
**ಲಭತೇ ಚ ತತಃ ಕಾಮಾನ್, ಮಯೈವ ವಿಹಿತಾನ್ ಹಿ ತಾನ್ ॥೨೨॥**

ಆ ದೇವತಾಭಕ್ತನು ಆ ದೇವತಾ ವಿಷಯವಾದ ಶ್ರದ್ಧೆಯಿಂದ ಕೂಡಿ ಆ ದೇವತೆಯನ್ನು ಆರಾಧಿಸುತ್ತಾನೆ. ಅಯಾ ದೇವತಾ ರೂಪದಿಂದಿರುವ ನನ್ನಿಂದ ಕೊಡಲ್ಪಟ್ಟ ಭೋಗಗಳನ್ನು ಹೊಂದುತ್ತಾನೆ.

ಅಂತವತ್ತು ಫಲಂ ತೇಷಾಂ, ತದ್ಭವತ್ಯಲ್ಪ ಮೇಧಸಾಮ್ ।
ದೇವಾನ್ದೇವಯಜೋ ಯಾಂತಿ, ಮದ್ಭಕ್ತಾ ಯಾಂತಿ ಮಾಮಪಿ ॥

ಅಲ್ಪಬುದ್ಧಿಯುಳ್ಳವರಾದ ಆ ದೇವತಾ ಭಕ್ತರುಗಳು ಹೊಂದುವ ಫಲವು ನಾಶವುಳ್ಳದ್ದಾಗಿರುವುದು. ಇಂದ್ರಾದಿ ದೇವತೆಗಳನ್ನು ಆರಾಧಿಸುವವರು ಇಂದ್ರಾದಿ ದೇವತೆಗಳನ್ನೇ ಹೊಂದುವರು. ನನ್ನ ಭಕ್ತರಾದವರು ನನ್ನನ್ನೇ ಹೊಂದುವರು.

ಅವ್ಯಕ್ತಂ ವ್ಯಕ್ತಿಮಾಪನ್ನಂ, ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ, ಮಮಾವ್ಯಯಮನುತ್ತಮಮ್ ॥೨೪॥

ಅಲ್ಪಜ್ಞರಾದ ಜನಗಳು ನನ್ನ ಸರ್ವೋತ್ಕೃಷ್ಟವಾದ ನಿರಾಕಾರಸ್ವರೂಪವನ್ನೂ ಮತ್ತು ಸರ್ವೇಶ್ವರತ್ವಾದಿ ಮಹಿಮಾನ್ವಿತ ಸ್ವರೂಪವನ್ನೂ ಅರಿಯದೆ ಅವ್ಯಕ್ತ ರೂಪನಾದ ನನ್ನನ್ನು ವ್ಯಕ್ತಿರೂಪನೆಂದು ತಿಳಿದಿರುವರು. ಹೀಗೆ ತಿಳಿಯುವುದಕ್ಕೆ ಅವರ ಅವಿಚಾರವೇ ಕಾರಣವಾಗಿರುವುದು.

ನಾಹಂ ಪ್ರಕಾಶಃ ಸರ್ವಸ್ಯ, ಯೋಗಮಾಯಾ ಸಮಾವೃತಃ ।
ಮೂಢೋಽಯಂ ನಾಭಿಜಾನಾತಿ, ಲೋಕೋ ಮಾಮಜಮವ್ಯಯಮ್ ॥೨೫॥

ಯೋಗಮಾಯೆಯಿಂದ ಆವೃತವಾಗಿರುವ ಪ್ರಯುಕ್ತ ನಾನು ಎಲ್ಲರಿಗೂ ಪ್ರತ್ಯಕ್ಷನಾಗದಿರುವೆನು. ಆದಕಾರಣ ಮೂಢಜನರು ನನ್ನನ್ನು ಜನ್ಮರಹಿತನೆಂದೂ ಅವಿನಾಶಿಯೆಂದೂ ತಿಳಿಯದಿರುತ್ತಾರೆ.

ವೇದಾಹಂ ಸಮತೀತಾನಿ, ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ, ಮಾಂ ತು ವೇದ ನ ಕಶ್ಚನ ॥೨೬॥

ಎಲೈ ಅರ್ಜುನನೇ ! ಹಿಂದೆ ಕಳೆದುಹೋದ, ಈಗ ಇರುವ, ಮತ್ತು ಮುಂದೆ ಉಂಟಾಗುವ ಸಮಸ್ತ ಪ್ರಾಣಿಗಳನ್ನೂ ನಾನು ಬಲ್ಲೆನು. ನನ್ನನ್ನು ಯಾವನೂ ಅರಿಯನು.

ಇಚ್ಛಾದ್ವೇಷಸಮುತ್ಥೇನ, ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಮ್ಮೋಹಂ, ಸರ್ಗೇ ಯಾಂತಿ ಪರಂತಪ ॥೨೭॥

ಎಲೈ ಭಾರತನೇ ! ಪರಂತಪನೇ ! ಇಚ್ಛಾದ್ವೇಷದಿಂದ ಹುಟ್ಟಿದ ಶೀತೋಷ್ಣ ಸುಖದುಃಖಾದಿ ದ್ವಂದ್ವಗಳಿಗೆ ಪರವಶರಾದ ಸರ್ವ ಪ್ರಾಣಿಗಳೂ ಸ್ಥೂಲದೇಹದ ಉತ್ಪತ್ತಿಯ ಕಾಲದಲ್ಲಿಯೇ ಸಂಮೋಹವನ್ನು ಹೊಂದುವರು. ಈ ಕಾರಣದಿಂದ ಭಜಿಸಲು ಯೋಗ್ಯವಾಗಿರುವ ನನ್ನನ್ನು ಭಜಿಸುವುದಿಲ್ಲ.

ಯೇಷಾಂ ತ್ವಂತಗತಂ ಪಾಪಂ, ಜನಾನಾಂ ಪುಣ್ಯಕರ್ಮಣಾಮ್ ।
ತೇ ದ್ವಂದ್ವಮೋಹನಿರ್ಮುಕ್ತಾ, ಭಜಂತೇ ಮಾಂ ದೃಢವ್ರತಾಃ ॥

ಪುಣ್ಯಕರ್ಮಗಳನ್ನು ಮಾಡುವ ಯಾವ ಪುಣ್ಯಪುರುಷರ ಪಾಪವು ನಷ್ಟವಾಗಿರುವುದೋ ಅವರು ಪೂರ್ವೋಕ್ತ ದ್ವಂದ್ವ ಮೋಹದಿಂದ ಬಿಡುಗಡೆಯನ್ನು ಹೊಂದಿ, ದೃಢವಾದ ವ್ರತವುಳ್ಳವರಾಗಿ ನನ್ನನ್ನು ಭಜಿಸುತ್ತಾರೆ.

ಜರಾಮರಣಮೋಕ್ಷಾಯ, ಮಾಮಾಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ, ಮಧ್ಯಾತ್ಮಂ ಕರ್ಮ ಚಾಖಿಲಮ್॥

ಯಾರು ಜರಾಮರಣಗಳಿಂದ ಬಿಡುಗಡೆ ಹೊಂದುವುದಕ್ಕಾಗಿನನ್ನನ್ನು ಆಶ್ರಯಿಸಿ ಪ್ರಯತ್ನಮಾಡುವರೋ, ಅವರು ಆ ಬ್ರಹ್ಮವನ್ನು, ಸಂಪೂರ್ಣವಾದ ಅಧ್ಯಾತ್ಮವನ್ನೂ (ಜೀವ) ಮತ್ತು ಎಲ್ಲಾ ಕರ್ಮಗಳ ಸ್ವರೂಪವನ್ನೂ ಬಲ್ಲವರಾಗುವರು.

ಸಾಧಿಭೂತಾಧಿದೈವಂ ಮಾಂ, ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣ ಕಾಲೇಽಪಿ ಚ ಮಾಂ, ತೇ ವಿದುರ್ಯುಕ್ತ ಚೇತಸಃ ॥೩೦॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನ ವಿಜ್ಞಾನಯೋಗೋನಾಮ
ಸಪ್ತಮೋಽಧ್ಯಾಯಃ.

ಯಾವ ಅಧಿಕಾರಿಗಳು ಅಧಿಭೂತ, ಅಧಿದೈವ ಮತ್ತು ಅಧಿಯಜ್ಞದಿಂದ ಕೂಡಿರುವ ನನ್ನನ್ನು ಚಿಂತಿಸುವರೋ, ಮತ್ತು ಸಂಯಮಿಗಳಾದ ಯಾವ ಅಧಿಕಾರಿಗಳು ಅಂತ್ಯಕಾಲದಲ್ಲಿಯಾದರೂ ನನ್ನ ಈ ಅಧಿಯಜ್ಞಾದಿ ಸಮಗ್ರ ರೂಪವನ್ನು ತಿಳಿಯುವರೋ ಅವರೂ ನನ್ನನ್ನೇ ತಿಳಿಯುವರು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಜ್ಞಾನವಿಜ್ಞಾನವೆಂಬ
ಏಳನೇ ಅಧ್ಯಾಯ ಸಂಪೂರ್ಣವು.



# ಅಥ ಅಕ್ಷರ ಬ್ರಹ್ಮಯೋಗೋನಾಮ ಅಷ್ಟಮೋಽಧ್ಯಾಯಃ

### ಅರ್ಜುನ ಉವಾಚ

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ, ಕಿಂ ಕರ್ಮ ಪುರುಷೋತ್ತಮ।
ಅಧಿಭೂತಂ ಚ ಕಿಂ ಪ್ರೋಕ್ತ, ಮಧಿದೈವಂ ಕಿಮುಚ್ಯತೇ ॥೧॥

ಅಧಿಯಜ್ಞಃ ಕಥಂ ಕೋಽತ್ರ, ದೇಹೇಽಸ್ಮಿನ್ ಮಧುಸೂದನ ।
ಪ್ರಯಾಣಕಾಲೇಚ ಕಥಂ, ಜ್ಞೇಯೋಽಸಿ ನಿಯತಾತ್ಮಭಿಃ ॥೨॥

ಅರ್ಜುನನಿಂತೆಂದನು :- ಹೇ ಪುರುಷೋತ್ತಮನಾದ ಮಧುಸೂದನನೇ ! ಆ ಬ್ರಹ್ಮವೆಂದರೇನು ? ಅಧ್ಯಾತ್ಮವೆಂದರೇನು ? ಕರ್ಮವೆಂದರೇನು ? ಅಧಿಭೂತವೆಂದು ಯಾವುದು ಹೇಳಲ್ಪಟ್ಟಿತು ? ಮತ್ತು ಅಧಿದೈವವೆಂದು ಹೇಳಲ್ಪಡುವುದು ಯಾವುದು ? ಈ ದೇಹದಲ್ಲಿ ಕರ್ಮಫಲವನ್ನು ಕೊಡುವ ಅಧಿಯಜ್ಞನು ಯಾರು ? ಈ ದೇಹದಲ್ಲಿ ಹೇಗೆ ಇರುತ್ತಿರುವನು ? ಈ ದೇಹವನ್ನು ಬಿಟ್ಟು ಲೋಕಾಂತರಕ್ಕೆ ಪ್ರಯಾಣಮಾಡುವ ಕಾಲದಲ್ಲಿ ಮನೋನಿಗ್ರಹಗೈದ ಯೋಗಿಗಳಿಂದ ನೀನು ತಿಳಿಯಲ್ಪಡುವ ಬಗೆ ಹೇಗೆ ? ಎಂದು ಕೇಳಲು,

### ಶ್ರೀ ಭಗವಾನುವಾಚ

ಅಕ್ಷರಂ ಬ್ರಹ್ಮ ಪರಮಂ, ಸ್ವಭಾವೋಽಧ್ಯಾತ್ಮಮುಚ್ಯತೇ ।
ಭೂತಭಾವೋದ್ಭವಕರೋ, ವಿಸರ್ಗಃ ಕರ್ಮಸಂಜ್ಞಿತಃ ॥೩॥

ಶ್ರೀ ಭಗವಂತನು ಅರ್ಜುನನ್ನು ಕುರಿತು ಇಂತೆಂದನು :- ಪೂರ್ಣವಾದ ಮತ್ತು ಅಕ್ಷಯವಾದ ವಸ್ತುವು ಯಾವುದೋ ಅದೇ ಬ್ರಹ್ಮವು. ಈ ಶರೀರದಲ್ಲಿ ಭೋಕ್ತೃವಾದ ಜೀವನೇ ಅಧ್ಯಾತ್ಮವು. ಭೂತಗಳ ಉತ್ಪತ್ತಿಗೂ ಮತ್ತು ಅಭಿವೃದ್ಧಿಗೂ ಕಾರಣವಾದ ಯಜ್ಞಾದಿಗಳು ಕರ್ಮಶಬ್ದದಿಂದ ಹೇಳಲ್ಪಡುವುವು.

ಅಧಿಭೂತಂ ಕ್ಷರೋ ಭಾವಃ, ಪುರುಷಶ್ಚಾಧಿದೈವತಮ್ ।
ಅಧಿಯಜ್ಞೋಽಹಮೇವಾತ್ರ, ದೇಹೇ ದೇಹ ಭೃತಾಂ ವರ ॥೪॥

ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೇ! ಪ್ರತಿಕ್ಷಣದಲ್ಲಿಯೂ ನಾಶಹೊಂದುತ್ತಲಿರುವ ಈ ಜಡ ಪ್ರಪಂಚವೇ ಅಧಿಭೂತವು. ಸಮಸ್ತ ದೇಹದಲ್ಲಿಯೂ ಅಂತರ್ಯಾಮಿ ರೂಪದಿಂದಿರುವ ಹಿರಣ್ಯಗರ್ಭನೇ ಅಧಿದೈವವು. ಈ ದೇಹದಲ್ಲಿ ಕರ್ಮಗಳಿಗೆ ಫಲವನ್ನು ಕೊಡತಕ್ಕ ವಾಸುದೇವನಾದ ನಾನೇ ಅಧಿಯಜ್ಞವು.

**ಅಂತಕಾಲೇ ಚ ಮಾಮೇವ, ಸ್ಮರನ್ ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ, ಯಾತಿ ನಾಸ್ತ್ಯತ್ರ ಸಂಶಯಃ ॥೫॥**

ಯಾವನು ಮರಣಕಾಲದಲ್ಲಿ ನನ್ನನ್ನೇ ಸ್ಮರಣೆಮಾಡುವನೋ ಅವನು ನನ್ನ ಸ್ವರೂಪಭೂತವಾದ ಬ್ರಹ್ಮಭಾವವನ್ನೇ ಹೊಂದುವನು. ಈ ವಿಷಯದಲ್ಲಿ ಸಂಶಯವಿಲ್ಲ.

**ಯಂ ಯಂ ವಾಪಿ ಸ್ಮರನ್ ಭಾವಂ, ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ, ಸದಾ ತದ್ಭಾವಭಾವಿತಃ ॥೬॥**

ಎಲೈ ಕುಂತೀಪುತ್ರನಾದ ಅರ್ಜುನನೇ! ಈ ಪುರುಷನು ಮರಣಕಾಲದಲ್ಲಿ ಯಾವ ಯಾವ ದೇವತೆಯನ್ನು ಸ್ಮರಣೆಗೈಯ್ಯುತ್ತಾ ಈ ದೇಹವನ್ನು ಬಿಡುವನೋ ಅವನು ಸದಾ ಆ ದೇವತಾವಿಷಯದ ಭಾವವುಳ್ಳವನಾದುದರಿಂದ ಆಯಾಯ ದೇವತಾಭಾವ (ಸ್ವರೂಪ)ವನ್ನೇ ಪಡೆದುಕೊಳ್ಳುವನು.

**ತಸ್ಮಾತ್ ಸರ್ವೇಷು ಕಾಲೇಷು, ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿ, ರ್ಮಾಮೇವೈಷ್ಯಸ್ಯಸಂಶಯಃ ॥೭॥**

ಆದಕಾರಣ ಸರ್ವಕಾಲಗಳಲ್ಲಿಯೂ ಪರಮೇಶ್ವರನಾದ ನನ್ನನ್ನು ಸ್ಮರಣೆಮಾಡುವವನಾಗು. ಮತ್ತು ನಿನ್ನ ಸ್ವಧರ್ಮವಾದ ಯುದ್ಧವನ್ನು ಮಾಡು. ಹೀಗೆ ನನ್ನಲ್ಲಿಯೇ ಸಮರ್ಪಿಸಲ್ಪಟ್ಟ ಮನೋಬುದ್ಧಿಯುಳ್ಳ ನೀನು ನಿಸ್ಸಂಶಯನಾಗಿ ನನ್ನನ್ನೇ ಹೊಂದುವೆ.

**ಅಭ್ಯಾಸಯೋಗಯುಕ್ತೇನ, ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ, ಯಾತಿ ಪಾರ್ಥಾನುಚಿಂತಯನ್ ॥೮॥**

ಎಲೈ ಅರ್ಜುನನೇ! ಅಭ್ಯಾಸಯೋಗಯುಕ್ತನಾಗಿ ವಿಷಯಗಳ ಕಡೆ ಹೋಗದಿರುವ ನಿರುದ್ಧ ಚಿತ್ತದಿಂದ ಹೀಗೆ ಸ್ಮರಣೆಮಾಡುವವನು ದಿವ್ಯವಾದ ಪರಮ ಪುರುಷನನ್ನು ಹೊಂದುವನು.

ಕವಿಂ ಪುರಾಣಮನುಶಾಸಿತಾರಂ, ಮಣೋರಣೀಯಾಂಸಮನುಸ್ಮ-
ರೇದ್ಯಃ । ಸರ್ವಸ್ಯ ಧಾತಾರಮಚಿಂತ್ಯರೂಪ, ಮಾದಿತ್ಯವರ್ಣಂ
ತಮಸಃ ಪರಸ್ತಾತ್ ॥೯॥

ಪ್ರಯಾಣಕಾಲೇ ಮನಸಾಽಚಲೇನ, ಭಕ್ತ್ಯಾಯುಕ್ತೋ ಯೋಗ-
ಬಲೇನ ಚೈವ । ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್,
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥

ಯಾವನು ಮರಣಕಾಲದಲ್ಲಿ ಭಕ್ತಿಯುಕ್ತನಾಗಿ, ನಿಶ್ಚಲವಾದ ಮನಸ್ಸುಳ್ಳವನಾಗಿ, ಯೋಗಬಲದಿಂದ ಭ್ರೂಮಧ್ಯದಲ್ಲಿ ತನ್ನ ಪ್ರಾಣವನ್ನು ಚೆನ್ನಾಗಿ ನಿಲ್ಲಿಸಿದವನಾಗಿ, ಸರ್ವಜ್ಞನಾಗಿಯೂ, ಅನಾದಿಯಾಗಿಯೂ, ಸಮಸ್ತ ಪ್ರಾಣಿಗಳ ನಿಯಾಮಕನಾಗಿಯೂ, ಸೂಕ್ಷ್ಮಕ್ಕಿಂತಲೂ ಅತಿ ಸೂಕ್ಷ್ಮನಾಗಿಯೂ, ಸಮಸ್ತ ಜಗತ್ತನ್ನು ಧಾರಣಮಾಡುವವನಾಗಿಯೂ, ಚಿಂತಿಸಲಶಕ್ಯನಾಗಿಯೂ, ಅಜ್ಞಾನ ತತ್ಕಾರ್ಯರಹಿತನಾಗಿಯೂ, ಸೂರ್ಯನಂತೆ ಜ್ಯೋತಿರ್ಮಯನಾಗಿಯೂ ಬೆಳಗುತ್ತಿರುವ ಪರಮಾತ್ಮನನ್ನು ಸ್ಮರಣೆಮಾಡುವನೋ ಅವನು ದಿವ್ಯನಾದ (ಅಪ್ರಾಕೃತನಾದ) ಪರಮ ಪುರುಷನನ್ನು ಹೊಂದುವನು.

ಯದಕ್ಷರಂ ವೇದವಿದೋ ವದಂತಿ, ವಿಶಂತಿ ಯದ್ಯತಯೋ ವೀತ-
ರಾಗಾಃ । ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ, ತತ್ತೇಪದಂ
ಸಂಗ್ರಹೇಣ ಪ್ರವಕ್ಷ್ಯೇ ॥೧೧॥

ವೇದವನ್ನು ತಿಳಿದವರು ಯಾವ ಪರಮಪದವನ್ನು ಅವಿನಾಶಿಯೆಂದು ಹೇಳುವರೋ, ವಿರಕ್ತರಾದ ಸನ್ಯಾಸಿಗಳು ಯಾವುದನ್ನು ಹೊಂದುವರೋ ಮತ್ತು ಯಾವುದನ್ನು ಹೊಂದಲು ಇಚ್ಛಿಸುವ ನೈಷ್ಠಿಕ ಬ್ರಹ್ಮಚಾರಿಗಳು ಬ್ರಹ್ಮಚರ್ಯವ್ರತವನ್ನು ಧಾರಣೆಮಾಡುವರೋ, ಅಂತಹ ಸಚ್ಚಿದಾನಂದ ಘನ ಸ್ವರೂಪವಾದ ಪರಮಪದವನ್ನು ಸಂಕ್ಷೇಪವಾಗಿ ನಿನಗೆ ಹೇಳುವೆನು.

ಸರ್ವದ್ವಾರಾಣಿ ಸಂಯಮ್ಯ, ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣ,ಮಾಸ್ಥಿತೋ ಯೋಗಧಾರಣಾಮ್॥
ಓಮಿತ್ಯೇಕಾಕ್ಷರಂ ಬ್ರಹ್ಮ, ವ್ಯಾಹರನ್ ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ ದೇಹಂ, ಸ ಯಾತಿ ಪರಮಾಂ ಗತಿಮ್ ॥

ಯಾರು ಎಲ್ಲಾ ಇಂದ್ರಿಯಗಳ ದ್ವಾರಗಳನ್ನು ಮುಚ್ಚಿ, ಮನಸ್ಸನ್ನು ಹೃದಯಸ್ಥಾನದಲ್ಲಿ ನಿಲ್ಲಿಸಿ, ಪ್ರಾಣವಾಯುವನ್ನು ಮಸ್ತಕದಲ್ಲಿ ನಿಲ್ಲಿಸಿ, ಆತ್ಮ ವಿಷಯಕವಾದ ಸಮಾಧಿಯೆಂಬ ಯೋಗಧಾರಣೆಯನ್ನು ಮಾಡಿದವನಾಗಿ, "ಓಂ" ಎಂಬ ಏಕಾಕ್ಷರವಾದ ಪ್ರಣವವನ್ನು ಉಚ್ಚರಿಸುತ್ತಾ. ಅದರ ಅರ್ಥ ವಾದ ಪರಮೇಶ್ವರನಾದ ನನ್ನನ್ನು ತನ್ನ ಆತ್ಮದೊಡನೆ ಅಭೇದದಿಂದ ಚಿಂತಿ ಸುತ್ತಾ ಈ ದೇಹವನ್ನು ಬಿಟ್ಟುಹೋಗುವನೋ ಅವನು ಪರಮ ಗತಿಯನ್ನು ಹೊಂದುವನು..

**ಅನನ್ಯಚೇತಾಃ ಸತತಂ, ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ, ನಿತ್ಯಯುಕ್ತಸ್ಯ ಯೋಗಿನಃ ॥೧೪॥**

ಎಲೈ ಪಾರ್ಥನೇ ! ಯಾವ ಪುರುಷನು ನನ್ನನ್ನು ಬಿಟ್ಟು ಶಬ್ದಾದಿ ವಿಷಯಗಳೆಂಬ ಅನ್ಯ ವಸ್ತುಗಳಕಡೆ ಹೋಗದಿರುವ ಚಿತ್ತದಿಂದ ನಿತ್ಯವೂ ನಿರಂತರವಾಗಿ ಪುರುಷೋತ್ತಮನಾದ ನನ್ನನ್ನು ಸ್ಮರಿಸುವನೋ, ಆ ನಿತ್ಯ ಯುಕ್ತನಾದ ಯೋಗಿಗೆ ನಾನು ಸುಲಭನು.

ಯಾರ ಚಿತ್ತವು ಪರಮೇಶ್ವರನನ್ನು ಬಿಟ್ಟು ಇನ್ನು ಯಾವುದೊಂದು ಪದಾರ್ಥದಲ್ಲಿಯೂ ಆಸಕ್ತವಾಗಿಲ್ಲವೋ ಅವನಿಗೆ " ಅನನ್ಯಚೇತಾ " ಎಂದು ಹೆಸರು. "ಸತತಂ" ಪದದಿಂದ ಒಂದು ಕ್ಷಣವೂ ವ್ಯರ್ಥವಾಗದೆ ತೈಲಧಾರೆ ಯಂತಿರುವ ಸ್ಮರಣೆಯನ್ನೂ, "ನಿತ್ಯಶಃ" ಪದದಿಂದ ಜೀವಿಸಿರುವವರೆವಿಗೂ ಈ ಬಗೆಯ ಸ್ಮರಣೆಯಾಗಬೇಕು ಎಂಬುದನ್ನೂ ಸೂಚಿಸಿದ್ದಾರೆ.

**ಮಾಮುಪೇತ್ಯ ಪುನರ್ಜನ್ಮ, ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ, ಸಂಸಿದ್ಧಿಂ ಪರಮಾಂ ಗತಾಃ ॥೧೫॥**

ಪರಮಶ್ರೇಷ್ಠವಾದ ನನ್ನ ಜ್ಞಾನವೆಂಬ ಸಿದ್ಧಿಯನ್ನು ಪಡೆದ ಮಹಾ ತ್ಮರು ನನ್ನನ್ನು ಸೇರಿದನಂತರ ಅನಿತ್ಯವಾದ ಮತ್ತು ಸಮಸ್ತ ದುಃಖಗಳಿಗೆ ಮನೆಯಂತಿರುವ ಪುನರ್ಜನ್ಮವನ್ನು ಪಡೆಯುವುದಿಲ್ಲ.

**ಆಬ್ರಹ್ಮಭುವನಾಲ್ಲೋಕಾಃ, ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ, ಪುನರ್ಜನ್ಮ ನ ವಿದ್ಯತೇ ॥೧೬॥**

ಎಲೈ ಕೌಂತೇಯನೇ ! ಬ್ರಹ್ಮಲೋಕದವರೆವಿಗೂ ಇರುವ ಸಮಸ್ತ ಲೋಕಗಳೂ ಪುನರಾವೃತ್ತಿಯುಳ್ಳವುಗಳು. ಆದರೆ ನನ್ನನ್ನು ಹೊಂದಿದರೆ ಮಾತ್ರ ಪುನರ್ಜನ್ಮವಿಲ್ಲ.

ಉತ್ಪತ್ತಿ ವಿನಾಶವುಳ್ಳದ್ದಕ್ಕೆ ಪುನರಾವೃತ್ತಿ ಎನ್ನುವರು.

**ಸಹಸ್ರಯುಗಪರ್ಯಂತ, ಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ, ತೇಽಹೋರಾತ್ರವಿದೋ ಜನಾಃ ॥**

ಯಾರು ಬ್ರಹ್ಮದೇವನ ಒಂದು ಸಾವಿರ ಚತುರ್ಯುಗಗಳಷ್ಟು ಕಾಲಾವಧಿಯುಳ್ಳ ದಿನವನ್ನು ತಿಳಿದಿರುವರೋ, ಹಾಗೆಯೇ ಸಾವಿರ ಚತುರ್ಯುಗಗಳಷ್ಟು ಕಾಲವನ್ನು ರಾತ್ರಿ ಎಂದು ತಿಳಿದಿರುವರೋ, ಆ ಯೋಗಿಗಳೇ ದಿನರಾತ್ರಿಗಳ ತತ್ವವನ್ನು ಬಲ್ಲವರು.

ಸತ್ಯ, ತ್ರೇತಾ, ದ್ವಾಪರ ಮತ್ತು ಕಲಿ—ಈ ನಾಲ್ಕು ಯುಗಗಳೂ ಸೇರಿ ಒಂದು ಚತುರ್ಯುಗವೆನಿಸುವುದು. ಇವುಗಳ ಕಾಲಮಾನ :-

| | |
|---|---|
| ಕೃತಯುಗ | 17 ಲಕ್ಷ 28 ಸಾವಿರ ವರ್ಷಗಳು. |
| ತ್ರೇತಾಯುಗ | 12 ಲಕ್ಷ 96 ಸಾವಿರ ವರ್ಷಗಳು. |
| ದ್ವಾಪರಯುಗ | 8 ಲಕ್ಷ 64 ಸಾವಿರ ವರ್ಷಗಳು. |
| ಕಲಿಯುಗ | 4 ಲಕ್ಷ 32 ಸಾವಿರ ವರ್ಷಗಳು. |
| ಒಂದು ಚತುರ್ಯುಗ | 43 ಲಕ್ಷ 20 ಸಾವಿರ ವರ್ಷಗಳು. |

ಇಂತಹ ಸಾವಿರ ಚತುರ್ಯುಗಗಳಾದರೆ ಚತುರ್ಮುಖಬ್ರಹ್ಮನಿಗೆ ಒಂದು ಹಗಲೂ, ಪುನಃ ಇಷ್ಟೇ ಕಾಲ ಒಂದು ರಾತ್ರಿಯೂ, ಇವೆರಡೂ ಸೇರಿ ಒಂದು ದಿನವೂ, ಇಂತಹ 360 ದಿನಗಳು 1 ವರ್ಷವೂ, ಇಂತಹ 100 ವರ್ಷಗಳು ಆದರೆ ಬ್ರಹ್ಮನ ಪೂರ್ಣಾಯುಸ್ಸು. ನಂತರ ಬ್ರಹ್ಮಪ್ರಳಯವಾಗಿ ಬ್ರಹ್ಮನ ಸಹಿತ ಬ್ರಹ್ಮಲೋಕವು ವಿಲಯವಾಗುವುದು. ಹೀಗೆ ಕಾಲಮಿತಿಯುಳ್ಳ ಬ್ರಹ್ಮಲೋಕವೂ ಅನಿತ್ಯವಾದ್ದರಿಂದ ಪುನರಾವೃತ್ತಿಯುಳ್ಳದ್ದು ಎಂಬರ್ಥ.

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ, ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ, ತತ್ರೈವಾವ್ಯಕ್ತ ಸಂಜ್ಞಕೇ ॥೧೮॥**

ಬ್ರಹ್ಮನಿಗೆ ದಿನವು ಉಂಟಾಗಲು ಅವ್ಯಕ್ತವೆನಿಸ ಮಾಯೆಯಿಂದ ಚರಾಚರ ಜಗತ್ತೆಲ್ಲವೂ ವ್ಯಕ್ತವಾಗುವುದು ಅಂದರೆ ಉತ್ಪತ್ತಿಯಾಗುವುದು. ಹಾಗೆಯೇ ಬ್ರಹ್ಮನಿಗೆ ರಾತ್ರಿಯಾಗಲು ಈ ಸ್ಥೂಲಪ್ರಪಂಚವೆಲ್ಲ ಪುನಃ ಅದೇ ಅವ್ಯಕ್ತದಲ್ಲಿ ಲಯವಾಗುವುದು.

**ಭೂತಗ್ರಾಮಃ ಸ ಏವಾಯಂ, ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ, ಪ್ರಭವತ್ಯಹರಾಗಮೇ ॥೧೯॥**

ಎಲೈ ಪಾರ್ಥನೇ! ಪ್ರಳಯಕಾಲದಲ್ಲಿ ವಿಲೀನವಾಗಿದ್ದ ಪ್ರಾಣಿ ಸಮುದಾಯವೇ ಸೃಷ್ಟಿಕಾಲದಲ್ಲಿ ಪುನಃ ಉತ್ಪನ್ನವಾಗುತ್ತವೆ. ಹೀಗೆ ಉತ್ಪನ್ನವಾಗಿ ಪರವಶತೆಯನ್ನು ಹೊಂದಿದ ಈ ಸಮಸ್ತ ಪ್ರಾಣಿಗಳೂ ಬ್ರಹ್ಮನ ರಾತ್ರಿಕಾಲದಲ್ಲಿ ವಿಲಯವಾಗುವುವು. ಹೀಗೆ ಪುನಃ ಪುನಃ ಉತ್ಪತ್ತಿಯಾಗುತ್ತಲೂ, ನಾಶವಾಗುತ್ತಲೂ ಇರುತ್ತವೆ.

**ಪರಸ್ತಸ್ಮಾತ್ತು ಭಾವೋಽನ್ಯೋಽ, ವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು, ನಶ್ಯತ್ಸು ನ ವಿನಶ್ಯತಿ ॥೨೦॥**

ಅವ್ಯಕ್ತಕ್ಕಿಂತಲೂ ಪರ (ಶ್ರೇಷ್ಠ)ನಾದ ಮತ್ತು ಭಿನ್ನ (ವಿಲಕ್ಷಣ)ನಾದ ಯಾವ ಸನಾತನವಾದ ದಿವ್ಯಪುರುಷನಿರುವನೋ, ಅವನು ಈ ಸಮಸ್ತ ಭೂತ ಸಮುದಾಯವು ನಷ್ಟವಾದರೂ ನಷ್ಟವಾಗದೇ ಇರುವನು.

**ಅವ್ಯಕ್ತೋಽಕ್ಷರ ಇತ್ಯುಕ್ತ, ಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ, ತದ್ಧಾಮ ಪರಮಂ ಮಮ ॥೨೧॥**

ಇಂದ್ರಿಯಗಳಿಗೆ ಗೋಚರವಲ್ಲದ ಈ ಸನಾತನವಾದ ಅವ್ಯಕ್ತವನ್ನೇ ಅಕ್ಷರ (ನಾಶರಹಿತ, ಪರಮಾರ್ಥ ಸತ್ಯವಸ್ತು) ವೆಂದೂ, ಇದೇ ಪರಮಗತಿ ಎಂದೂ ಶ್ರುತಿಗಳಿಂದ ಹೇಳಲಾಗಿದೆ. ಪುರುಷನು ಯಾವ ಸನಾತನವಾದ ಸ್ಥಾನವನ್ನು ಹೊಂದಿದ ಮೇಲೆ ಪುನರಾವೃತ್ತಿ ಇಲ್ಲದವನಾಗುವನೋ ಅದು ನನ್ನ ಪರಮಧಾಮವಾಗಿರುವುದು.

**ಪುರುಷಃ ಸ ಪರಃ ಪಾರ್ಥ, ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ, ಯೇನ ಸರ್ವಮಿದಂ ತತಮ್ ॥೨೨॥**

ಈ ಸಮಸ್ತ ಭೂತಸಮುದಾಯವು ಯಾವ ಪರಮಾತ್ಮನಲ್ಲಿ ಅಂತರ್ಗತವಾಗಿರುವುವೋ ಮತ್ತು ಯಾವ ಪರಮಾತ್ಮನಿಂದ ಇದೆಲ್ಲವೂ ವ್ಯಾಪ್ತವಾಗಿದೆಯೋ ಆ ಪರಮ ಪುರುಷನು ಅನನ್ಯ ಭಕ್ತಿಯಿಂದಲೇ ಪ್ರಾಪ್ತನಾಗುವನು.

**ಯತ್ರ ಕಾಲೇ ತ್ವನಾವೃತ್ತಿ, ಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ, ವಕ್ಷ್ಯಾಮಿ ಭರತರ್ಷಭ ॥೨೩॥**

ಎಲೈ ಭರತ ಶ್ರೇಷ್ಠನೇ ! ಯಾವ ಕಾಲದಲ್ಲಿ ಶರೀರವನ್ನು ಬಿಟ್ಟು ಪ್ರಯಾಣಮಾಡಿದ ಯೋಗಿಗಳು ಹಿಂದಿರುಗಿ ಬಾರದಿರುವ ಅನಾವೃತ್ತಿಯನ್ನೂ ಮತ್ತು ಯಾವ ಕಾಲದಲ್ಲಿ ಪ್ರಯಾಣಮಾಡಿದವರು ಪುನರಾವೃತ್ತಿಯನ್ನೂ ಹೊಂದುವರೋ ಆ ಎರಡು ಕಾಲ (ಮಾರ್ಗ)ವನ್ನೂ ನಾನು ಹೇಳುವೆನು.

ಅಗ್ನಿರ್ಜ್ಯೋತಿರಹಃ ಶುಕ್ಲಃ, ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ, ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥

ಸಗುಣ ಬ್ರಹ್ಮೋಪಾಸಕರಾದ ಯೋಗಿಗಳು ತಮ್ಮ ದೇಹವನ್ನು ತ್ಯಜಿಸಿ ಅಗ್ನಿ ಅಭಿಮಾನಿದೇವತೆ, ಜ್ಯೋತಿ ಅಭಿಮಾನಿದೇವತೆ, ದಿನಾಭಿಮಾನ ದೇವತೆ, ಶುಕ್ಲಪಕ್ಷ ಅಭಿಮಾನಿ ದೇವತೆ, ಆರು ತಿಂಗಳುಗಳಿಂದ ಕೂಡಿರುವ ಉತ್ತರಾಯಣ ಅಭಿಮಾನಿ ದೇವತೆಗಳ ಮೂಲಕವಾಗಿ ಪ್ರಯಾಣಮಾಡಿ ಸಗುಣ ಬ್ರಹ್ಮವನ್ನು ಹೊಂದುವರು.

ಇದು ಪುನರಾವೃತ್ತಿರಹಿತವಾದ ದೇವಯಾನ ಮಾರ್ಗ.

ಧೂಮೋ ರಾತ್ರಿಸ್ತಥಾ ಕೃಷ್ಣಃ, ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂ ಜ್ಯೋತಿ, ರ್ಯೋಗೀ ಪ್ರಾಪ್ಯ ನಿವರ್ತತೇ ॥೨೫॥

ಕಾಮ್ಯಭಾವದಿಂದ ಕರ್ಮಾಚರಣೆಮಾಡಿದ ಯೋಗಿಯು ಧೂಮಾಭಿಮಾನಿ ದೇವತೆ, ರಾತ್ರಿ ಅಭಿಮಾನಿ ದೇವತೆ, ಕೃಷ್ಣಪಕ್ಷಾಭಿಮಾನಿ ದೇವತೆ ಮತ್ತು ಆರುತಿಂಗಳುಗಳಿಂದ ಕೂಡಿದ ದಕ್ಷಿಣಾಭಿಮಾನಿ ದೇವತೆಗಳ ಮೂಲಕವಾಗಿ ಪ್ರಯಾಣಮಾಡಿದವನು ಜ್ಯೋತಿರ್ಮಯವಾದ ಚಂದ್ರಲೋಕವನ್ನು ಸೇರಿ ಪುನರಾವೃತ್ತಿಯನ್ನು ಹೊಂದುವನು.

ಇದು ಪುನರಾವೃತ್ತಿಯಿಂದ ಕೂಡಿರುವ ಪಿತೃಯಾನಮಾರ್ಗ ಅಥವಾ ಧೂಮಮಾರ್ಗವೆಂದು ಹೇಳಲ್ಪಡುವುದು.

ಶುಕ್ಲ ಕೃಷ್ಣೇ ಗತೀಹ್ಯೇತೇ, ಜಗತಃ ಶಾಶ್ವತೇ ಮತೇ ।
ಏಕಯಾ ಯಾತ್ಯನಾವೃತ್ತಿ, ಮನ್ಯಯಾಽಽವರ್ತತೇ ಪುನಃ ॥೨೬॥

ಈ ಲೋಕದಲ್ಲಿ ಶುಕ್ಲಗತಿ ಮತ್ತು ಕೃಷ್ಣಗತಿ ಎಂದು ಪ್ರಸಿದ್ಧವಾಗಿರುವ ಈ ಎರಡು ಮಾರ್ಗವೂ ಅನಾದಿಸಿದ್ಧವಾಗಿರುವುದು. ಇವೆರಡರಲ್ಲಿ ಮೊದಲನೆಯದಾದ ಶುಕ್ಲಮಾರ್ಗದಿಂದ ಪ್ರಯಾಣಮಾಡಿದ ಉಪಾಸಕರು ಪುನರಾವೃತ್ತಿ ಇಲ್ಲದ ಮೋಕ್ಷವನ್ನು ಪಡೆಯುವರು. ಎರಡನೆಯದಾದ ಕೃಷ್ಣಮಾರ್ಗದಿಂದ ತೆರಳಿದವರು ಪುನರಾವೃತ್ತಿಯನ್ನು ಪಡೆಯುವರು.

ನೈತೇ ಸೃತೀ ಪಾರ್ಥ ಜಾನನ್, ಯೋಗೀ ಮುಹ್ಯತಿ ಕಶ್ಚನ ।
ತಸ್ಮಾತ್ಸರ್ವೇಷು ಕಾಲೇಷು, ಯೋಗಯುಕ್ತೋ ಭವಾರ್ಜುನ ॥೨೭॥

ಎಲೈ ಪಾರ್ಥನೇ ! ಈ ಎರಡು ಮಾರ್ಗಗಳನ್ನು ತಿಳಿದಿರುವ ಯಾವನೊಬ್ಬ ಯೋಗಿಯೂ ಮೋಹವನ್ನು ಹೊಂದುವುದಿಲ್ಲ. ಆದುದರಿಂದ ನೀನು ಸರ್ವಕಾಲದಲ್ಲಿಯೂ ಸಮತ್ವಬುದ್ಧಿರೂಪವಾದ ಯೋಗವನ್ನು ಆಚರಿಸುವವನಾಗು.

ವೇದೇಷು ಯಜ್ಞೇಷು ತಪಸ್ಸು ಚೈವ, ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।  ಅತ್ಯೇತಿ ತತ್ಸರ್ವಮಿದಂ ವಿದಿತ್ವಾ, ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಅಕ್ಷರಬ್ರಹ್ಮಯೋಗೋನಾಮ
ಅಷ್ಟಮೋಽಧ್ಯಾಯಃ

ಯೋಗಿಯಾದವನು ಇದುವರೆಗೆ ಪೇಳಿದ ಸಮಸ್ತವಿಷಯಗಳನ್ನೂ (X) ತಿಳಿದವನಾಗಿ ವೇದಗಳಲ್ಲಿಯೂ, ಯಜ್ಞಗಳಲ್ಲಿಯೂ, ತಪಸ್ಸು ದಾನಗಳಲ್ಲಿಯೂ, ಎಷ್ಟುಬಗೆಯ ಸ್ವರ್ಗಾದಿ ಪುಣ್ಯಫಲಗಳನ್ನು ಹೇಳಿರುವುದೋ ಅವೆಲ್ಲವನ್ನೂ ಅತಿಕ್ರಮಿಸಿ, ಸರ್ವೋತ್ಕೃಷ್ಟವಾಗಿಯೂ (ಪರಂ), ಸರ್ವಕ್ಕೂ ಕಾರಣವಾಗಿಯೂ (ಆದ್ಯಂ) ಇರುವ ಸನಾತನ ಪರಮಪದವನ್ನು ಹೊಂದುವನು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಅಕ್ಷರಬ್ರಹ್ಮಯೋಗವೆಂಬ
ಎಂಟನೆಯ ಅಧ್ಯಾಯ ಸಂಪೂರ್ಣವು.

—❖—

(X) ಈ ಅಧ್ಯಾಯದ ಪ್ರಾರಂಭದಲ್ಲಿ ಮಾಡಿರುವ ಸಪ್ತಪ್ರಶ್ನೆಗಳ ಅರ್ಥವನ್ನು ತಿಳಿದು ಉಪಾಸನೆ ಗೈದಿರುವ ಯೋಗಿಯು.

# ಅಥ ರಾಜವಿದ್ಯಾ ರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ

## ಶ್ರೀ ಭಗವಾನುವಾಚ

**ಇದಂ ತು ತೇ ಗುಹ್ಯತಮಂ, ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ, ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥**

ಶ್ರೀ ಕೃಷ್ಣ ಭಗವಂತನಿಂತೆಂದನು :- ಎಲೈ ಅರ್ಜುನಾ ! ಅಸೂಯಾ ದೋಷರಹಿತನಾದ ನಿನಗೆ ಅತ್ಯಂತ ರಹಸ್ಯವಾದ (X) ವಿಜ್ಞಾನಸಹಿತವಾದ ಜ್ಞಾನವನ್ನು ಹೇಳುವೆನು. ಇದನ್ನು ತಿಳಿಯುವುದರಿಂದ ನೀನು ಅಶುಭವಾದ ಸಂಸಾರದಿಂದ ಮುಕ್ತನಾಗುವೆ.

**ರಾಜವಿದ್ಯಾ ರಾಜಗುಹ್ಯಂ, ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ, ಸುಸುಖಂ ಕರ್ತುಮವ್ಯಯಮ್ ॥೨॥**

ಈ ವಿದ್ಯೆಯು ಸರ್ವವಿದ್ಯೆಗಳಲ್ಲಿ ಅತ್ಯಂತ ಶ್ರೇಷ್ಠವಾಗಿರುವುದರಿಂದ ರಾಜವಿದ್ಯೆಯಾಗಿದೆ. ಅತಿರಹಸ್ಯವಾದ ವಿಷಯಗಳಲ್ಲೆಲ್ಲಾ ಅತ್ಯಂತ ರಹಸ್ಯವಾದುದಾಗಿದೆ. ಆದುದರಿಂದ ರಾಜಗುಹ್ಯವಾಗಿದೆ; ಪವಿತ್ರವಾದುದಾಗಿದೆ, ಉತ್ತಮವಾದುದಾಗಿದೆ; ಪ್ರತ್ಯಕ್ಷಫಲವನ್ನು ಕೊಡುವುದಾಗಿದೆ; ಧರ್ಮದಿಂದ ಕೂಡಿದೆ; ನಾಶರಹಿತವಾದುದಾಗಿದೆ; ಇಷ್ಟೇ ಅಲ್ಲದೆ ಇದನ್ನು ಅನುಷ್ಠಾನ ಮಾಡಲು ಅತಿ ಸುಲಭವಾಗಿದೆ.

ಈ ಜ್ಞಾನದಲ್ಲಿ ಇಷ್ಟು ಮಹಿಮೆ ಮತ್ತು ಸೌಲಭ್ಯತೆಗಳಿವೆ.

**ಅಶ್ರದ್ದಧಾನಾಃ ಪುರುಷಾ, ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ, ಮೃತ್ಯುಸಂಸಾರವರ್ತ್ಮನಿ ॥೩॥**

ಎಲೈ ಪರಂತಪನೇ ! ಈ ತತ್ವಜ್ಞಾನವೆಂಬ ಪರಮಧರ್ಮವನ್ನು ಅಶ್ರದ್ಧೆಯಿಂದ ಅನುಷ್ಠಿಸದೆ ಇರುವ ಜನಗಳು ನನ್ನನ್ನು ಸೇರದೆ ಜನನ ಮರಣ ಪ್ರವಾಹರೂಪವಾದ ಸಂಸಾರಮಾರ್ಗದಲ್ಲಿ ಹೋಗಿ ಸೇರುವರು.

**ಮಯಾ ತತಮಿದಂ ಸರ್ವಂ, ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ, ನ ಚಾಹಂ ತೇಷ್ವವಸ್ಥಿತಃ ॥೪॥**

---

(X) ಅನುಭವಜ್ಞಾನ.

14

ಅತಿಸೂಕ್ಷ್ಮವಾದ ನನ್ನ ಸ್ವರೂಪದಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಈ ಕಾರಣದಿಂದ ಈ ಸಮಸ್ತ ಭೂತಗಳು ನನ್ನಲ್ಲಿಯೇ ಇರುವುವು. ನಾನು ಅವುಗಳಲ್ಲಿ ಇರುವುದಿಲ್ಲ. ಅಂದರೆ ನಾನು ಸರ್ವಾಧಾರನಾದ್ದರಿಂದ ನನಗೆ ಮತ್ತೊಂದು ಆಧಾರವಿಲ್ಲ.

**ನ ಚ ಮತ್ಸ್ಥಾನಿ ಭೂತಾನಿ, ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ, ಮಮಾತ್ಮಾ ಭೂತಭಾವನಃ ॥೫॥**

ಚೆನ್ನಾಗಿ ವಿಚಾರಮಾಡಿದಲ್ಲಿ ಚರಾಚರ ಪ್ರಪಂಚವು ಯಾವುದೂ ನನ್ನಲ್ಲಿರುವುದಿಲ್ಲ. ನನ್ನ ಯೋಗಮಹಿಮೆಯನ್ನು ನೋಡು. ನಾನು ಸಮಸ್ತ ಪ್ರಪಂಚವನ್ನು ಧಾರಣಮಾಡುವವನಾಗಿಯೂ ಇರುವೆನು, ಪುನಃ ಅವುಗಳಲ್ಲಿ ಇಲ್ಲದೇ ಇರುವವನಾಗಿಯೂ ಇರುವೆನು. ಮತ್ತು ನನ್ನ ಸ್ವರೂಪವು ಸಮಸ್ತ ಪ್ರಪಂಚವನ್ನು ಉತ್ಪನ್ನಮಾಡುವಂಥಾದ್ದಾಗಿಯೂ ಇರುವುದು.

**ಯಥಾಽಽಕಾಶಸ್ಥಿತೋ ನಿತ್ಯಂ, ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ, ಮತ್ಸ್ಥಾನೀತ್ಯುಪಧಾರಯ ॥೬॥**

ಸದಾ ಚಲಿಸುತ್ತಿರುವ ಮಹಾ ವಾಯುವು ಸರ್ವದಾ ಆಕಾಶದಲ್ಲಿಯೇ ಸ್ಥಿತವಾಗಿರುವಂತೆ, ಸಮಸ್ತ ಭೂತಗಳೂ ನನ್ನಲ್ಲಿಯೇ ಇರುವುವೆಂದು ತಿಳಿಯುವವನಾಗು.

**ಸರ್ವಭೂತಾನಿ ಕೌಂತೇಯ, ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ, ಕಲ್ಪಾದೌ ವಿಸೃಜಾಮ್ಯಹಮ್ ॥೭॥**

ಎಲೈ ಕುಂತಿಪುತ್ರನಾದ ಅರ್ಜುನನೇ ! ಪ್ರಳಯಕಾಲದಲ್ಲಿ ಚರಾಚರ ಜಗತ್ತೆಲ್ಲವೂ ನನ್ನ ಪ್ರಕೃತಿಯಲ್ಲಿ ಸೇರಿ ಹೋಗುವುದು. ಕಲ್ಪಾದಿಯಲ್ಲಿ ಪುನಃ ಅವುಗಳನ್ನು ಪ್ರಕೃತಿಯಿಂದಲೇ ನಾನು ಸೃಷ್ಟಿಸುವೆನು.

**ಪ್ರಕೃತಿಂ ಸ್ವಾಮವಷ್ಟಭ್ಯ, ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನ, ಮವಶಂ ಪ್ರಕೃತೇರ್ವಶಾತ್ ॥೮॥**

ಪರಮೇಶ್ವರನಾದ ನಾನು ನನ್ನ ಅಧೀನದಲ್ಲಿರುವ ಮೂಲ ಪ್ರಕೃತಿಯನ್ನು ಆಶ್ರಯಿಸಿ, ಪ್ರಕೃತಿಯ ಅಧೀನದಲ್ಲಿರುವ ಭೂತಸಮುದಾಯವನ್ನು ಆ ಪ್ರಕೃತಿಯಿಂದಲೇ ಪುನಃ ಪುನಃ ಸೃಷ್ಟಿಸುವೆನು.

**ನ ಚ ಮಾಂ ತಾನಿ ಕರ್ಮಾಣಿ, ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನ, ಮಸಕ್ತಂ ತೇಷು ಕರ್ಮಸು ॥೯॥**

ಎಲೈ ಧನಂಜಯನೇ ! ಈ ರೀತಿ ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿ ಕರ್ಮಗಳನ್ನು ನಾನು ಮಾಡುತ್ತಿರುವವನಾದರೂ ಆ ಕರ್ಮಗಳಲ್ಲಿ ನನಗೆ ಕರ್ತೃತ್ವಾಭಿಮಾನವಿಲ್ಲದಿರುವುದರಿಂದಲೂ ಮತ್ತು ಅವುಗಳ ವಿಷಯದಲ್ಲಿ ನಾನು ಉದಾಸೀನನಂತೆ ಇರುವುದರಿಂದಲೂ ಆ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ.

ಕರ್ತೃತ್ವಾಭಿಮಾನ ಮತ್ತು ಫಲಾಪೇಕ್ಷೆ—ಇವೆರಡೂ ಬಂಧನಕ್ಕೆ ಕಾರಣವಾಗಿವೆ. ಇವಿಲ್ಲದೆ ಮಾಡುವ ಕರ್ಮಗಳು ಬಂಧಕವಾಗುವುದಿಲ್ಲ ವೆಂಬ ಭಾವ.

**ಮಯಾಽಧ್ಯಕ್ಷೇಣ ಪ್ರಕೃತಿಃ, ಸೂಯತೇ ಸಚರಾಚರಮ್ ।**
**ಹೇತುನಾಽನೇನ ಕೌಂತೇಯ, ಜಗದ್ವಿಪರಿವರ್ತತೇ ॥೧೦॥**

ಎಲೈ ಕುಂತೀಪುತ್ರನಾದ ಅರ್ಜುನನೇ ! ಈ ಮೂಲಪ್ರಕೃತಿಗೆ ನಾನೇ ಅಧಿಷ್ಠಾನ (ಆಧಾರ)ನಾಗಿರುವುದರಿಂದ ಈ ಪ್ರಕೃತಿಯು ನನ್ನ ಸತ್ತಾಸ್ಫೂರ್ತಿಯನ್ನು ಪಡೆದೇ ಚರಾಚರ ಪ್ರಪಂಚವನ್ನು ಉತ್ಪನ್ನಮಾಡುತ್ತದೆ. ಮತ್ತು ಚರಾಚರಾತ್ಮಕವಾದ ಜಗತ್ತಿನಲ್ಲಿ ನಡೆಯುತ್ತಿರುವ ವಿವಿಧವಾದ ವ್ಯವಹಾರವೂ ಸಹ ನನ್ನ ಅಧಿಷ್ಠಾನ ಬಲದಿಂದಲೇ.

**ಅವಜಾನಂತಿ ಮಾಂ ಮೂಢಾ, ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ, ಮಮ ಭೂತಮಹೇಶ್ವರಮ್ ॥೧೧॥**

ನನ್ನ ಸರ್ವೋತ್ಕೃಷ್ಟವಾದ, ಸರ್ವೇಶ್ವರತ್ವಾದಿ ಮಹಾಮಹಿಮೆಗಳಿಂದ ಒಪ್ಪುತ್ತಲಿರುವ ಸ್ವರೂಪವನ್ನು ತಿಳಿಯದಿರುವವರು ಲೋಕಾನುಗ್ರಹಾರ್ಥವಾಗಿ ರಾಮ ಕೃಷ್ಣಾದಿ ಮನುಷ್ಯ ಶರೀರವನ್ನು ತಾಳಿದಾಗ, ನನ್ನನ್ನು ಅನಾದರಗೈಯುವರು.

**ಮೋಘಾಶಾ ಮೋಘಕರ್ಮಾಣೋ, ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ, ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

ನಿಷ್ಫಲವಾದ ಆಶೆಯೂ, ನಿಷ್ಫಲವಾದ ಕರ್ಮವೂ, ನಿಷ್ಫಲವಾದ ಜ್ಞಾನವೂ ಯಾರಿಗಿರುವುದೋ; ಇಂತಹ ವಿಚಾರಹೀನರು ರಾಕ್ಷಸೀ, ಆಸುರೀ ಮತ್ತು ಮೋಹಿನೀ ಪ್ರಕೃತಿಯನ್ನೇ ಆಶ್ರಯಿಸಿರುವರು.

**ಮಹಾತ್ಮಾನಸ್ತು ಮಾಂ ಪಾರ್ಥ, ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ, ಜ್ಞಾತ್ವಾ ಭೂತಾದಿಮವ್ಯಯಮ್ ॥೧೩॥**

ಎಲೈ ಪಾರ್ಥನೇ ! ಆದರೆ ದೈವೀ ಸಂಪತ್ತಿನಿಂದ ಕೂಡಿದ ಮಹಾತ್ಮರು ನನ್ನನ್ನು ಸಮಸ್ತ ಭೂತಗಳಿಗೆ ಕಾರಣನೆಂತಲೂ ಮತ್ತು ನಾಶರಹಿತನೆಂತಲೂ ತಿಳಿದು ಅನನ್ಯ ಚಿತ್ತದಿಂದ ಸದಾ ನನ್ನನ್ನೇ ಭಜಿಸುವರು.

(ಅಭಯಂ ಸತ್ವಸಂಶುದ್ಧಿಃ) ಇತ್ಯಾದಿ ಮುಂದೆ ಹೇಳಿರುವ ದೈವೀಗುಣಗಳುಳ್ಳವರೇ ಅನನ್ಯ ಭಾವದಿಂದ ಪರಮಾತ್ಮನನ್ನು ಭಜಿಸುವರು. ಆಸುರೀ ಗುಣಗಳುಳ್ಳವರು ಭಜಿಸದೇ ಇರುವುದಲ್ಲದೆ ದ್ವೇಷವನ್ನೂ ಮಾಡುವರು.

**ಸತತಂ ಕೀರ್ತಯಂತೋ ಮಾಂ, ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ, ನಿತ್ಯಯುಕ್ತಾ ಉಪಾಸತೇ ॥೧೪॥**

ಆ ಮಹಾತ್ಮರು ದೃಢನಿಶ್ಚಯವುಳ್ಳವರಾಗಿ ಮತ್ತು ನಿತ್ಯಯುಕ್ತರಾಗಿ, (X) ನನ್ನನ್ನು ಹೊಂದಲು ಗಾಢವಾದ ಪ್ರಯತ್ನ ಮಾಡುತ್ತಿರುವವರಾಗಿ, ಭಕ್ತಿಯಿಂದ ನಿರಂತರವೂ ನನ್ನ ಸಂಕೀರ್ತನ ಮಾಡುತ್ತಾ, ಪುನಃ ಪುನಃ ಪ್ರಣಾಮ ಮಾಡುತ್ತಾ ಇದ್ದು ಉಪಾಸನೆಯನ್ನು ಮಾಡುತ್ತಾರೆ.

**ಜ್ಞಾನಯಜ್ಞೇನ ಚಾಪ್ಯನ್ಯೇ, ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ, ಬಹುಧಾ ವಿಶ್ವತೋಮುಖಮ್ ॥೧೫॥**

ಉತ್ತಮಾಧಿಕಾರಿಗಳಾದ ಇನ್ನುಕೆಲವರು ಜ್ಞಾನಯಜ್ಞದಿಂದ ನನ್ನನ್ನು ಪೂಜಿಸುತ್ತಾ ಕೇವಲ ಅಭಿನ್ನಭಾವದಿಂದ ನಿರ್ಗುಣ— ನಿರಾಕಾರನಾದ ನನ್ನನ್ನು ಚಿಂತಿಸುವರು. ಕೆಲವರು ಭೇದರೂಪದಿಂದಲೂ, ಮತ್ತು ಕೆಲವರು ಕಾಣ್ಬರುವುದು ಭಗವತಾ ಸ್ವರೂಪವೆಂತಲೂ, ಕೇಳ್ಬರುವುದು ಭಗವಂತನ ನಾಮವೆಂತಲೂ ಇನ್ನೂ ಬಹು ಪ್ರಕಾರಗಳಿಂದ ಈ ಎಲ್ಲಾ ಮಾರ್ಗಗಳಿಂದಲೂ ವಿಶ್ವರೂಪನಾದ ನನ್ನನ್ನು ಭಜಿಸುವರು.

**ಅಹಂ ಕ್ರತುರಹಂ ಯಜ್ಞಃ, ಸ್ವಧಾಽಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯ, ಮಹಮಗ್ನಿರಹಂ ಹುತಮ್ ॥೧೬॥**

ಶ್ರುತಿ ಪ್ರೋಕ್ತವಾದ (*a*) ಕ್ರತುವುನಾನು. ಸ್ಮೃತಿ ಪ್ರೋಕ್ತವಾದ ಪಂಚಯಜ್ಞಗಳೂ (*b*) ನಾನು. ನಾನೇ ಸ್ವಧಾರೂಪನು (*c*).

---

(X) ಸದಾ ಪರಮಾತ್ಮನಲ್ಲಿಯೇ ಮನಸ್ಸನ್ನು ಇಟ್ಟಿರುವವರಾದ.

ನಾನೇ ಔಷಧ ರೂಪನು (d). ನಾನೇ ಮಂತ್ರರೂಪನು. ನಾನೇ ಆಜ್ಯರೂಪನು (e). ನಾನೇ ಅಗ್ನಿರೂಪನು (f). ಮತ್ತು ನಾನೇ ಹವನರೂಪನೂ ಆಗಿರುವೆನು.

**ಪಿತಾಽಹಮಸ್ಯ ಜಗತೋ, ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ, ಋಕ್ ಸಾಮ ಯಜುರೇವ ಚ ॥೧೭॥**

ಮತ್ತು ಈ ಜಗತ್ತಿಗೆ ತಂದೆಯೂ, ತಾಯಿಯೂ, ಪಿತಾಮಹನಾಗಿಯೂ, ಕರ್ಮಫಲಗಳನ್ನು ಕೊಡುವನಾಗಿಯೂ, ಜ್ಞಾನಿಗಳಿಂದ ತಿಳಿಯಲು, ಯೋಗ್ಯವಾಗಿರುವ ವಸ್ತುವೂ, ಪರಮ ಪವಿತ್ರ ವಸ್ತುವಾಗಿಯೂ, ಓಂಕಾರರೂಪವಾಗಿಯೂ, ಋಗ್ವೇದಾದಿಗಳಾಗಿಯೂ ನಾನೇ ಇರುವೆನು.

**ಗತಿರ್ಭರ್ತಾ ಪ್ರಭುಃ ಸಾಕ್ಷೀ, ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ, ನಿಧಾನಂ ಬೀಜಮವ್ಯಯಮ್ ॥೧೮॥**

ಪ್ರಾಪ್ತವಾಗಲು ಯೋಗ್ಯವಾದ ಪರಮಧಾಮವೂ ಅಥವಾ ಸ್ವರ್ಗಾದಿ ಲೋಕಗಳೂ, ಪಾಲಕ—ಪೋಷಕನೂ, ಶಾಸನ ಕರ್ತೃವೂ, ಸರ್ವಸಾಕ್ಷಿಯೂ, ಎಲ್ಲರ ವಾಸಸ್ಥಾನವೂ, ಶರಣಾಗತ ರಕ್ಷಕನೂ, ಪ್ರತ್ಯುಪಕಾರವನ್ನು ಬಯಸದೆ ಉಪಕಾರ ಮಾಡುವ ಸುಹೃದನೂ, ಮತ್ತು ಸೃಷ್ಟಿಕರ್ತನೂ ಸಂಹಾರಕನೂ, ಸ್ಥಿತಿ ಕರ್ತನೂ, ಅಥವಾ ಸರ್ವಕ್ಕೂ ಆಧಾರಭೂತನೂ, (ನಿಧಾನಂ) (1) ನಿಧಿನಿಕ್ಷೇಪವೂ, (2) ಜಗತ್ಕಾರಣನೂ, (3) ನಾಶರಹಿತನೂ ನಾನಾಗಿರುವೆನು.

---

(a) ಅಗ್ನಿಷ್ಟೋಮಾದಿಗಳು. (b) ವೇದಾಧ್ಯಯನ, ವೈಶ್ವದೇವ, ಅತಿಥಿ ಸತ್ಕಾರ, ಪಿತೃತರ್ಪಣ, ಬಲಿಹರಣ. (c) ಪಿತೃಗಳಿಗೆ ಅರ್ಪಣಮಾಡತಕ್ಕ ಕವ್ಯ ಮತ್ತು ಅರ್ಪಣ ಮಂತ್ರ. (d) ಭತ್ತ, ಗೋಧಿ ಮುಂತಾದ ಧಾನ್ಯಗಳು ಮತ್ತು ವನಸ್ಪತಿಗಳು, ಮೂಲಿಕೆಗಳು. (e) ತುಪ್ಪ. (f) ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ತ್ರಿವಿಧ ಅಗ್ನಿ.

(1) ತತ್ಕಾಲದಲ್ಲಿ ಭೋಗದ ಅಯೋಗ್ಯತೆಯಿಂದ ಕಾಲಾಂತರದೊಳ್ ಭೋಗಿಸುವುದಕ್ಕೆ ಯೋಗ್ಯವಾದ ವಸ್ತುವು ಯಾವುದರಲ್ಲಿ ನಿಲ್ಲಿಸಲ್ಪಡುವುದೋ

'ನಿಧಾನ'ವೆನಿಸಿಕೊಳ್ಳುವುದು- ಅರ್ಥಾತ್, ಸೂಕ್ಷ್ಮರೂಪವಾದ ಸರ್ವವಸ್ತುಗಳಿಗೂ ಅಧಿಕರಣ (ಆಶ್ರಯ)ವಾದ ಪ್ರಲಯಸ್ಥಾನವು ನಿಧಾನವೆನಿಸಿಕೊಳ್ಳುವುದು. ಇಂತಹ ನಿಧಾನರೂಪವಾಗಿರತಕ್ಕದ್ದೂ ತಾನೇ ಎಂಬುದು ಶ್ರೀ ಭಗವಂತನ ವಚನ.

(2) ಎಲ್ಲವೂ ಪರಮಾತ್ಮನಿಂದಲೇ ಹುಟ್ಟುತ್ತವೆ. ಆದ್ದರಿಂದ ಬೀಜನು.

(3) ಯಾವುದಕ್ಕೆ ನಾಶವಿಲ್ಲವೋ ಅದು ಅವ್ಯಯ.

**ತಪಾಮ್ಯಹಮಹಂ ವರ್ಷಂ, ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ, ಸದಸಚ್ಚಾಹಮರ್ಜುನ ॥೧೯॥**

ಎಲೈ ಅರ್ಜುನನೇ! ನಾನು ಸೂರ್ಯರೂಪದಿಂದ ಇದ್ದು ತಾಪವನ್ನುಂಟು ಮಾಡುತ್ತೇನೆ ಮತ್ತು ಸೂರ್ಯರಶ್ಮಿಯಿಂದ ಜಲವನ್ನು ಆಕರ್ಷಿಸಿ ಅದನ್ನೇ ಮಳೆಯರೂಪವಾಗಿ ವರ್ಷಿಸುತ್ತೇನೆ. ಮತ್ತು ಅಮೃತಸ್ವರೂಪನೂ, ಮೃತ್ಯುವೂ, ಸದ್ರೂಪನೂ ಅಸದ್ರೂಪನೂ ಸಹ ನಾನೇ ಆಗಿರುವೆನು.

**ತ್ರೈವಿದ್ಯಾ ಮಾಂ ಸೋಮಪಾಃ, ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ । ತೇ ಪುಣ್ಯಮಾಸಾದ್ಯ ಸುರೇಂದ್ರ**
**ಲೋಕ, ಮಶ್ನಂತಿ ದಿವ್ಯಾನ್ ದಿವಿ ದೇವ ಭೋಗಾನ್ ॥೨೦॥**

ಋಗಾದಿ ಮೂರು ವೇದಗಳನ್ನು ಬಲ್ಲ ಕರ್ಮಠರಾದ ಜನಗಳು ಕಾಮ್ಯ ಯಜ್ಞಗಳಿಂದ ಪರಮೇಶ್ವರನಾದ ನನ್ನನ್ನು ಪೂಜಿಸಿ ಸೋಮಪಾನದಿಂದ (X)ನಿಷ್ಪಾಪರಾಗಿ ಸ್ವರ್ಗವನ್ನು ಸೇರಲು ಅಪೇಕ್ಷಿಸುವರು. ಅಂತಹವರು ಪುಣ್ಯಫಲವಾದ ಇಂದ್ರಲೋಕವನ್ನು ಸೇರಿ ದೇವತೆಗಳಿಗೆ ಯೋಗ್ಯವಾದ ದಿವ್ಯಭೋಗಗಳನ್ನು ಅನುಭವಿಸುತ್ತಾರೆ.

ಮನುಷ್ಯನಿಗೆ ಸಿಗದೇಯಿರುವ ಭೋಗಗಳು 'ದಿವ್ಯಭೋಗ'ಗಳು. ದೇವತಾಶರೀರದಿಂದಲೇ ಭೋಗಿಸಲ್ಪಡುವ ಭೋಗಗಳು 'ದೇವಭೋಗ'ಗಳು ಎನ್ನಲ್ಪಡುವುವು.

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ, ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ । ಏವಂ ತ್ರಯೀ ಧರ್ಮಮನುಪ್ರಪನ್ನಾ,**
**ಗತಾಗತಂ ಕಾಮಕಾಮಾ ಲಭಂತೇ ॥೨೧॥**

ಹೀಗೆ ಸಕಾಮಕರ್ಮಿಗಳು ವಿಶಾಲವಾದ ಸ್ವರ್ಗಭೋಗಗಳನ್ನು ಅನುಭವಿಸಿ ಅಲ್ಲಿನ ಪುಣ್ಯಫಲವು ಕ್ಷೀಣವಾಗಲು ಪುನಃ ಈ ಮನುಷ್ಯ ಲೋಕವನ್ನು ಸೇರುವರು. ಈ ಪ್ರಕಾರವಾಗಿ ಕರ್ಮಕಾಂಡೋಕ್ತ ಯಜ್ಞಯಾಗಾದಿಗಳನ್ನು ಮಾಡುವ ಸಕಾಮಿಗಳು ಪುನಃ ಪುನಃ ಗಮನಾಗಮನಗಳನ್ನು ಹೊಂದುತ್ತಾರೆ.

---

(X) ಸೋಮಯಾಗದಲ್ಲಿ ಉಪಯೋಗಿಸುವ ಸೋಲಮತಾರಸಪಾನ.

**ಅನನ್ಯಾಶ್ಚಿಂತಯಂತೋ ಮಾಂ, ಯೇ ಜನಾಃ ಪರ್ಯುಪಾಸತೇ |**
**ತೇಷಾಂ ನಿತ್ಯಾಭಿಯುಕ್ತಾನಾಂ, ಯೋಗಕ್ಷೇಮಂ ವಹಾಮ್ಯಹಮ್ ||**

ಯಾರು ಅನನ್ಯ ಚಿತ್ತರಾಗಿ (a) ನನ್ನನ್ನೇ ಸ್ಮರಿಸುತ್ತಾ ಮತ್ತು ಭಜಿಸುತ್ತಾ ಇರುವರೋ ಅಂತಹ ನಿತ್ಯಯುಕ್ತರಾದ ಭಕ್ತರ ಯೋಗಕ್ಷೇಮ ವನ್ನು (b) ನಾನು ವಹಿಸುತ್ತೇನೆ.

**ಯೇಽಪ್ಯನ್ಯದೇವತಾಭಕ್ತಾ, ಯಜಂತೇ ಶ್ರದ್ಧಯಾನ್ವಿತಾಃ |**
**ತೇಽಪಿ ಮಾಮೇವ ಕೌಂತೇಯ, ಯಜಂತ್ಯ ವಿಧಿಪೂರ್ವಕಮ್ ||೨೩||**

ಎಲೈ ಕೌಂತೇಯನೇ ! ಮತ್ತೂ ಇಂದ್ರಾದಿ ದೇವತೆಗಳ ಭಕ್ತರಾದವರು ಶ್ರದ್ಧಾಯಕ್ತರಾಗಿ ಯಾವ ತಮ್ಮ ಇಷ್ಟದೇವತೆಯನ್ನು ಪೂಜಿಸುವರೋ ಅವರೂ ಸಹ ಅಜ್ಞಾನ ಪೂರ್ವಕ(c)ವಾಗಿ ನನ್ನನ್ನೇ ಪೂಜಿಸುತ್ತಾರೆ.

**ಅಹಂ ಹಿ ಸರ್ವಯಜ್ಞಾನಾಂ, ಭೋಕ್ತಾ ಚ ಪ್ರಭುರೇವ ಚ |**
**ನ ತು ಮಾಮಭಿಜಾನಂತಿ, ತತ್ವೇನಾತಶ್ಚ್ಯವಂತಿ ತೇ ||೨೪||**

ಪರಮೇಶ್ವರನಾದ ನಾನೇ ಸರ್ವಜ್ಞಗಳ ಭೋಕ್ತನೂ ಮತ್ತು ಫಲ ಪ್ರದಾತನೂ ಆಗಿರುವೆನು. ಆದರೆ ಸಕಾಮುಪುರುಷರು ನನ್ನನ್ನು ಈ ಪ್ರಕಾರ ವಾಗಿ ತಿಳಿದಿರುವುದಿಲ್ಲ. ಈ ಕಾರಣದಿಂದಲೇ ಅವರು ಮುಕ್ತರಾಗದೆ ಪುನ ರ್ಜನ್ಮವನ್ನು ಹೊಂದುವರು.

**ಯಾಂತಿ ದೇವವ್ರತಾ ದೇವಾನ್, ಪಿತೃನ್ ಯಾಂತಿ ಪಿತೃವ್ರತಾಃ |**
**ಭೂತಾನಿ ಯಾಂತಿ ಭೂತೇಜ್ಯಾ, ಯಾಂತಿ ಮದ್ಯಾಜಿನೋಽಪಿ ಮಾಮ್ ||೨೫||**

ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಹೊಂದುತ್ತಾರೆ. ಪಿತೃದೇವತೆಗಳನ್ನು ಪೂಜಿಸುವವರು ಪಿತೃಗಳನ್ನೇ ಹೊಂದುತ್ತಾರೆ.

---

(a) ಶಬ್ದಾದಿ ವಿಷಯಗಳಲ್ಲಿ ಅನುರಕ್ತವಾಗದೆ ಧ್ಯೇಯವಸ್ತುವಾದ ಪರಮಾ ತ್ಮನಲ್ಲಿಯೇ ನಿಂತ ಚಿತ್ತವು 'ಅನನ್ಯ ಚಿತ್ತ' ವೆನ್ನಲ್ಪಡುವುದು.

(b) ಯೋಗ-. ಅಪ್ರಾಪ್ತವಸ್ತುವಿನ ಪ್ರಾಪ್ತಿ. ಕ್ಷೇಮ-- ಪ್ರಾಪ್ತವಸ್ತುವಿನ ರಕ್ಷಣೆ.

(c) ಪರಮಾತ್ಮನೇ ಸರ್ವದೇವತೆಗಳ ರೂಪವಾಗಿರುವನು, ಎಲ್ಲಾ ದೇವತೆ ಗಳಿಗೂ ಒಡೆಯನು ಮತ್ತು ಶಾಸಕನು ಎಂಬ ನಿಜ ತತ್ವವನ್ನು ತಿಳಿಯದೆ ಮಾಡುವ ಉಪಾಸನೆ.

ಭೂತಗಳನ್ನು(x)ಪೂಜಿಸುವವರು ಭೂತಗಳನ್ನೇ ಹೊಂದುತ್ತಾರೆ. ಇದರಂತೆ ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ.

**ಪತ್ರಂ ಪುಷ್ಪಂ ಫಲಂ ತೋಯಂ, ಯೋ ಮೇ ಭಕ್ತ್ಯಾ ಪ್ರಯಚ್ಛತಿ।**
**ತದಹಂ ಭಕ್ತ್ಯುಪಹೃತ, ಮಶ್ನಾಮಿ ಪ್ರಯತಾತ್ಮನಃ ॥೨೬॥**

ಯಾವನು ಭಕ್ತಿಯಿಂದ ಪತ್ರವನ್ನಾಗಲಿ, ಪುಷ್ಪವನ್ನಾಗಲಿ, ಫಲವನ್ನಾಗಲಿ, ಕೊನೆಗೆ ಜಲವನ್ನಾಗಲಿ ನನಗೆ ಅರ್ಪಿಸುವನೋ ಆ ನಿರ್ಮಲಚಿತ್ತದವನು ವಿಶುದ್ಧಭಾವನೆಯಿಂದ, ಪರಮಾದರದಿಂದ, ಅತಿ ಭಕ್ತಿಯುಕ್ತನಾಗಿ ಸಮರ್ಪಿಸಿದ ಪತ್ರ ಪುಷ್ಪಾದಿಗಳನ್ನು ಅತಿ ಪ್ರೇಮದಿಂದ ಸ್ವೀಕರಿಸುವೆನು.

ಭಕ್ತಿಯಿಲ್ಲದ ಉತ್ತಮವರ್ಣದವನು ಶ್ರೇಷ್ಠಪದಾರ್ಥವಂ ಕೊಟ್ಟರೂ ಪರಮಾತ್ಮನು ಅದನ್ನು ಸ್ವೀಕರಿಸುವುದಿಲ್ಲ.

ಉದಾ :- ದುರ್ಯೋಧನನ ಔತಣ ಸ್ವೀಕರಿಸದೆ ಶ್ರೀ ಕೃಷ್ಣಪರಮಾತ್ಮನು ವಿದುರನ ಮನೆಯಲ್ಲಿ ಊಟಮಾಡಿದನು. ಸಮರ್ಪಿತ ವಸ್ತುವನ್ನು ಭಗವಂತನು ಸ್ವೀಕರಿಸುವುದರಲ್ಲಿ ಜಾತಿ, ಕುಲ, ಗೋತ್ರ, ರೂಪ, ವಿದ್ಯೆ, ತಪಸ್ಸು—ಇತ್ಯಾದಿಗಳು ಯಾವುದೂ ಕಾರಣವಾಗುವುದಿಲ್ಲ. ಕೊಡತಕ್ಕ ಪುರುಷನ ಪರಮ ಪ್ರೀತಿಯೊಂದೇ ಕಾರಣವು. ದ್ರೌಪದಿಯು ಪತ್ರವನ್ನೂ, ಗಜೇಂದ್ರನು ಪುಷ್ಪವನ್ನೂ, ಶಬರಿಯು ಹಣ್ಣನ್ನೂ, ರಂತಿದೇವನು ಜಲವನ್ನೂ ಅಂದರೆ ತಮ್ಮ ಶಕ್ತ್ಯಾನುಸಾರವಾದ ವಸ್ತುಗಳನ್ನು ಭಕ್ತಿಯಿಂದ ಸಮರ್ಪಣ ಮಾಡಿ ಭಗದನುಗ್ರಹಕ್ಕೆ ಪಾತ್ರರಾದರು.

**ಯತ್ಕರೋಷಿ ಯದಶ್ನಾಸಿ, ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ, ತತ್ ಕುರುಷ್ವ ಮದರ್ಪಣಮ್ ॥೨೭॥**

ಎಲೈ ಕುಂತೀಪುತ್ರನಾದ ಅರ್ಜುನನೇ ! ಶಾಸ್ತ್ರಾಜ್ಞೆಯಿಲ್ಲದ ಕೇವಲ ರಾಗದಿಂದ ನೀನು ಯಾವ ಯಾವ ಲೌಕಿಕ, ಗಮನಾಗಮನಾದಿ ಕ್ರಿಯೆಗಳನ್ನು ಮಾಡುವಿಯೋ, ಯಾವದನ್ನು ಭುಂಜಿಸುವೆಯೋ, ಯಾವ ಹವನಾದಿ ಶಾಸ್ತ್ರೋಕ್ತ ಕರ್ಮಗಳನ್ನು ಮಾಡುವೆಯೋ, ದಾನಾದಿ ಯಾವ ಕರ್ಮಾಚರಣೆ

---

(x) ಭೂತ ಉಪಾಸಕರು—ಯಕ್ಷ, ರಾಕ್ಷಸ, ವಿನಾಯಕ ಮಾತೃಕಾಗಣ ಅಥವಾ ಭೂತ ಪ್ರೇತ ಪಿಶಾಚಗಳನ್ನು ಪೂಜಿಸತಕ್ಕವರು.

ಮಾಡುವಿಯೋ ಯಾವ ತಪಸ್ಸೆಂಬ ಕರ್ಮವನ್ನು ಮಾಡುವಿಯೋ ಈ ಸಮಸ್ತ ಕರ್ಮಗಳೆಲ್ಲವನ್ನೂ ನನಗೇ ಸಮರ್ಪಿಸು.

**ಶುಭಾಶುಭಫಲೈರೇವಂ, ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ, ವಿಮುಕ್ತೋ ಮಾಮುಪೈಷ್ಯಸಿ॥೨೮॥**

ಹೀಗೆ ಸರ್ವದಾ ನನಗರ್ಪಿತ ಬುದ್ಧಿಯಿಂದ ಸಮಸ್ತ ಕಾರ್ಯಗಳನ್ನು ಮಾಡುವ ನೀನು ಶುಭಾಶುಭ ಫಲರೂಪವಾದ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದುವೆ. ಸಮಸ್ತ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸುವ ಸ್ವಭಾವವುಳ್ಳ ಸಂನ್ಯಾಸಯೋಗಯುಕ್ತನಾದ ನೀನು ಸರ್ವ ಕರ್ಮಬಂಧನಗಳಿಂದ ಬಿಡಲ್ಪಟ್ಟು, ಮೋಕ್ಷರೂಪ ಸ್ವರೂಪನಾದ ನನ್ನನ್ನೇ ಹೊಂದುವೆ.

**ಸಮೋಽಹಂ ಸರ್ವಭೂತೇಷು, ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ, ಮಯಿ ತೇ ತೇಷು ಚಾಪ್ಯಹಮ್॥**

ಪರಮೇಶ್ವರನಾದ ನಾನು ಬ್ರಹ್ಮಾದಿ ಸ್ತಂಭಪರ್ಯಂತವಿರುವ ಸಮಸ್ತ ಭೂತಗಳಲ್ಲಿಯೂ ಸಮಾನವಾಗಿದ್ದೇನೆ. ನನಗೆ ಯಾರೂ ಶತ್ರುವಾಗಲಿ ಅಥವಾ ಮಿತ್ರನಾಗಲಿ ಇರುವುದಿಲ್ಲ. ಆದರೆ ಭಕ್ತಿಪೂರ್ವಕವಾಗಿ ಯಾರು ನನ್ನನ್ನು ಭಜಿಸುವರೋ ಅವರು ನನ್ನಲ್ಲೇ ಇರುವರು. ನಾನೂ ಸಹ ಅವರಲ್ಲೇ ಇರುವೆನು.

**ಅಪಿ ಚೇತ್ಸುದುರಾಚಾರೋ, ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ, ಸಮ್ಯಗ್ವ್ಯವಸಿತೋ ಹಿ ಸಃ ॥೩೦॥**

ನನ್ನನ್ನು ಅನನ್ಯಭಾವದಿಂದ ಭಜಿಸುವ ಭಕ್ತನು ಪೂರ್ವದಲ್ಲಿ ಅತ್ಯಂತ ದುರಾಚಾರ(X)ನಾಗಿದ್ದರೂ ಈಗ ನನ್ನ ಭಜನೆಯಿಂದ ಸನ್ಮಾರ್ಗದಲ್ಲಿ ಪ್ರವರ್ತಿಸಿರುವ ಕಾರಣ ಅವನನ್ನು ಸಾಧು ಅಂದರೆ ಸದಾಚಾರಸಂಪನ್ನನೆಂದೇ ತಿಳಿಯತಕ್ಕದ್ದು.

**ಕ್ಷಿಪ್ರಂ ಭವತಿ ಧರ್ಮಾತ್ಮಾ, ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ, ನಮೇ ಭಕ್ತಃ ಪ್ರಣಶ್ಯತಿ ॥೩೧॥**

ಎಲೈ ಕೌಂತೇಯನೇ ! ಆ ಪುರುಷನು ಶೀಘ್ರವೇ ಧರ್ಮಾತ್ಮನಾಗುವನು ಮತ್ತು ಶಾಶ್ವತವಾದ ಶಾಂತಿಯನ್ನು ಹೊಂದುವನು. ನನ್ನ ಭಕ್ತನು

(X) ವಾಲ್ಮೀಕಿ, ಅಜಾಮಿಳ, ಬಿಲ್ವಮಂಗಳರಂತೆ.

ಎಂದಿಗೂ ನಾಶ (ದುರ್ಗತಿ) ಹೊಂದುವುದಿಲ್ಲವೆಂದು ನೀನು ನಿಶ್ಚಯವಾಗಿ ತಿಳಿದುಕೋ.

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ, ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾ, ಸ್ತೇಽಪಿ ಯಾಂತಿ ಪರಾಂ ಗತಿಮ್॥**

ಎಲೈ ಪಾರ್ಥನೇ ! ಪೂರ್ವಜನ್ಮದಲ್ಲಿ ಮಾಡಿದ ಪಾಪವಿಶೇಷದಿಂದ ಈ ಜನ್ಮದಲ್ಲಿ ದಾರಿದ್ರ್ಯ ಮತ್ತು ಮಹಾರೋಗಗ್ರಸ್ತರಾಗಿರುವಂತಹ ಪಾಪ ಯೋನಿಗಳಲ್ಲಿ ಜನಿಸಿರುವರೋ ಅವರೂ, ಮತ್ತು ಕೇವಲ ಗೃಹಕಾರ್ಯಗಳ ಲ್ಲಿಯೇ ಆಸಕ್ತರಾದ ಸ್ತ್ರೀಯರೂ, ವಾಣಿಜ್ಯಾದಿಗಳಲ್ಲಿ ಆಸಕ್ತರಾದ ವೈಶ್ಯರೂ, ಸೇವಾದಿ ಕಾರ್ಯಗಳಲ್ಲಿ ನಿರತರಾದ ಶೂದ್ರರೂ ಕೂಡ ನನ್ನನ್ನು ಆಶ್ರಯಿಸುವು ದಾದರೆ ಅಂತಹವರೂ ಸಹ ಪರಮಗತಿಯನ್ನು ಹೊಂದುತ್ತಾರೆ. (X)

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ, ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕ, ಮಿಮಂ ಪ್ರಾಪ್ಯ ಭಜಸ್ವ ಮಾಮ್ ॥೩೩॥**

ಹೀಗಿರುವಲ್ಲಿ ಪುಣ್ಯಶಾಲಿಗಳಾದ ಸದ್ಭಕ್ತರೂ, ಕೇವಲ ಬ್ರಹ್ಮನಿಷ್ಠರಾದ ಬ್ರಾಹ್ಮಣರೂ, ರಾಜರ್ಷಿಗಳೂ ನನ್ನನ್ನು ಆಶ್ರಯಿಸಿ ಪರಮಗತಿರೂಪವಾದ ಮೋಕ್ಷವನ್ನು ಹೊಂದುತ್ತಾರೆ ಎಂಬುದರಲ್ಲಿ ಅನುಮಾನವೇನು ?

ಆದಕಾರಣ ಅನಿತ್ಯವೂ ದುಃಖರೂಪವೂ ಆದ ಈ ಮಾನವ ಲೋಕ ವನ್ನು ಪ್ರಾಪ್ತಿಮಾಡಿಕೊಂಡಿರುವ ನೀನು ಸಕಲರೀತಿಯಿಂದಲೂ ನನ್ನನ್ನೇ ಭಜಿಸುವವನಾಗು.

**ಮನ್ಮನಾ ಭವ ಮದ್ಭಕ್ತೋ, ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವ, ಮಾತ್ಮಾನಂ ಮತ್ಪರಾಯಣಃ॥೩೪॥**

---

(X) ಪರಮಾತ್ಮನ ಭಕ್ತಿಮಾಡಲು ಸರ್ವರಿಗೂ ಸಮಾನ ಬಾಧ್ಯತೆ ಇದೆ. ಜಾತಿ ಕುಲ ಗೋತ್ರ ಕ್ರಿಯಾದಿಗಳ ನಿರ್ಬಂಧವಿಲ್ಲ.

ನಾಸ್ತಿತೇಷು ಜಾತಿ ವಿದ್ಯಾ ರೂಪ ಕುಲ ಧನ ಕ್ರಿಯಾದಿಭೇದಃ
(ನಾರದ ಭಕ್ತಿಸೂತ್ರ ೭೨)

ಅರ್ಥ:—ಭಕ್ತರಲ್ಲಿ ಜಾತಿ, ವಿದ್ಯಾ, ರೂಪ, ಕುಲ, ಧನ, ಕ್ರಿಯಾದಿಗಳ ಭೇದವಿಲ್ಲ. ಭಕ್ತಿಗಾಗಿ ಇವುಗಳ ಆವಶ್ಯಕತೆಯಿಲ್ಲ; ಕೇವಲ ಅನನ್ಯ ಪ್ರೇಮ ಮತ್ತು ವಿಶುದ್ಧ ಪ್ರೇಮದ ಆವಶ್ಯಕತೆ ಇದೆ.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ರಾಜವಿದ್ಯಾ ರಾಜಗುಹ್ಯಯೋಗೋನಾಮ
ನವಮೋಽಧ್ಯಾಯಃ

ಎಲೈ ಅರ್ಜುನನೇ ! ನೀನು ನನ್ನಲ್ಲೇ ಮನವುಳ್ಳವನಾಗು. ನನ್ನ ಭಕ್ತನಾಗು. ನನ್ನ ಪೂಜೆಯನ್ನು ಮಾಡುವವನಾಗು. ಪರಮೇಶ್ವರನಾದ ನನ್ನನ್ನೇ ನಮಸ್ಕರಿಸು. ನನ್ನ ಧ್ಯಾನ ಪರಾಯಣನಾಗು. ಈ ರೀತಿಯಾಗಿ ನೀನು ನಿನ್ನ ಶರೀರ ಇಂದ್ರಿಯ ಮನ ಬುದ್ಧಿಗಳನ್ನು ನನ್ನಲ್ಲಿಯೇ ನಿಯುಕ್ತಗೊಳಿಸಿ (ಸೇರಿಸಿ) ನನ್ನ ಪರಾಯಣನಾಗುವುದರಿಂದ ನನ್ನನ್ನೇ ಹೊಂದುವೆ. (X)

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯಯೋಗವೆಂಬ.
ಒಂಬತ್ತನೆಯ ಅಧ್ಯಾಯವು ಸಂಪೂರ್ಣವು.



(X) ಈ ಅಂತಿಮ ಶ್ಲೋಕದಲ್ಲಿ ಬೋಧಿಸಿರುವ ಅರ್ಥವೇ ರಾಜವಿದ್ಯೆ. ಇದು ರಾಜಗುಹ್ಯ.

# ಅಥ ವಿಭೂತಿಯೋಗೋನಾಮ ದಶಮೋಽಧ್ಯಾಯಃ

## ಶ್ರೀ ಭಗವಾನುವಾಚ

**ಭೂಯ ಏವ ಮಹಾಬಾಹೋ, ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರಿಯಮಾಣಾಯ, ವಕ್ಷ್ಯಾಮಿ ಹಿತಕಾಮ್ಯಯಾ ॥೧॥**

ಶ್ರೀ ಕೃಷ್ಣಪರಮಾತ್ಮನು ಇಂತೆಂದನು:—ಎಲೈ ಮಹಾಬಾಹುವಾದ ಅರ್ಜುನನೇ ! ನೀನು ಪುನಃ ನನ್ನ ಸರ್ವೋತ್ಕೃಷ್ಟವಾದ ಮಾತುಗಳನ್ನು ಕೇಳು. ನಾನು ಅತ್ಯಂತ ಪ್ರಿಯನಾದ ನಿನಗೋಸ್ಕರ ನಿನ್ನ ಹಿತಾಪೇಕ್ಷೆಯಿಂದ ಹೇಳುತ್ತೇನೆ.

**ನ ಮೇ ವಿದುಃ ಸುರಗಣಾಃ, ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ, ಮಹರ್ಷೀಣಾಂ ಚ ಸರ್ವಶಃ ॥೨॥**

ನಾನು ಉತ್ಪತ್ತಿರಹಿತನಾದರೂ ನನ್ನ ಅಧೀನವಾಗಿರುವ ಯೋಗ ಮಾಯೆಯದ್ವಾರಾ ಆದಿತ್ಯಾದಿ ವಿಭೂತಿರೂಪದಿಂದ ಅವತರಿಸುವ ನನ್ನ ಉತ್ಪತ್ತಿಯನ್ನೂ ಮತ್ತು ನಿರತಿಶಯ ಪ್ರಭಾವವನ್ನೂ ಬ್ರಹ್ಮ ರುದ್ರ, ವಸು, ಇಂದ್ರಾದಿ ದೇವತೆಗಳಾಗಲಿ, ಭೃಗು ಸಪ್ತಋಷಿಗಳು, ಸನಕಾದಿಗಳು ಮೊದಲಾದ ಮಹರ್ಷಿಗಳಾಗಲಿ ಯಾರೂ ತಿಳಿಯರು. ಏಕೆಂದರೆ ನಾನು ಎಲ್ಲಾ ದೇವತೆಗಳಿಗೂ, ಋಷಿಗಳಿಗೂ ಸರ್ವವಿಧದಿಂದಲೂ ಆದಿಕಾರಣನಾಗಿರುವೆನು.

**ಯೋ ಮಾಮಜಮನಾದಿಂ ಚ, ವೇತ್ತಿ ಲೋಕ ಮಹೇಶ್ವರಮ್ ।**
**ಅಸಮ್ಮೂಢಃ ಸ ಮರ್ತ್ಯೇಷು, ಸರ್ವಪಾಪೈಃ ಪ್ರಮುಚ್ಯತೇ ॥೩॥**

ಯಾವನು ನನ್ನನ್ನು ಅನಾದಿಯೆಂತಲೂ, ಸಮಸ್ತ ಲೋಕಗಳಿಗೂ ನಿಯಂತೃವೆಂತಲೂ ತಿಳಿದಿರುವನೋ ಅವನು ಎಲ್ಲಾ ಮನುಷ್ಯರಲ್ಲಿ ಅತಿ ವಿವೇಕಿಯಾದವನು. ಈ ವಿವೇಕದ ಪ್ರಭಾವದಿಂದ ಅವನು ಸರ್ವ ಪಾಪಗಳಿಂದಲೂ ಬಿಡಲ್ಪಡುವನು.

**ಬುದ್ಧಿರ್ಜ್ಞಾನಮಸಮ್ಮೋಹಃ, ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋ ಭಾವೋ, ಭಯಂ ಚಾಭಯಮೇವ ಚ ॥೪॥**

**ಅಹಿಂಸಾ ಸಮತಾ ತುಷ್ಟಿಃ, ಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ, ಮತ್ತ ಏವ ಪೃಥಗ್ವಿಧಾಃ ॥೫॥**

ನಿಶ್ಚಯಿಸುವ ಬುದ್ಧಿ, ಯಥಾರ್ಥ ಜ್ಞಾನ, ಮೂಢಭಾವವಿಲ್ಲದಿರುವುದು, ಪರರಿಂದಾದ ಅಪಮಾನ ಸಹಿಸುವುದು (ಕ್ಷಮೆ), ತಾನು ಕಂಡಂತೆ ಕೇಳಿದಂತೆ ಹೇಳುವುದು (ಸತ್ಯ), ಇಂದ್ರಿಯ ನಿಗ್ರಹ (ದಮ), ಮನೋ ನಿಗ್ರಹ (ಶಮ), ಇಷ್ಟವಸ್ತುವಿನ ಪ್ರಾಪ್ತಿ ಮತ್ತು ಅನಿಷ್ಟವಸ್ತುವಿನ ವಿಯೋಗ (ಸುಖ), ಅನಿಷ್ಟವಸ್ತುವಿನ ಸಂಯೋಗ ಮತ್ತು ಇಷ್ಟವಸ್ತುವಿನ ವಿಯೋಗ ಮತ್ತು ಆಧ್ಯಾತ್ಮಿಕಾದಿ ದುಃಖಗಳು (ದುಃಖ), ಉತ್ಪತ್ತಿ (ಭವ), ಲಯ (ಅಭಾವ), ಭಯ, ಅಭಯ, ಮನವಾಣಿ ಶರೀರದ್ವಾರ ಯಾವ ಪ್ರಾಣಿಗೂ ದುಃಖ ಉಂಟುಮಾಡದಿರುವುದು (ಅಹಿಂಸೆ), ಸುಖ-ದುಃಖ, ಶತ್ರು-ಮಿತ್ರಾದಿಗಳಲ್ಲಿ ರಾಗದ್ವೇಷವಿಲ್ಲದಿರುವುದು (ಸಮತೆ), ಪ್ರಾರಬ್ಧ ವಶಾತ್ ದೊರಕಿದುದರಲ್ಲಿಯೇ ಸಂತೋಷ (ತುಷ್ಟಿ), ತಪಸ್ಸು, ಸತ್ಪಾತ್ರದಲ್ಲಿ ನ್ಯಾಯಾರ್ಜಿತ ಧನದ ಅರ್ಪಣೆ (ದಾನ), ಕೀರ್ತಿ, ಅಪಕೀರ್ತಿ-ಈ ಬಗೆಯ ನಾನಾ ಪ್ರಕಾರದ ಭಾವಗಳೆಲ್ಲವೂ ಸರ್ವಪ್ರಾಣಿಗಳಿಗೆ ನನ್ನ ಸತ್ತಾ-ಶಕ್ತಿ ಯಿಂದಲೇ ಉಂಟಾಗುತ್ತವೆ.

ಅಂದರೆ, ಪರಮಾತ್ಮನೇ ಸರ್ವಕ್ಕೂ ಕಾರಣಭೂತನು ಮತ್ತು ಅವನೇ ಸರ್ವಲೋಕ ನಿಯಾಮಕನು ಎಂಬರ್ಥವು ಹೊರಪಡುತ್ತದೆ.

**ಮಹರ್ಷಯಃ ಸಪ್ತ ಪೂರ್ವೇ, ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ, ಯೇಷಾಂ ಲೋಕ ಇಮಾಃ ಪ್ರಜಾಃ॥**

ಸಪ್ತಮಹರ್ಷಿಗಳು (a), ಬ್ರಹ್ಮಮಾನಸ ಪುತ್ರರಾದ ಸನಕಾದಿಗಳೂ, ಸ್ವಾಯಂಭುವಾದಿ ಮನುಗಳೂ (b) ಇವರೆಲ್ಲರೂ ನನ್ನ ತೇಜಸ್ಸಿನಿಂದ ಯುಕ್ತರಾಗಿರುವ ಕಾರಣ ನನ್ನ ವಿಭೂತಿಗಳೇ. ಇವರಿಂದಲೇ ಈ ಸಮಸ್ತ ಪ್ರಜೆಗಳೂ ಹುಟ್ಟಿರುವರು.

---

(a) ಸಪ್ತಮಹರ್ಷಿಗಳು:—ಮರೀಚಿ, ಅಂಗೀರಾ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಶಿಷ್ಠ.

(b) 14 ಮನುಗಳು:—ಸ್ವಾಯಂಭು, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ಇವರು ವರ್ತಮಾನ ಕಲ್ಪದ ಮನುಗಳು.

**ಏತಾಂ ವಿಭೂತಿಂ ಯೋಗಂ ಚ, ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ, ಯುಜ್ಯತೇ ನಾತ್ರ ಸಂಶಯಃ ॥೭॥**

ಯಾವನು ಈಗ ಹೇಳಿದ ನನ್ನ ವಿಭೂತಿಗಳನ್ನೂ ಮತ್ತು ಅಪಾರ ಮಹಿಮೆಯುಳ್ಳ ಯೋಗಶಕ್ತಿಯನ್ನೂ ಯಥಾರ್ಥವಾಗಿ ತಿಳಿಯುವನೋ ಅವನು ನಿಶ್ಚಲವಾದ ಸಮ್ಯಕ್ ದರ್ಶನರೂಪ ಯೋಗದಿಂದ ಯುಕ್ತನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

**ಅಹಂ ಸರ್ವಸ್ಯ ಪ್ರಭವೋ, ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ, ಬುಧಾ ಭಾವಸಮನ್ವಿತಾಃ ॥೮॥**

ನಾನು ಸಮಸ್ತ ಪ್ರಪಂಚಗಳ ಉತ್ಪತ್ತಿಗೆ ಮುಖ್ಯಕಾರಣನಾಗಿರುವೆನು, ನನ್ನಿಂದಲೇ ಸರ್ವ ಜಗತ್ತೂ ವ್ಯವಹರಿಸುತ್ತಿದೆ ಎಂಬುದಾಗಿ ಅಖಂಡ ಭಕ್ತಿಯುಳ್ಳ ಜ್ಞಾನಿಗಳು ನನ್ನನ್ನು ತಿಳಿದವರಾಗಿ ಪರಮ ಪ್ರೇಮದಿಂದ ಸದಾ ನನ್ನನ್ನೇ ಭಜಿಸುವರು.

**ಮಚ್ಚಿತ್ತಾ ಮದ್ಗತಪ್ರಾಣಾ, ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ, ತುಷ್ಯಂತಿ ಚ ರಮಂತಿ ಚ ॥೯॥**

ಈ ನನ್ನ ಪರಮಭಕ್ತರು ಸದಾ ನನ್ನಲ್ಲಿಯೇ ಚಿತ್ತವನ್ನು ಇಟ್ಟಿರುವರು (ಮಚ್ಚಿತ್ತಾ); ತಮ್ಮ ಪಂಚಪ್ರಾಣಗಳನ್ನು ನನಗಾಗಿ (ನನ್ನ ದರ್ಶನದ ಅಭಿಲಾಷೆಯಿಂದ) ಧರಿಸಿರುವರು, ಅಥವಾ ನನಗಾಗಿ ತಮ್ಮ ಪ್ರಾಣಗಳನ್ನು ಒಪ್ಪಿಸಲು ಸಿದ್ಧರಾಗಿರುವ, ಅಥವಾ ತಮ್ಮ ಪ್ರಾಣಗಳನ್ನು ನನಗೆ ಸಮರ್ಪಿಸಿರುವರಾಗಿ ಇರುವರು. (ಮದ್ಗತಪ್ರಾಣಾಃ); ನನ್ನ ಭಕ್ತಿಯ ಗುಣಪ್ರಭಾವ, ರಹಸ್ಯ, ತತ್ವವನ್ನು ಪರಸ್ಪರವಾಗಿ ಬೋಧಿಸುತ್ತಾ, ನನ್ನ ದಿವ್ಯ ಗುಣ ಪ್ರಭಾವವನ್ನು ಸಂಕೀರ್ತನ ಮಾಡುವವರಾಗಿರುವರು. ಹೀಗೆ ನಿತ್ಯವೂ ಭಜಿಸುತ್ತಾ ಸಂತುಷ್ಟರಾಗಿ ನನ್ನಲ್ಲೇ ರಮಿಸುತ್ತಿರುವರು.

**ತೇಷಾಂ ಸತತಯುಕ್ತಾನಾಂ, ಭಜತಾಂ ಪ್ರೀತಿ ಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ, ಯೇನ ಮಾಮುಪಯಾಂತಿ ತೇ॥೧೦॥**

ಈ ರೀತಿ ಪ್ರೀತಿಪೂರ್ವಕವಾಗಿ ನಿರಂತರದಲ್ಲಿಯೂ ನನ್ನನ್ನು ಅತ್ಯಂತ ಆದರದಿಂದಲೂ, ಪ್ರೀತಿಯಿಂದಲೂ ಭಜಿಸುತ್ತಿರುವ ಭಕ್ತರಿಗೆ ನನ್ನನ್ನು ಹೊಂದಲು ಯೋಗ್ಯವಾದ ಬುದ್ಧಿಯೋಗ (ಜ್ಞಾನ) ವನ್ನು ಕೊಡುವೆನು.

ಆದರಿಂದ ಅವರು ನನ್ನನ್ನು ಹೊಂದುವರು. ಅರ್ಥಾತ್, ಬುದ್ಧಿಯೋಗದಿಂದ ನನ್ನನ್ನು ತಮ್ಮ ಆತ್ಮರೂಪವಾಗಿ ಹೊಂದುವರು (ತಿಳಿಯುವರು).

ತೇಷಾಮೇವಾನುಕಂಪಾರ್ಥ, ಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ, ಜ್ಞಾನದೀಪೇನ ಭಾಸ್ವತಾ ॥೧೧॥

ಆ ಭಕ್ತರ ಅನುಗ್ರಹಕ್ಕಾಗಿ ಪ್ರಕಾಶಯುಕ್ತವಾದ ಜ್ಞಾನ ಪ್ರದೀಪದಿಂದ (ಭಕ್ತರ ಆತ್ಮಾಕಾರವಾದ ವೃತ್ತಿಯಲ್ಲಿದ್ದುಕೊಂಡು ಪರಬ್ರಹ್ಮವಾದ ನಾನು ಚಿದಾಭಾಸದಿಂದೊಡಗೂಡಿದ ಆ ಆತ್ಮಾಕಾರವೃತ್ತಿಜ್ಞಾನವೆಂಬ ದೀಪದಿಂದ) ಅವರ ಹೃದಯದಲ್ಲಿರುವ ಅಜ್ಞಾನಜನ್ಯವಾದ ಆವರಣರೂಪವಾದ ತಮಸ್ಸನ್ನು ನಾಶಮಾಡುವೆನು.

## ಅರ್ಜುನ ಉವಾಚ

ಪರಂ ಬ್ರಹ್ಮ ಪರಂ ಧಾಮ, ಪವಿತ್ರಂ ಪರಮಂ ಭವಾನ್ ।
ಪುರುಷಂ ಶಾಶ್ವತಂ ದಿವ್ಯ, ಮಾದಿದೇವಮಜಂ ವಿಭುಮ್ ॥೧೨॥

ಆಹುಸ್ತ್ವಾಮೃಷಯಃ ಸರ್ವೇ, ದೇವರ್ಷಿರ್ನಾರದಸ್ತಥಾ ।
ಅಸಿತೋ ದೇವಲೋ ವ್ಯಾಸಃ, ಸ್ವಯಂ ಚೈವ ಬ್ರವೀಷಿ ಮೇ ॥೧೩॥

ಅರ್ಜುನನು ಶ್ರೀ ಕೃಷ್ಣಪರಮಾತ್ಮನನ್ನು ಕುರಿತು ಹೀಗೆ ಹೇಳಿದನು:– ತಾವು ಪರಬ್ರಹ್ಮಸ್ವರೂಪರಾಗಿಯೂ, ಪರಮಧಾಮವಾದ ಮೋಕ್ಷಸ್ವರೂಪರಾಗಿಯೂ, ಪರಮ ಪವಿತ್ರರಾಗಿಯೂ ಇರುತ್ತೀರಿ. ಈ ಕಾರಣದಿಂದ ಎಲ್ಲಾ ಋಷಿಗಳೂ, ದೇವರ್ಷಿಯಾದ ನಾರದನೂ ಇನ್ನೂ ಅಸಿತ, ದೇವಲ, ವ್ಯಾಸರೇ ಮುಂತಾದವರೆಲ್ಲರೂ ತಮ್ಮನ್ನು ಶಾಶ್ವತ (ಅವಿನಾಶಿ) ಎಂತಲೂ, ಪುರಾಣ ಪುರುಷೋತ್ತಮನೆಂತಲೂ, ದಿವ್ಯಸ್ವರೂಪನೆಂತಲೂ, ಆದಿದೇವನೆಂತಲೂ, ಜನ್ಮರಹಿತನೆಂತಲೂ, ವಿಭುವೆಂತಲೂ ಹೇಳಿರುವರು. ಮತ್ತು ತಾವೂ ಕೂಡ ಹಾಗೆಯೇ ಹೇಳುತ್ತಿರುವಿರಿ.

ಸರ್ವಮೇತದೃತಂ ಮನ್ಯೇ, ಯನ್ಮಾಂ ವದಸಿ ಕೇಶವ ।
ನ ಹಿ ತೇ ಭಗವನ್ ವ್ಯಕ್ತಿಂ, ವಿದುರ್ದೇವಾ ನ ದಾನವಾಃ ॥೧೪॥

ಎಲೈ ಕೇಶವನೇ ! ನೀನು ಯಾವಯಾವುದನ್ನು ನನಗೆ ಹೇಳುತ್ತಿರುವಿಯೋ ಅವೆಲ್ಲವೂ ಪರಮ ಸತ್ಯವೆಂಬುದಾಗಿ ನಾನು ನಂಬುತ್ತೇನೆ.

ಎಲೈ ಭಗವಂತನೇ ! (X) ಅಂದರೆ—ಸಂಪೂರ್ಣ ಐಶ್ವರ್ಯಾದಿ ಷಡ್ಗುಣಸಂಪನ್ನನೇ ! ದೇವತೆಗಳೂ ದಾನವರೂ ಸಹ ನಿನ್ನ ಯಥಾರ್ಥಸ್ವರೂಪವನ್ನು ಅರಿಯರು.

ಸ್ವಯಮೇವಾತ್ಮನಾಽಽತ್ಮಾನಂ, ವೇತ್ಥ ತ್ವಂ ಪುರುಷೋತ್ತಮ ।
ಭೂತಭಾವನ ಭೂತೇಶ, ದೇವದೇವ ಜಗತ್ಪತೇ ॥೧೫॥

ಎಲೈ ಪುರುಷೋತ್ತಮನೇ ! ಜಗದುತ್ಪಾದಕನೇ ! ಜಗನ್ನಿಯಾಮಕನೇ ! ದೇವದೇವನೇ ! ಜಗತ್ಪತಿಯೇ ! ನಿನ್ನ ಸ್ವರೂಪವನ್ನು ನೀನೇ ತಿಳಿದಿರುವೆಯಲ್ಲದೆ ಇನ್ನಾರೂ ತಿಳಿಯರು.

ವಕ್ತುಮರ್ಹಸ್ಯಶೇಷೇಣ, ದಿವ್ಯಾ ಹ್ಯಾತ್ಮ ವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾ, ನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥೧೬॥

ಯಾವ ಯಾವ ವಿಭೂತಿಗಳಿಂದ ನೀನು ಈ ಲೋಕಗಳನ್ನು ವ್ಯಾಪಿಸಿರುವೆಯೋ ದಿವ್ಯವಾದ ನಿನ್ನ ಆ ವಿಭೂತಿಗಳನ್ನು ಸಂಪೂರ್ಣವಾಗಿ ನನಗೆ ಹೇಳುವವನಾಗು..

ಕಥಂ ವಿದ್ಯಾಮಹಂ ಯೋಗಿಸ್, ತ್ವಾಂ ಸದಾ ಪರಿಚಿಂತಯನ್ ।
ಕೇಷು ಕೇಷು ಚ ಭಾವೇಷು, ಚಿಂತ್ಯೋಽಸಿ ಭಗವನ್ಮಯಾ ॥೧೭॥

---

(X) 'ಭಗವಾನ್' ಶಬ್ದದ ಅರ್ಥವನ್ನು ಶಾಸ್ತ್ರಗಳು ಹೀಗೆ ತಿಳಿಸುತ್ತವೆ.
ಶ್ಲೋಕ॥ ಐಶ್ವರ್ಯಸ್ಯ ಸಮಗ್ರಸ್ಯ, ಧರ್ಮಸ್ಯ ಯಶಸಃ ಶ್ರಿಯಃ ।
ಜ್ಞಾನವೈರಾಗ್ಯಯೋಶ್ಚೈವ, ಷಣ್ಣಾಂ ಭಗ ಇತೀರಣಾ ॥
ಅರ್ಥ :- ೧) ಸಂಪೂರ್ಣ ಐಶ್ವರ್ಯ ೨) ಸಂಪೂರ್ಣ ಧರ್ಮ ೩) ಸಂಪೂರ್ಣ ಯಶಸ್ಸು. ೪. ಸಂಪೂರ್ಣ ಶ್ರೀ. ೫. ಸಂಪೂರ್ಣ ಜ್ಞಾನ. ೬. ಸಂಪೂರ್ಣ ವೈರಾಗ್ಯ.— ಈ ಆರರ ಹೆಸರು 'ಭಗ' ವೆನಿಸುವುದು. ಈ ಷಡ್ಗುಣವೂ ಪ್ರತಿಬಂಧರಹಿತವಾಗಿ ಯಾವನಲ್ಲಿ ನಿತ್ಯವೂ ಇರುತ್ತಿರುವುದೋ ಅವನಿಗೆ ಭಗವಂತನೆಂದು ಹೆಸರು. ಅಥವಾ 'ಭಗವಾನ್' ಶಬ್ದಕ್ಕೆ ಮತ್ತೊಂದು ವ್ಯುತ್ಪತ್ತಿಯೂ ಉಂಟು:-
ಶ್ಲೋಕ॥ ಉತ್ಪತ್ತಿಂ ಚ ವಿನಾಶಂ ಚ। ಭೂತಾನಾಮಗತಿಂ ಗತಿಮ್ ।
ವೇತ್ತಿ ವಿದ್ಯಾಮವಿದ್ಯಾಂ ಚ। ಸವಾಚ್ಯೋ ಭಗವಾನಿತಿ ॥
ಸಮಸ್ತ ಭೂತಗಳ ಉತ್ಪತ್ತಿ—ಪ್ರಳಯವನ್ನೂ, ಸದ್ಗತಿ—ದುರ್ಗತಿಯನ್ನೂ, ವಿದ್ಯೆ-ಅವಿದ್ಯೆಗಳನ್ನೂ ಯಾರು ತಿಳಿದಿರುವರೋ ಆ ಸರ್ವಜ್ಞನಾದ ಪರಮೇಶ್ವರನೇ ಭಗವಂತನೆಂದು ಹೇಳಿಸಿಕೊಳ್ಳಲು ಯೋಗ್ಯನು.

ಹೇ ಯೋಗೀಶ್ವರನಾದ ಶ್ರೀ ಕೃಷ್ಣಪರಮಾತ್ಮನೇ ! ಯಾವಾಗಲೂ ನಿನ್ನನ್ನು ಚಿಂತಿಸುತ್ತಿರುವ ನಾನು ನಿನ್ನ ಸ್ವರೂಪವನ್ನು ಯಾವ ರೀತಿಯಿಂದ ತಿಳಿದುಕೊಳ್ಳಲಿ ? ಹೇ ಭಗವನ್ ! ಯಾವ ಯಾವ ನಿನ್ನ ವಿಭೂತಿ ರೂಪಗಳಾದ ವಸ್ತುಗಳಲ್ಲಿ ನನ್ನಿಂದ ಚಿಂತಿಸಲು ನೀನು ಯೋಗ್ಯನಾಗಿರುವೆ?

ವಿಸ್ತರೇಣಾತ್ಮನೋ ಯೋಗಂ, ವಿಭೂತಿಂ ಚ ಜನಾರ್ದನ ।
ಭೂಯಃ ಕಥಯ ತೃಪ್ತಿರ್ಹಿ, ಶೃಣ್ವತೋ ನಾಸ್ತಿ ಮೇಽಮೃತಮ್॥

ಎಲೈ ಜನಾರ್ದನನೇ ! ನಿನ್ನ ಅಚಿಂತ್ಯೈಶ್ವರ್ಯಯುಕ್ತವಾದ ಯೋಗ ಮಹಿಮೆಯನ್ನೂ ಮತ್ತು ವಿಭೂತಿಯನ್ನೂ ವಿಸ್ತಾರವಾಗಿ ಪುನಃ ಹೇಳುವವನಾಗು. ಏಕೆಂದರೆ—ಈ ವರೆಗೆ ನಿನ್ನಿಂದ ಸಂಕ್ಷೇಪವಾಗಿ ಹೇಳಲ್ಪಟ್ಟ ವಿಭೂತಿ ವಿಷಯಕವಾದ ಅಮೃತಮಯವಾದ ವಚನಗಳನ್ನು ಕೇಳಿದ ನನಗೆ ತೃಪ್ತಿಯಾಗಲಿಲ್ಲ. (ಅಂದರೆ ಇನ್ನೂ ಹೆಚ್ಚಾಗಿ ಕೇಳಬೇಕೆಂಬ ಆಸೆ ಇದೆ ಎಂದರ್ಥ).

ಶ್ರೀ ಭಗವಾನುವಾಚ

ಹಂತ ತೇ ಕಥಯಿಷ್ಯಾಮಿ, ದಿವ್ಯಾ ಹ್ಯಾತ್ಮ ವಿಭೂತಯಃ ।
ಪ್ರಾಧಾನ್ಯತಃ ಕುರುಶ್ರೇಷ್ಠ, ನಾಸ್ತ್ಯಂತೋ ವಿಸ್ತರಸ್ಯ ಮೇ ॥೧೯॥

ಶ್ರೀ ಭಗವಂತನಿಂತೆಂದನು :- ಎಲೈ ಕುರು ಶ್ರೇಷ್ಠನೇ ! ಮುಖ್ಯ ಮುಖ್ಯವಾದ ನನ್ನ ದಿವ್ಯ ವಿಭೂತಿಗಳನ್ನು ಹೇಳುವೆನು. (ನೀನು ಕೇಳಿರುವಂತೆ ಸಂಪೂರ್ಣವಾಗಿ ಹೇಳಲು ಸಾಧ್ಯವಿಲ್ಲ). ಏಕೆಂದರೆ—ನನ್ನ ವಿಭೂತಿಗಳ ವಿಸ್ತಾರಕ್ಕೆ ಅಂತ್ಯವೇ ಇಲ್ಲ.

ಅಹಮಾತ್ಮಾ ಗುಡಾಕೇಶ, ಸರ್ವಭೂತಾಶಯ ಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ, ಭೂತಾನಾಮಂತ ಏವ ಚ ॥೨೦॥

ಎಲೈ ಜಿತನಿದ್ರನಾದ ಅರ್ಜುನನೇ ! ನಾನು ಸಮಸ್ತ ಭೂತಗಳ ಹೃದಯದಲ್ಲಿ ಅಂತರ್ಯಾಮಿರೂಪದಿಂದಿರುವೆನು. ಅಲ್ಲದೆ ಈ ಚರಾಚರ ಪ್ರಪಂಚಕ್ಕೆ ಆದಿಯೂ, ಮಧ್ಯವೂ ಮತ್ತು ಅಂತ್ಯವೂ ಸಹ ನಾನೇ ಆಗಿರುವೆನು.

ಆದಿತ್ಯಾನಾಮಹಂ ವಿಷ್ಣು, ರ್ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ, ನಕ್ಷತ್ರಾಣಾಮಹಂ ಶಶೀ ॥೨೧॥

(a) ದ್ವಾದಶಾದಿತ್ಯರಲ್ಲಿ ವಿಷ್ಣುವೆಂಬ ಹೆಸರಿನ ಆದಿತ್ಯನು ನಾನು. ಜ್ಯೋತಿಗಳಲ್ಲಿ ಕಿರಣವುಳ್ಳ ಸೂರ್ಯನು ನಾನು. ಮರುದ್ಗಣಗಳಲ್ಲಿ ಮರೀಚಿಯು ನಾನು. ನಕ್ಷತ್ರಗಳ ಮಧ್ಯದಲ್ಲಿ ಪ್ರಕಾಶಿಸುತ್ತಿರುವ ಚಂದ್ರನೂ ನಾನೇ ಆಗಿರುವೆನು.

**ವೇದಾನಾಂ ಸಾಮವೇದೋಽಸ್ಮಿ, ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ, ಭೂತಾನಾಮಸ್ಮಿ ಚೇತನಾ ॥೨೨॥**

ವೇದಗಳಲ್ಲಿ ಸಾಮವೇದವು ನಾನು. ಸರ್ವದೇವತೆಗಳಲ್ಲಿ ಇಂದ್ರನುನಾನು. ಇಂದ್ರಿಯಗಳೊಳಗೆ ಮನಸ್ಸು ನಾನು. ಪ್ರಾಣಿಗಳಲ್ಲಿ ಜ್ಞಾನಶಕ್ತಿ (ಜೀವನ ಶಕ್ತಿ ಅಥವಾ ಚೇತನವು) ಯೂ ನಾನಾಗಿರುವೆನು.

**ರುದ್ರಾಣಾಂ ಶಂಕರಶ್ಚಾಸ್ಮಿ, ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ, ಮೇರುಃ ಶಿಖರಿಣಾಮಹಮ್ ॥೨೩॥**

(b) ಏಕಾದಶರುದ್ರರಲ್ಲಿ ಶಂಕರನಾಮಕ ರುದ್ರನು ನಾನು. ಯಕ್ಷ ರಾಕ್ಷಸರಲ್ಲಿ ಕುಬೇರನು ನಾನು. ಅಷ್ಟವಸುಗಳಲ್ಲಿ(c)ಅಗ್ನಿಯು ನಾನು. ಪರ್ವತಗಳಲ್ಲಿ ಮೇರು ಪರ್ವತವೂ ನಾನೇ ಆಗಿರುವೆನು.

**ಪುರೋಧಸಾಂ ಚ ಮುಖ್ಯಂ ಮಾಂ, ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ, ಸರಸಾ ಮಸ್ಮಿ ಸಾಗರಃ ॥೨೪॥**

ಎಲೈ ಪಾರ್ಥನೇ! ಪುರೋಹಿತರುಗಳಲ್ಲಿ ಮುಖ್ಯನಾದ ಬೃಹಸ್ಪತಿಯು ನಾನೇ ಎಂದು ತಿಳಿಯುವನಾಗು. ಸೇನಾಪತಿಗಳಲ್ಲಿ ಮುಖ್ಯನಾದ ಪರಮೇಶ್ವರನ ಪುತ್ರನಾದ ಕಾರ್ತಿಕೇಯನು ನಾನು. ಜಲಾಶಯಗಳಲ್ಲಿ ಸಮುದ್ರವು ನಾನೇ ಆಗಿರುವೆನು.

---

(a) ದ್ವಾದಶಾದಿತ್ಯರು:—ಧಾತಾ, ಮಿತ್ರ, ಅರ್ಯಮಾ, ಇಂದ್ರ, ವರುಣ, ಅಂಶ, ಭಗ, ವಿವಸ್ವಂತ, ಪೂಷಾ, ಸವಿತಾ, ತ್ವಷ್ಟಾ ಮತ್ತು ವಿಷ್ಣು—ಇವರು ಅದಿಯ ಪುತ್ರರು.

(b) ಏಕಾದಶ ರುದ್ರರು:—ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದೀ, ರೈವತ, ಮೃಗವ್ಯಾಧ, ಶರ್ವ ಮತ್ತು ಕಪಾಲೀ ಇವುಗಳ ಪೈಕಿ ಯಾವುದೋ ಒಂದು ನಾಮವು ಶಂಕರಪರವಾಗಿರಬೇಕು.

(c) ಅಷ್ಟವಸುಗಳು:—ಧರ, ಧ್ರುವ, ಸೋಮ, ಅಹಃ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ.

**ಮಹರ್ಷೀಣಾಂ ಭೃಗುರಹಂ, ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ, ಸ್ಥಾವರಾಣಾಂ ಹಿಮಾಲಯಃ॥**

ಮಹರ್ಷಿಗಳಲ್ಲಿ ಭೃಗುಮಹರ್ಷಿಯು ನಾನು. ವಾಣಿಗಳಲ್ಲಿ ಏಕಾಕ್ಷರವಾದ ಓಂಕಾರವು ನಾನು. ಯಜ್ಞಗಳಲ್ಲಿ ಜಪಯಜ್ಞವೂ, ಸ್ಥಾವರ ಪದಾರ್ಥಗಳಲ್ಲಿ ಹಿಮಾಲಯವೂ ನಾನೇ ಆಗಿರುವೆನು.

**ಅಶ್ವತ್ಥಃ ಸರ್ವವೃಕ್ಷಾಣಾಂ, ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ, ಸಿದ್ಧಾನಾಂ ಕಪಿಲೋ ಮುನಿಃ ॥೨೬॥**

ಎಲ್ಲಾ ವೃಕ್ಷಗಳಲ್ಲಿ ಅಶ್ವತ್ಥವೃಕ್ಷವೂ, ದೇವರ್ಷಿಗಳಲ್ಲಿ ನಾರದನೂ, ಗಂಧರ್ವರಲ್ಲಿ ಚಿತ್ರರಥನೆಂಬ ಗಂಧರ್ವನೂ, ಸಿದ್ಧರಲ್ಲಿ ಕಪಿಲಮುನಿಯೂ ನಾನಾಗಿರುವೆನು.

**ಉಚ್ಚೈಃಶ್ರವಸಮಶ್ವಾನಾಂ, ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ, ನರಾಣಾಂ ಚ ನರಾಧಿಪಮ್ ॥೨೭॥**

ಕುದುರೆಗಳಲ್ಲಿ ಕ್ಷೀರಸಮುದ್ರದ ಮಥನಕಾಲದಲ್ಲಿ ಅಮೃತದೊಂದಿಗೆ ಹುಟ್ಟಿರುವ ಉಚ್ಚೈಃಶ್ರವಸ್ಸೆಂಬ ಕುದುರೆಯೂ, ಗಜೇಂದ್ರ (ಆನೆ)ಗಳಲ್ಲಿ ಐರಾವತವೆಂಬ ಇಂದ್ರನ ಆನೆಯೂ,ಮನುಷ್ಯರಲ್ಲಿ ರಾಜನೂ ಸಹ ನಾನೆಂಬುದಾಗಿ ತಿಳಿ.

**ಆಯುಧಾನಾಮಹಂ ವಜ್ರಂ, ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ, ಸರ್ಪಾಣಾಮಸ್ಮಿ ವಾಸುಕಿಃ ॥೨೮॥**

ಆಯುಧಗಳಲ್ಲಿ ಇಂದ್ರನ ಆಯುಧವಾದ ವಜ್ರಾಯುಧವೂ, ಗೋವುಗಳಲ್ಲಿ ಕಾಮಧೇನುವೂ, ಪ್ರಜೋತ್ಪತ್ತಿಗೆ ಹೇತುವಾದ ಕಂದರ್ಪನಾದ ಕಾಮದೇವನೂ, ಸರ್ಪಗಳಲ್ಲಿ ವಾಸುಕಿಯೂ ನಾನಾಗಿರುವೆನು.

**ಅನಂತಶ್ಚಾಸ್ಮಿ ನಾಗಾನಾಂ, ವರುಣೋಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ, ಯಮಃ ಸಂಯಮತಾಮಹಮ್ ॥**

ನಾಗಗಳಲ್ಲಿ (X) ಅನಂತನೂ, ಜಲಜಂತುಗಳಲ್ಲಿ ವರುಣನೂ, ಪಿತೃಗಳಲ್ಲಿ ಅರ್ಯಮಾ ಎಂಬ ಹೆಸರುಳ್ಳ ಪಿತೃವೂ, ಸಂಯಮ (ನಿರೋಧ) ಮಾಡುವವುಗಳಲ್ಲಿ ಯಮ ವೆಂಬ ಸಾಧನೆಯೂ ಅಥವಾ ಶಾಸನ (ದಂಡವಿಧಾನ) ಮಾಡತಕ್ಕವರಲ್ಲಿ ಯಮರಾಜನೂ ನಾನಾಗಿದ್ದೇನೆ.

---

(x) ಮನುಷ್ಯಾಕಾರ್ಯವಾಗಿದ್ದರೂ ಹೆಡೆಬಾಲವಿರುವ ಹಾವುಗಳಿಗೆ ನಾಗಗಳೆಂದು ಹೆಸರು.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ, ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ, ವೈನತೇಯಶ್ಚ ಪಕ್ಷಿಣಾಮ್॥**

ದೈತ್ಯರಲ್ಲಿ ಪ್ರಹ್ಲಾದನೂ, ವಶಮಾಡಿಕೊಳ್ಳುವವರಲ್ಲಿ ಕಾಲವೂ, ಮೃಗಗಳಲ್ಲಿ ಸಿಂಹವೂ, ಪಕ್ಷಿಗಳಲ್ಲಿ ಗರುಡನೂ ನಾನಾಗಿರುವೆನು.

**ಪವನಃ ಪವತಾಮಸ್ಮಿ, ರಾಮಃ ಶಸ್ತ್ರಭೃತಾ ಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ, ಸ್ರೋತಸಾಮಸ್ಮಿ ಜಾಹ್ನವೀ ॥೩೧॥**

ಪವಿತ್ರಮಾಡುವ ಪದಾರ್ಥಗಳಲ್ಲಿ ವಾಯುವೂ, ಶಸ್ತ್ರಧಾರಿಗಳಲ್ಲಿ ಕೋದಂಡಪಾಣಿಯಾದ ಶ್ರೀರಾಮಚಂದ್ರನೂ, ಮತ್ಸ್ಯಗಳಲ್ಲಿ ಮಕರವೆಂಬ ತಿಮಿಂಗಿಲವೂ, ನದಿಗಳಲ್ಲಿ ಗಂಗಾನದಿಯೂ ನಾನಾಗಿರುವೆನು.

**ಸರ್ಗಾಣಾಮಾದಿರಂತಶ್ಚ, ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ, ವಾದಃ ಪ್ರವದತಾ ಮಹಮ್ ॥೩೨॥**

ಎಲೈ ಅರ್ಜುನನೇ! ಆಕಾಶಾದಿ ಭೂತಗಳ ಮತ್ತು ಸರ್ವಪ್ರಾಣಿಗಳ ಅಂದರೆ ಜಡ–ಚೇತನವಾದ ಸಮಸ್ತ ಭೂತಗಳ ಸೃಷ್ಟಿಯ ಆದಿ ಮಧ್ಯ ಅಂತವೂ, ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯೂ, ವಾದ ಜಲ್ಪ ವಿತಂಡ (X)ವೆಂಬ ತ್ರಿವಿಧವಾದಗಳಲ್ಲಿ ಗುರು ಶಿಷ್ಯ ಸಂವಾದದಿಂದ ಕೇವಲ ತತ್ವನಿರ್ಣಯಕ್ಕಾಗಿ ಮಾಡಲ್ಪಡುವ ಏಕಾರ್ಥ ವಾದವು ನಾನಾಗಿರುವೆನು.

**ಅಕ್ಷರಾಣಾಮಕಾರೋಽಸ್ಮಿ, ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ, ಧಾತಾಹಂ ವಿಶ್ವತೋ ಮುಖಃ॥೩೩॥**

ಅಕ್ಷರಮಾಲೆಯಲ್ಲಿ ಪ್ರಥಮಾಕ್ಷರವಾದ ಅಕಾರವೂ, ಸಮಾಸಗಳಲ್ಲಿ ದ್ವಂದ್ವಸಮಾಸವೂ, ಕ್ಷಯವಿಲ್ಲದಂತಹ ಕಾಲವೂ, ಕರ್ಮಫಲವನ್ನು ವಿಧಿಸುವವರಲ್ಲಿ ಬ್ರಹ್ಮನೂ ನಾನಾಗಿರುವೆನು.

**ಮೃತ್ಯುಃ ಸರ್ವಹರಶ್ಚಾಹ, ಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ, ಸ್ಮೃತಿರ್ಮೇಧಾ ಧೃತಿಃ ಕ್ಷಮಾ॥**

---

(x) ಕೇವಲ ಸ್ವಮತವನ್ನು ಸ್ಥಾಪಿಸುವುದು ವಾದ, ಅದೇ ಪರಮತ ಖಂಡನೆಯ ಪೂರ್ವಕವಾದರೆ ಜಲ್ಪ, ಸ್ವಮತ ಸ್ಥಾಪನೆ ಮಾಡುವ ಸಾಮರ್ಥ್ಯವಿಲ್ಲದಿದ್ದರೂ ಪರಮತವನ್ನು ದೂಷಿಸುವುದು ವಿತಂಡ.

ಸರ್ವಸಂಹಾರಕನಾದ ಮೃತ್ಯುವೂ, ಉತ್ಪನ್ನವಾಗುವವುಗಳಲ್ಲಿ ಉತ್ಪತ್ತಿಯೂ, ಸ್ತ್ರೀಯರಲ್ಲಿ ಕೀರ್ತಿಃ, ಶ್ರೀಃ, ವಾಕ್, ಸ್ಮೃತಿಃ, ಮೇಧಾ, ಧೃತಿ, ಕ್ಷಮಾ ಇಲ್ಲವೂ ನಾನೇ ಆಗಿರುವೆನು.

**ಬೃಹತ್ಸಾಮ ತಥಾ ಸಾಮ್ನಾಂ, ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಂ, ಋತೂನಾಂ ಕುಸುಮಾಕರಃ॥**

ಸಾಮವೇದದಲ್ಲಿ ಬೃಹತ್ಸಾಮವೂ, ಛಂದಸ್ಸುಗಳಲ್ಲಿ ಗಾಯತ್ರಿ ಛಂದಸ್ಸೂ, ಮಾಸಗಳಲ್ಲಿ ಮಾರ್ಗಶೀರ್ಷವೂ, ಋತುಗಳಲ್ಲಿ ವಸಂತ ಋತುವೂ ನಾನಾಗಿರುವೆನು.

**ದ್ಯೂತಂ ಛಲಯತಾಮಸ್ಮಿ, ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ, ಸತ್ತ್ವಂ ಸತ್ತ್ವವತಾಮಹಮ್ ॥**

ಕಪಟ ವಿದ್ಯೆಗಳಲ್ಲಿ ದ್ಯೂತವೂ, ವರ್ಚಸ್ವಿಗಳಲ್ಲಿ ವರ್ಚಸ್ಸೂ, ಜಯವೂ ಉದ್ಯಮವೂ (ಪ್ರಯತ್ನವಿಶೇಷವೂ), ಸಾತ್ವಿಕರಲ್ಲಿರುವ ಸಾತ್ವಿಕಗುಣವೂ ನಾನಾಗಿರುವೆನು.

**ವೃಷ್ಣೀನಾಂ ವಾಸುದೇವೋಽಸ್ಮಿ, ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ, ಕವೀನಾಮುಶನಾ ಕವಿಃ ॥೩೭॥**

ವೃಷ್ಣಿಕುಲದಲ್ಲಿ ವಾಸುದೇವನೂ, ಪಾಂಡವರಲ್ಲಿ ಅರ್ಜುನನೂ, ಮುನಿಗಳಲ್ಲಿ ವ್ಯಾಸನೂ, ಕವಿಗಳಲ್ಲಿ ಶುಕ್ರಾಚಾರ್ಯನೂ ನಾನೇ ಆಗಿರುವೆನು.

**ದಂಡೋ ದಮಯತಾಮಸ್ಮಿ, ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ, ಜ್ಞಾನಂ ಜ್ಞಾನವತಾಮಹಮ್॥**

ಶಿಕ್ಷಿಸತಕ್ಕವರ ದಂಡವೂ, ಗೆಲ್ಲುವವರ ನೀತಿಯೂ, ಗೋಪ್ಯವಾದವುಗಳಲ್ಲಿ ಮೌನವೂ, ಜ್ಞಾನಿಗಳ ಜ್ಞಾನವೂ ನಾನೇ ಆಗಿರುವೆನು.

**ಯಚ್ಚಾಪಿ ಸರ್ವಭೂತಾನಾಂ, ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್॥೩೯॥**

ಎಲೈ ಅರ್ಜುನನೇ ! ಸಮಸ್ತ ಪ್ರಾಣಿಗಳ ಉತ್ಪತ್ತಿಗೆ ಯಾವ ಕಾರಣವಿರುವುದೋ ಅದು ನಾನು. ನನಗಿಂತ ಭಿನ್ನವಾದ ಚರಾಚರ ಪದಾರ್ಥಗಳು ಯಾವುದೂ ಇರುವುದಿಲ್ಲ.

ನಾಂತೋಽಸ್ತಿ ಮಮ ದಿವ್ಯಾನಾಂ, ವಿಭೂತೀನಾಂ ಪರಂತಪ ।
ಏಷ ತೂದ್ದೇಶತಃ ಪ್ರೋಕ್ತೋ, ವಿಭೂತೇರ್ವಿಸ್ತರೋ ಮಯಾ ॥

ಎಲೈ ಶತ್ರುತಾಪಕನಾದ ಅರ್ಜುನನೇ! ನನ್ನ ದಿವ್ಯವಾದ ವಿಭೂತಿಗಳಿಗೆ ಅಂತವಿಲ್ಲ. (ಅಂದರೆ–ನನ್ನ ವಿಭೂತಿಗಳು ಅನಂತ, ಅಪಾರವಾಗಿವೆ). ನನ್ನಿಂದ ಈಗ ವಿಸ್ತಾರವಾಗಿ ಹೇಳಲ್ಪಟ್ಟ ಈ ವಿಭೂತಿಗಳೂ ಸಹ ಸಂಕ್ಷೇಪವಾಗಿಯೇ ಇರುವುವು.

ಯದ್ಯದ್ವಿಭೂತಿಮತ್ಸತ್ತ್ವಂ, ಶ್ರೀಮದೂರ್ಜಿತ ಮೇವ ವಾ ।
ತತ್ತದೇವಾವಗಚ್ಛ ತ್ವಂ, ಮಮ ತೇಜೋಂಽಶ ಸಂಭವಮ್ ॥೪೧॥

ಜಗತ್ತಿನಲ್ಲಿ ಯಾವಯಾವ ಪದಾರ್ಥಗಳು ವಿಭೂತಿಯುಕ್ತವಾಗಿಯೂ, ಸಾರವುಳ್ಳದ್ದಾಗಿಯೂ, ಐಶ್ವರ್ಯಯುಕ್ತವಾಗಿಯೂ, ಶಕ್ತಿಯುಕ್ತವಾಗಿಯೂ, ಇರುವುವೋ ಅವೆಲ್ಲವೂ ನನ್ನ ಪ್ರಭಾವದಿಂದಲೇ ಹುಟ್ಟಿರುವುವೆಂಬುದಾಗಿ ತಿಳಿಯುವನಾಗು.

ಅಥವಾ ಬಹುನೈತೇನ, ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನ, ಮೇಕಾಂಶೇನ ಸ್ಥಿತೋ ಜಗತ್ ॥೪೨॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ವಿಭೂತಿಯೋಗೋನಾಮ
ದಶಮೋಽಧ್ಯಾಯಃ

ಎಲೈ ಅರ್ಜುನಾ! ಈರೀತಿಯಾಗಿ ಅನೇಕ ಬಗೆಯಾಗಿ ನನ್ನ ವಿಭೂತಿಗಳನ್ನು ತಿಳಿಯುವುದರಿಂದ ನಿನಗೇನು ಪ್ರಯೋಜನ? ಒಟ್ಟನಲ್ಲಿ ಹೇಳುವುದಾದರೆ, ನಾನು ಈ ಜಗತ್ತೆಲ್ಲವನ್ನೂ ಏಕಾಂಶದಿಂದ ವ್ಯಾಪಿಸಿರುವೆನೆಂದು ತಿಳಿ.

ಎಲೈ ಅರ್ಜುನಾ! (ಆದಿತ್ಯಾನಾಮಹಂವಿಷ್ಣುಃ) ಇತ್ಯಾದಿ ವಚನಗಳಿಂದ ಮಂದಾಧಿಕಾರಿಗಳ ಧ್ಯಾನಕ್ಕಾಗಿ ಹೇಳಿರುವೆನು. ಇಂಥಾ ಬಹು ಬಗೆಯಾದ ವಿಭೂತಗಳ ಜ್ಞಾನದಿಂದ ಉತ್ತಮಕಾರಿಯಾದ ನಿನಗೇನು

ಪ್ರಯೋಜನ ? ಈ ಬಗೆಬಗೆಯ ವಿಭೂತಿಗಳಿಂದ ನಿನಗೆ ಸಂಪೂರ್ಣಜ್ಞಾನ ವಾಗುವುದಿಲ್ಲ. ಆದ್ದರಿಂದ ಪರಮಾತ್ಮದೇವನಾದ ನಾನು ಈ ಸರ್ವಜಗ ದ್ರೂಪದಿಂದ ತೋರಿ ವ್ಯಾಪಿಸಿಕೊಂಡು ಮಿಕ್ಕುಮೀರಿರುವೆನೆಂದು ತಿಳಿಯು ವವನಾಗು. ನನಗಿಂತಲೂ ಅನ್ಯವಾದದ್ದು ಯಾವುದೂ ಇಲ್ಲ.

ಇಂತು ಶ್ರೀ ಮದ್ಭಗವದ್ಗೀತೆಯಲ್ಲಿ ವಿಭೂತಿಯೋಗವೆಂಬ
ಹತ್ತನೆಯ ಅಧ್ಯಾಯವು ಸಂಪೂರ್ಣವು.



# ಅಥ ವಿಶ್ವರೂಪ ದರ್ಶನಯೋಗೋನಾಮ ಏಕಾದಶೋಽಧ್ಯಾಯಃ

## ಅರ್ಜುನ ಉವಾಚ

ಮದನುಗ್ರಹಾಯ ಪರಮಂ, ಗುಹ್ಯಮಧ್ಯಾತ್ಮ ಸಂಜ್ಞಿತಂ ।
ಯತ್ತ್ವಯೋಕ್ತಂ ವಚಸ್ತೇನ, ಮೋಹೋಽಯಂ ವಿಗತೋ ಮಮ॥

ಅರ್ಜುನನಿಂತೆಂದನು :– ನನ್ನ ಅನುಗ್ರಹಕ್ಕಾಗಿ ಅತ್ಯಂತ ರಹಸ್ಯ ವಾದ, ಆತ್ಮ ಅನಾತ್ಮ ವಿವೇಕದಿಂದ ಕೂಡಿದ, ಅಧ್ಯಾತ್ಮ ವಿದ್ಯಾ ಎಂಬ ನಾಮದಿಂದ ಕರೆಯಲ್ಪಡುವ ಯಾವ ಪರಮಸತ್ಯವಾದ ಅಮೃತವಚನ ಗಳುಂಟೋ ಅವು ನಿಮ್ಮಿಂದ ಉಪದೇಶಿಸಲ್ಪಟ್ಟು ಅವುಗಳಿಂದ ನನ್ನ ಅವಿವೇ ಕವು ನಾಶವಾಯಿತು.

ಭವಾಪ್ಯಯೌ ಹಿ ಭೂತಾನಾಂ, ಶ್ರುತೌ ವಿಸ್ತರಶೋಮಯಾ ।
ತ್ವತ್ತಃ ಕಮಲಪತ್ರಾಕ್ಷ, ಮಾಹಾತ್ಮ್ಯಮಪಿ ಚಾವ್ಯಯಮ್ ॥೨॥

ಎಲೈ ಕಮಲಪತ್ರಾಕ್ಷನೇ ! ನಾನು ತಮ್ಮಿಂದ ಪ್ರಾಣಿಗಳ ಉತ್ಪತ್ತಿ ಯನ್ನೂ ಲಯವನ್ನೂ ಮತ್ತು ತಮ್ಮ ಅವ್ಯಯವಾದ ಮಾಹಾತ್ಮ್ಯವನ್ನೂ (ಶ್ರದ್ಧೆಯಿಂದ) ಕೇಳಿದೆನು.

**ಏವಮೇತದ್ಯಥಾತ್ಥತ್ವಂ, ಮಾತ್ಮಾನಂ ಪರಮೇಶ್ವರ !**
**ದ್ರಷ್ಟುಮಿಚ್ಛಾಮಿ ತೇ ರೂಪ, ಮೈಶ್ವರಂ ಪುರುಷೋತ್ತಮ ॥೩॥**

ಎಲೈ ಪರಮೇಶ್ವರನೇ ! ನೀನು ನಿನ್ನ ಸ್ವರೂಪವನ್ನು ಹೇಗೆ ಹೇಳಿದ್ದೀಯೋ ಅದು ಯಥಾರ್ಥವಾಗಿಯೂ ಹಾಗೆಯೇ ಇರುವುದು. (ಇದರಲ್ಲಿ ನನಗೆ ಲೇಶಮಾತ್ರವೂ ಸಂಶಯವಿಲ್ಲ.) ಆದರೂ ಎಲೈ ಪುರುಷೋತ್ತಮನೇ ಜ್ಞಾನ ಐಶ್ವರ್ಯ ಶಕ್ತಿ ಬಲ ವೀರ್ಯ ತೇಜ ಮಹಿಮೆ ಮುಂತಾದವುಗಳಿಂದ ಕೂಡಿದ ನಿನ್ನ ಪರಮೈಶ್ವರ್ಯಯುಕ್ತವಾದ ಸ್ವರೂಪವನ್ನು ನೋಡಲು ಅಪೇಕ್ಷಿಸುತ್ತೇನೆ.

**ಮನ್ಯಸೇ ಯದಿ ತಚ್ಛಕ್ಯಂ, ಮಯಾ ದ್ರಷ್ಟುಮಿತಿ ಪ್ರಭೋ !**
**ಯೋಗೇಶ್ವರ ತತೋ ಮೇ ತ್ವಂ, ದರ್ಶಯಾತ್ಮಾನಮವ್ಯಯಮ್ ॥**

ಎಲೈ ಪ್ರಭುವೇ ! ನಿನ್ನ ಆ ಮಹದೈಶ್ವರ್ಯಯುಕ್ತವಾದ ಸ್ವರೂಪವು ನನ್ನಿಂದ ನೋಡಲು ಶಕ್ಯವೆಂಬುದಾಗಿ ನಿನಗೆ ಅಭಿಪ್ರಾಯವಿದ್ದರೆ (ಅಂದರೆ, ನಿನ್ನ ರೂಪವನ್ನು ನಾನು ನೋಡಬಹುದಾದರೆ ಮತ್ತು ಅದನ್ನು ನೋಡಲು ನಾನು ಯೋಗ್ಯನು(ಅಧಿಕಾರಿ)ಎಂದು ನೀನು ತಿಳಿದರೆ ಓ ಯೋಗೀಶ್ವರನೇ ! ನಿನ್ನ ಅಕ್ಷಯವಾದ ಮತ್ತು ಹಿಂದೆ ತಿಳಿಸಿದ ಮಹಾ ಮಹಾ ವಿಭೂತಿಯುಕ್ತವಾದ ಸ್ವರೂಪವನ್ನು ನನಗೆ ಕೃಪೆಮಾಡಿ ತೋರಿಸು.

ಶ್ರೀ ಭಗವಾನುವಾಚ

**ಪಶ್ಯ ಮೇ ಪಾರ್ಥ ರೂಪಾಣಿ, ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ, ನಾನಾವರ್ಣಾಕೃತೀನಿ ಚ ॥೫॥**

ಶ್ರೀ ಭಗವಂತನು ಅರ್ಜುನನನ್ನು ಕುರಿತು ಇಂತೆಂದನು :–

ಎಲೈ ಪಾರ್ಥನೇ ! ಅನೇಕ ವಿಧವಾದ ಆಕಾರವೂ ಮತ್ತು ವರ್ಣಗಳೂ ಇರತಕ್ಕ, ದೇದೀಪ್ಯಮಾನವಾದವುಗಳಾಗಿರುವ ಮತ್ತು ನಾನಾ ಪ್ರಕಾರವಾಗಿರುವ ನನ್ನ ಅದ್ಭುತವಾದ ರೂಪವನ್ನು ನೂರಾರು ರೀತಿಗಳಲ್ಲಿ ಹಾಗೆಯೇ ಸಾವಿರಾರು ರೀತಿಗಳಲ್ಲಿ ನೋಡು.

**ಪಶ್ಯಾದಿತ್ಯಾನ್ವಸೂನ್ರುದ್ರಾ, ನಶ್ವಿನೌ ಮರುತಸ್ತಥಾ । ॥೬॥**
**ಬಹೂನ್ಯದೃಷ್ಟಪೂರ್ವಾಣಿ, ಪಶ್ಯಾಶ್ಚರ್ಯಾಣಿ ಭಾರತ**

ಎಲೈ ಭರತ ಕುಲೋತ್ಪನ್ನನೇ ! ನೀನು ನನ್ನಲ್ಲಿ ದ್ವಾದಶಾದಿತ್ಯರನ್ನೂ, ಅಷ್ಟವಸುಗಳನ್ನೂ, ಏಕಾದಶ ರುದ್ರರನ್ನೂ, ಅಶ್ವಿನೀಕುಮಾರರನ್ನೂ, ಮರುದ್ಗಣಗಳನ್ನೂ ನೋಡು. ಅಲ್ಲದೇ ನೀನು ಯಾವಾಗಲೂ ನೋಡದಿರುವ ಆಶ್ಚರ್ಯಕರವಾದ ಅನೇಕ ರೂಪಗಳನ್ನು ನೋಡು.

**ಇಹೈಕಸ್ಥಂ ಜಗತ್ ಕೃತ್ಸ್ನಂ, ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ (a), ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥೭॥**

ನಿದ್ರೆಯನ್ನು ಜಯಿಸಿರುವ ಹೇ ಅರ್ಜುನನೇ ! ಇಲ್ಲಿ ನನ್ನ ಈ ದೇಹವೊಂದರಲ್ಲಿಯೇ ಸಂಪೂರ್ಣವಾದ ಚರಾಚರ ಜಗತ್ತನ್ನು ಈಗಲೇ ನೀನು ನೋಡು. ಅಲ್ಲದೇ ನೀನು ಇನ್ನೂ ಬೇರೆಯಾವುದನ್ನು ನೋಡಲು ಇಚ್ಛಿಸುವೆಯೋ ಅದನ್ನೂ ಸಹನೋಡು. (ಯುದ್ಧದ ಫಲವಾದ ಜಯಾಪಜಯುಗಳನ್ನೂ ಸಹ ನೋಡು.

**ನ ತು ಮಾಂ ಶಕ್ಯಸೇ ದ್ರಷ್ಟುಂ, ಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ, ಪಶ್ಯ ಮೇ ಯೋಗಮೈಶ್ವರಮ್ ॥೮॥**

ಆದರೆ ಈ ನಿನ್ನ ಚರ್ಮಚಕ್ಷುವಿನಿಂದಲೇ ಮಹತ್ತಾದ ವಿಭೂತಿಗಳಿಂದ ಕೂಡಿದ ನನ್ನನ್ನು ನೋಡಲಾರೆ. ಆದಕಾರಣ ನಾನು ನಿನಗೆ ದಿವಚ್ಯಕ್ಷುವನ್ನು (X) ಕೊಡುವೆನು. ಅದರ ಮೂಲಕ ವಿಭೂತಿಯುಕ್ತವಾಗಿಯೂ ಅಚಿಂತ್ಯೈಶ್ವರ್ಯಯುಕ್ತವಾಗಿಯೂ ಇರುವ ನನ್ನ ಯೋಗಮಹಿಮೆಯನ್ನು ನೋಡು.

### ಸಂಜಯ ಉವಾಚ

**ಏವಮುಕ್ತ್ವಾ ತತೋ ರಾಜನ್, ಮಹಾ ಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ, ಪರಮಂ ರೂಪಮೈಶ್ವರಮ್ ॥೯॥**

ಸಂಜಯನು ಧೃತರಾಷ್ಟ್ರನನ್ನು ಕುರಿತು ಇಂತೆಂದನು :- ಎಲೈ ರಾಜನೇ ! ಮಹಾ ಯೋಗೇಶ್ವರನಾದ ಶ್ರೀ ಹರಿಯು ಈ ರೀತಿಯಾಗಿ ಹೇಳಿ

---

(a) ಗುಡಾಕ ಎಂದರೆ ನಿದ್ರೆಗೆ ಹೆಸರು. ಅದನ್ನು ತನ್ನ ವಶಗೈದವನಿಗೆ ಗುಡಾಕೇಶನೆಂದು ಹೆಸರು- (ಜಿತನಿದ್ರನು)

(b) ಅಪ್ರಾಕೃತ ನೇತ್ರ, ಅಲೌಕಿಕ ದೃಷ್ಟಿ.

17

ದವನಾಗಿ ತದನಂತರ ಪರಮೈಶ್ವರ್ಯಯುಕ್ತನಾದ ತನ್ನ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದನು.

**ಅನೇಕವಕ್ತ್ರನಯನ, ಮನೇಕಾದ್ಭುತ ದರ್ಶನಮ್ ।**
**ಅನೇಕದಿವ್ಯಾಭರಣಂ, ದಿವ್ಯಾನೇಕೋದ್ಯತಾಯುಧಮ್ ॥೧೦॥**

ಹೀಗೆ ತೋರಿಸಿದ ವಿಶ್ವರೂಪದಲ್ಲಿ ಅನೇಕ ಮುಖಗಳೂ, ಅನೇಕ ನೇತ್ರಗಳೂ, ಆಶ್ಚರ್ಯಕರಗಳಾದ ಅನೇಕ ದೃಶ್ಯಗಳೂ ಮತ್ತು ವಸ್ತುಗಳೂ, ಅಲೌಕಿಕಗಳಾದ ಅನೇಕ ಆಭರಣಗಳೂ, ಪ್ರಹಾರಮಾಡಲು ಎತ್ತಿರುವ ಅಲೌಕಿಕವಾದ ಅನೇಕ ಆಯುಧಗಳೂ ಇದ್ದವು.

**ದಿವ್ಯಮಾಲಾಂಬರಧರಮ್, ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವ, ಮನಂತಂ ವಿಶ್ವತೋ ಮುಖಮ್ ॥**

ದಿವ್ಯವಾದ ಅನೇಕ ಮಾಲೆಗಳನ್ನೂ, ದಿವ್ಯವಸ್ತ್ರಗಳನ್ನೂ, ದಿವ್ಯವಾದ ಗಂಧಾನುಲೇಪನವನ್ನೂ, ಸರ್ವಥಾ ಆಶ್ಚರ್ಯಮಯವಾಗಿರುವ ಅದ್ಭುತ ವಸ್ತುಗಳನ್ನೂ, ಸೀಮಾರಹಿತವೂ ಸರ್ವತ್ರ ಮುಖಗಳುಳ್ಳದ್ದಾಗಿಯೂ ಇರುವ ತನ್ನ ರೂಪವನ್ನು ತೋರಿಸಿದನು.

**ದಿವಿ ಸೂರ್ಯಸಹಸ್ರಸ್ಯ, ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾ, ದ್ಭಾಸಸ್ತಸ್ಯ ಮಹಾತ್ಮನಃ ॥೧೨॥**

ಆಕಾಶದಲ್ಲಿ ಸಾವಿರ ಸೂರ್ಯರು ಏಕಕಾಲದಲ್ಲಿ ಒಂದುವೇಳೆ ಉದಯವಾದರೆ ಎಂತಹ ಪ್ರಕಾಶವುಂಟಾಗುವುದೋ ಅಂತಹ ಪ್ರಕಾಶವು ಆ ಮಹಾತ್ಮನಾದ ವಿಶ್ವರೂಪನ ಪ್ರಕಾಶಕ್ಕೆ ( ಒಂದುವೇಳೆ ) ಸಾಮ್ಯವಾದೀತು !! ಅಂದರೆ ಅಚಿಂತ್ಯ ಪ್ರಭೆಯಿಂದ ಕೂಡಿತ್ತೆಂಬ ಭಾವ.

**ತತ್ರೈಕಸ್ಥಂ ಜಗತ್ ಕೃತ್ಸ್ನಂ, ಪ್ರವಿಭಕ್ತ ಮನೇಕಧಾ ।**
**ಅಪಶ್ಯದ್ದೇವದೇವಸ್ಯ, ಶರೀರೇ ಪಾಂಡವ ಸ್ತದಾ ॥೧೩॥**

ಆಗ ಒಂದೇ ಸ್ಥಳದಲ್ಲಿ ಅನೇಕ ವಿಭಾಗಗಳನ್ನೊಳಗೊಂಡಿರುವ ಸಮಸ್ತ ಜಗತ್ತನ್ನು ಪಾಂಡುಪುತ್ರನಾದ ಭಾಗ್ಯಶಾಲಿಯಾದ ಅರ್ಜುನನು ದೇವದೇವನಾದ ವಿಶ್ವಾಕಾರನಾದ ಆ ಭಗವಂತನ ಶರೀರದಲ್ಲಿ ನೋಡಿದನು.

**ತತಃ ಸ ವಿಸ್ಮಯಾವಿಷ್ಟೋ, ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ, ಕೃತಾಂಜಲಿರ ಭಾಷತ ॥೧೪॥**

ಅದರ ಬಳಿಕ ಆಶ್ಚರ್ಯಚಕಿತನಾಗಿ ರೋಮಾಂಚನವನ್ನು ಹೊಂದಿದ ಅರ್ಜುನನು ವಿಶ್ವರೂಪನಾದ ಶ್ರೀಮನ್ನಾರಾಯಣನಿಗೆ ಶ್ರದ್ಧಾ ಭಕ್ತಿಸಹಿತ ನಾಗಿ ಶಿರಸಾ ನಮಸ್ಕರಿಸಿ ಕರಗಳನ್ನು ಜೋಡಿಸಿಕೊಂಡು ಈ ರೀತಿಯಾದ ವಚನಗಳನ್ನು ಹೇಳಿದನು.

ಅರ್ಜುನ ಉವಾಚ

**ಪಶ್ಯಾಮಿ ದೇವಾಂಸ್ತವ ದೇವದೇಹೇ, ಸರ್ವಾಂಸ್ತಥಾ ಭೂತವಿಶೇಷ-ಸಂಘಾನ್ । ಬ್ರಹ್ಮಾಣಮೀಶಂ ಕಮಲಾಸನಸ್ಥಂ, ಋಷೀಂಶ್ಚ ಸರ್ವಾ-ನುರಗಾಂಶ್ಚ ದಿವ್ಯಾನ್ ॥೧೫॥**

ಅರ್ಜುನನು ಹೇಳಿದನು :– ಎಲೈ ದೇವನೇ ! ನಿನ್ನ ದೇಹದಲ್ಲಿ ನಾನು ಸಮಸ್ತ ದೇವತೆಗಳನ್ನೂ, ಜರಾಯುಜ ಅಂಡಜಾದಿ (X) ಚತುರ್ವಿಧ ಪ್ರಾಣಿಸಮುದಾಯಗಳನ್ನೂ, ನಾಭಿಕಮಲದಲ್ಲಿ ಕುಳಿತಿರುವ ಬ್ರಹ್ಮದೇವ ನನ್ನೂ, ಈಶ್ವರನನ್ನೂ, ಋಷಿಗಳನ್ನೂ, ಅನಂತ ವಾಸುಕಿ ಮೊದಲಾದ ಎಲ್ಲಾ ದಿವ್ಯವಾದ ನಾಗಗಳನ್ನೂ ನೋಡುತ್ತಿರುವೆನು.

**ಅನೇಕಬಾಹೂದರವಕ್ತ್ರನೇತ್ರಂ, ಪಶ್ಯಾಮಿ ತ್ವಾಂ ಸರ್ವತೋಽನಂತ-ರೂಪಮ್ । ನಾಂತಂ ನ ಮಧ್ಯಂ ನ ಪುನಸ್ತವಾದಿಂ, ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥**

ಹೇ ಸಂಪೂರ್ಣವಿಶ್ವಕ್ಕೆ ಸ್ವಾಮಿಯಾದವನೇ ! ಅನೇಕ ಭುಜಗಳು, ಹೊಟ್ಟೆಗಳು, ಮುಖಗಳು, ನೇತ್ರಗಳು, ಸರ್ವತ್ರವ್ಯಾಪಕವಾಗಿರುವ ಅನಂತ ರೂಪಗಳು—ಇವುಗಳಿಂದ ಕೂಡಿದ ನಿನ್ನನ್ನು ನೋಡುತ್ತಿರುವೆನು. ಎಲೈ ವಿಶ್ವರೂಪನೇ ! ಇಂತಹ ಅದ್ಭುತರೂಪದವನಾದ ನಿನ್ನ ಆದಿಯಾಗಲೀ, ಮಧ್ಯವಾಗಲೀ, ಅಂತ್ಯವಾಗಲೀ ನನಗೆ ಗೋಚರಿಸುತ್ತಿಲ್ಲ.

**ಕಿರೀಟಿನಂ ಗದಿನಂ ಚಕ್ರಿಣಂ ಚ, ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ । ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ, ದ್ದೀಪ್ತಾನಲಾರ್ಕದ್ಯುತಿ ಮಪ್ರಮೇಯಮ್ ॥೧೭॥**

(x) ಜರಾಯುಜ—ಮನುಷ್ಯ, ಪಶು, ಇತ್ಯಾದಿ. ಅಂಡಜ—ಮೊಟ್ಟೆಯಿಂದ ಹುಟ್ಟುವ ಪಕ್ಷ್ಯಾದಿಗಳು. ಸ್ವೇದಜ—ಬೆವರಿನಿಂದ ಹುಟ್ಟುವ ತಿಗಣೆ, ಹೇನು ಇತ್ಯಾದಿ. ಉದ್ಭಿಜ—ಬೀಜದಿಂದ ಹುಟ್ಟುವ ವೃಕ್ಷಾದಿಗಳು.

ಕಿರೀಟವನ್ನು ಧರಿಸಿರುವವನಾಗಿಯೂ, ಗದೆಯನ್ನು ಹಿಡಿದಿರುವವನಾಗಿಯೂ, ಚಕ್ರಧಾರಿಯಾಗಿಯೂ, ಸರ್ವತ್ರ ಪ್ರಕಾಶಿಸುವ ತೇಜೋರಾಶಿಯುಳ್ಳವನಾಗಿಯೂ, ನೋಡಲು ಅಶಕ್ಯನಾಗಿಯೂ, ಸೂರ್ಯಚಂದ್ರಾಗ್ನಿಗಳಿಗೆ ಸಮವಾದ ಪ್ರಭೆಯುಳ್ಳವನಾಗಿಯೂ, ಅಪ್ರಮೇಯನಾಗಿಯೂ, ಸರ್ವದಿಕ್ಕುಗಳನ್ನೂ ಪ್ರಕಾಶಪಡಿಸುತ್ತಲಿರುವವನಾಗಿಯೂ ಇರುವ ನಿನ್ನನ್ನು ನೋಡುತ್ತಿರುವೆನು.

**ತ್ವಮಕ್ಷರಂ ಪರಮಂ ವೇದಿತವ್ಯಂ, ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ । ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ, ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥**

ನೀನು ನಾಶರಹಿತನು. ನೀನು ಸರ್ವಶ್ರೇಷ್ಠನು. ನೀನೇ ಜ್ಞಾನಿಗಳಿಂದ ತಿಳಿಯುವುದಕ್ಕೆ ಯೋಗ್ಯನಾದವನು. ನೀನೇ ಈ ಜಗತ್ತಿಗೆ ಪರಮ ಆಶ್ರಯನು (ಪರಮಾಧಾರನು). ನೀನೇ ಅವ್ಯಯನು. ಶಾಶ್ವತವಾದ ಧರ್ಮವನ್ನು ರಕ್ಷಿಸತಕ್ಕವನೂ ನೀನೇ. ಸನಾತನನೂ, ಪರಮಪುರುಷನೂ ನೀನೇ ಎಂಬುದಾಗಿ ನನ್ನ ದೃಢಾಭಿಪ್ರಾಯ.

**ಅನಾದಿಮಧ್ಯಾಂತಮನಂತವೀರ್ಯ, ಮನಂತ ಬಾಹುಂ ಶಶಿಸೂರ್ಯನೇತ್ರಮ್ । ಪಶ್ಯಾಮಿ ತ್ವಾಂ ದೀಪ್ತ ಹುತಾಶವಕ್ತ್ರಂ, ಸ್ವತೇಜಸಾ ವಿಶ್ವಮಿದಂ ತಪಂತಮ್ ॥೧೯॥**

ಆದಿಮಧ್ಯಾಂತರಹಿತನಾಗಿಯೂ, ಅನಂತಪ್ರಭಾವವುಳ್ಳವನಾಗಿಯೂ, ಅನಂತಬಾಹುಗಳುಳ್ಳವನಾಗಿಯೂ, ಸೂರ್ಯಚಂದ್ರರೇ ನೇತ್ರಗಳುಳ್ಳವನಾಗಿಯೂ, ಪ್ರಜ್ವಲಿತಾಗ್ನಿಯೋಪಾದಿಯಲ್ಲಿ ಪ್ರದೀಪ್ತವಾಗಿರುವ ಮುಖ ಸೌಂದರ್ಯವುಳ್ಳವನಾಗಿಯೂ, ತನ್ನ ತೇಜಸ್ಸಿನಿಂದಲೇ ಈ ಸಮಸ್ತ ಜಗತ್ತನ್ನೂ ತಪಿಸುವಂತೆಯೂ ಮಾಡುವ ನಿನ್ನನ್ನು ನೋಡುತ್ತಿರುವೆನು.

**ದ್ಯಾವಾಪೃಥಿವ್ಯೋರಿದಮಂತರಂ ಹಿ, ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ । ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ, ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥೨೦॥**

ನಿನ್ನೊಬ್ಬನಿಂದಲೇ ಸ್ವರ್ಗ ಮತ್ತು ಭೂಮಿಯ ನಡುವೆ ಇರುವ ಪ್ರದೇಶವೆಲ್ಲವೂ ಮತ್ತು ಸಮಸ್ತ ದಿಕ್ಕುಗಳೂ ತುಂಬಿಹೋಗಿದೆ. ಎಲೈ

ಮಹಾತ್ಮನೇ! ಪರಮಾಶ್ಚರ್ಯಕರವಾಗಿಯೂ, ಉಗ್ರವಾಗಿಯೂ ಇರುವ ನಿನ್ನ ಈ ರೂಪವನ್ನು ನೋಡಿ ಮೂರು ಲೋಕಗಳೂ ಅತಿ ಭಯಗೊಂಡವರಾಗಿ ಕಾಣುತ್ತಿರುವರು.

**ಅಮೀ ಹಿ ತ್ವಾಂ ಸುರಸಂಘಾ ವಿಶಂತಿ, ಕೇಚಿದ್ಭೀತಾಃ ಪ್ರಾಂಜ-**
**ಲಯೋ ಗೃಣಂತಿ। ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾ, ಸ್ತುವಂತಿ**
**ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥೨೧॥**

ಈ ನಿನ್ನ ಸ್ವರೂಪವನ್ನು ನೋಡಿ ದೇವತಾ ಸಮುದಾಯವು ನಿನ್ನನ್ನೇ ಶರಣುಹೊಂದುತ್ತಿರುವುದು (ಅಥವಾ ನಿನ್ನಲ್ಲೇ ಪ್ರವೇಶಿಸುತ್ತಿರುವುದು), ಕೆಲವರು ಭಯಪಟ್ಟು ಅಂಜಲಿಬದ್ಧರಾಗಿ ನಿನ್ನ ನಾಮ, ಗುಣಗಳನ್ನು ಉಚ್ಚರಿಸುತ್ತಾ ತ್ರಾಹಿ ತ್ರಾಹಿ (ರಕ್ಷಿಸು) ಎಂದು ಪ್ರಾರ್ಥಿಸುತ್ತಿರುವರು. ಮಹರ್ಷಿ-ಸಿದ್ಧ-ಸಮುದಾಯವು ಸ್ವಸ್ತಿ ವಚನಗಳನ್ನು ಹೇಳುತ್ತಾ ವೇದವಾಕ್ಯಗಳಿಂದ ನಿನ್ನನ್ನು ಸ್ತುತಿಸುತ್ತಲಿರುವುದು.

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ, ವಿಶ್ವೇಽಶ್ವಿನೌ ಮರುತ-**
**ಶ್ಚೋಷ್ಮಪಾಶ್ಚ। ಗಂಧರ್ವ ಯಕ್ಷಾಸುರ ಸಿದ್ಧಸಂಘಾ, ವೀಕ್ಷಂತೇ**
**ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥**

ಇದಲ್ಲದೆ ಏಕಾದಶರುದ್ರರೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಅಶ್ವಿನೀ ಕುಮಾರರೂ, ಮರುದ್ಗಣಗಳೂ, ಪಿತೃಗಳೂ, ಗಂಧರ್ವ ಯಕ್ಷರಾಕ್ಷಸರೂ, ಸಿದ್ಧಸಮುದಾಯವೂ–ಇವರೆಲ್ಲರೂ ಆಶ್ಚರ್ಯದಿಂದ ನಿನ್ನನ್ನೇ ನೋಡುತ್ತಿರುವರು.

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ, ಮಹಾಬಾಹೋ ಬಹು-**
**ಬಾಹೂರು ಪಾದಮ್। ಬಹೂದರಂ ಬಹುದಂಷ್ಟ್ರಾಕರಾಲಂ, ದೃಷ್ಟ್ವಾ**
**ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥೨೩॥**

ಎಲೈ ಮಹಾಬಾಹುವಾದ ವಿಶ್ವರೂಪನೇ! ಅನೇಕ ಮುಖ, ನೇತ್ರ, ತೋಳು, ತೊಡೆ, ಪಾದ, ಉದರ, ಭಯಂಕರವಾದ ಕೋರೆಹಲ್ಲುಗಳು—ಇವುಗಳಿಂದ ಕೂಡಿರುವ ಮಹತ್ತಾದ ನಿನ್ನ ರೂಪವನ್ನು ನೋಡಿ ಈ ಲೋಕವಾಸಿಗಳೆಲ್ಲರೂ ಅತಿ ಭೀತರಾಗಿರುವರು. ಅವರಂತೆಯೇ ನಾನೂ ಸಹ ಭೀತನಾಗಿರುವೆನು.

**ನಭಃಸ್ಪೃಶಂ ದೀಪ್ತಮನೇಕವರ್ಣಂ, ವ್ಯಾತ್ತಾ ನನಂ ದೀಪ್ತವಿಶಾಲ ನೇತ್ರಮ್ । ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ, ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥೨೪॥**

ಎಲೈ ವಿಷ್ಣು ಭಗವಂತನೇ ! ಗಗನವನ್ನು ಮುಟ್ಟಿರುವವನಾಗಿಯೂ, ದೇದೀಪ್ಯಮಾನವಾಗಿಯೂ, ಅನೇಕ ವರ್ಣಗಳುಳ್ಳವನಾಗಿಯೂ, ತೆರೆದಿರುವ ಬಾಯಿಯುಳ್ಳವನಾಗಿಯೂ, ಪ್ರಕಾಶದಿಂದಕೂಡಿದ ನೇತ್ರವುಳ್ಳವನಾಗಿಯೂ ಇರುವ ನಿನ್ನ ಈ ರೂಪವನ್ನು ನೋಡಿ ನನ್ನ ಮನಸ್ಸು ಭೀತಿಯಿಂದ ತುಂಬಾ ಕಳವಳಗೊಂಡಿದೆ. ಆದಕಾರಣ ನಾನು ಧೈರ್ಯವನ್ನೂ, ಶಾಂತಿಯನ್ನೂ ಹೊಂದದೆ ಇರುವೆನು.

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ, ದೃಷ್ಟ್ವೈವ ಕಾಲಾನಲಸನ್ನಿಭಾನಿ । ದಿಶೋ ನ ಜಾನೇ ನ ಲಭೇ ಚ ಶರ್ಮ, ಪ್ರಸೀದ ದೇವೇಶ ಜಗನ್ನಿವಾಸ ॥೨೫॥**

ಭಯಂಕರವಾದ ಕೋರೆದವಡೆಗಳಿಂದ ಕೂಡಿರುವ ಮತ್ತು ಪ್ರಳಯಾಗ್ನಿಯಂತಿರುವ ನಿನ್ನ ಮುಖವನ್ನು ನೋಡಿ ನಾನು ದಿಗ್ಭ್ರಾಂತನಾಗಿರುವೆನು. ಮತ್ತು ಮನಸ್ಸಿನ ಶಾಂತಿಯನ್ನೂ ಸಹ ಕಳೆದುಕೊಂಡಿರುವೆನು.. ಎಲೈ ದೇವೇಶನೇ ! ಜಗನ್ನಿವಾಸನೇ ! ನನ್ನ ಮೇಲೆ ಪ್ರಸನ್ನನಾಗು.

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ, ಸರ್ವೇ ಸಹೈವಾವನಿಪಾಲಸಂಘೈಃ । ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ, ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥**

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ, ದಂಷ್ಟ್ರಾ ಕರಾಲಾನಿ ಭಯಾನಕಾನಿ । ಕೇಚಿದ್ವಿಲಗ್ನಾ ದಶನಾಂತರೇಷು, ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥೨೭॥**

ಈ ರಣರಂಗದಲ್ಲಿ ಸೇರಿರುವ ಧೃತರಾಷ್ಟ್ರನ ಎಲ್ಲಾ ಪುತ್ರರೂ, ರಾಜರುಗಳೂ, ಭೀಷ್ಮನೂ, ದ್ರೋಣನೂ, ಕರ್ಣನೂ, ಮತ್ತು ನಮ್ಮ ಸೈನ್ಯದಲ್ಲಿರುವ ಅನೇಕ ವೀರರೂ ಭಯಂಕರವಾಗಿಯೂ, ಕರಾಳವಾದ ಕೋರೆಹಲ್ಲು (ದಂಷ್ಟ್ರ) ಗಳುಳ್ಳದ್ದಾಗಿಯೂ ಇರುವ ನಿನ್ನ ಮುಖಗಳಲ್ಲಿ ತ್ವರೆಯಾಗಿ (ವೇಗದಿಂದ) ಪ್ರವೇಶಿಸುತ್ತಿರುವರು. ಕೆಲವರು ನಿನ್ನ ಹಲ್ಲಿನ ಸಂದುಗಳಲ್ಲಿ

ಸಿಕ್ಕಿದವರಾಗಿ ಪುಡಿ ಪುಡಿ ಮಾಡಲ್ಪಟ್ಟ ಶಿರಸ್ಸುಗಳುಳ್ಳವರಾಗಿ ಕಂಡುಬರುತ್ತಿದ್ದಾರೆ.

**ಯಥಾ ನದೀನಾಂ ಬಹವೋಽಂಬುವೇಗಾಃ, ಸಮುದ್ರಮೇವಾಭಿಮುಖಾ ದ್ರವಂತಿ। ತಥಾ ತವಾಮೀ ನರಲೋಕವೀರಾ, ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥೨೮॥**

ಹೆಚ್ಚು ನೀರಿನಿಂದ ಕೂಡಿದ ನದಿಗಳ ವೇಗಯುಕ್ತವಾದ ಜಲಪ್ರವಾಹವು ಸ್ವಾಭಾವಿಕವಾಗಿಯೇ ಸಮುದ್ರದಕಡೆ ಹರಿದುಹೋಗಿ ಸಮುದ್ರದಲ್ಲಿ ಹೇಗೆ ಸೇರಿಬಿಡುವುದೋ ಹಾಗೆಯೇ ಪ್ರಜ್ವಲಿತವಾದ ನಿನ್ನ ಮುಖಗಳಲ್ಲಿ ಈ ವೀರರಾದ ರಾಜರುಗಳು ಪ್ರವೇಶಿಸುತ್ತಲಿರುವರು.

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ, ವಿಶಂತಿ ನಾಶಾಯ ಸಮೃದ್ಧವೇಗಾಃ। ತಥೈವ ನಾಶಾಯ ವಿಶಂತಿ ಲೋಕಾ, ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥೨೯॥**

ಪ್ರದೀಪ್ತವಾದ ಅಗ್ನಿಯನ್ನು ಪತಂಗ ಹುಳುಗಳು ತಮ್ಮ ನಾಶಕ್ಕಾಗಿ ಅತಿ ವೇಗದಿಂದ ಹೇಗೆ ಪ್ರವೇಶಿಸುವುವೋ ಹಾಗೆಯೇ ಇವರೆಲ್ಲರೂ ಅತಿವೇಗದಿಂದ ತಮ್ಮ ನಾಶಕ್ಕಾಗಿಯೇ ನಿನ್ನ ಮುಖವನ್ನು ಸೇರುತ್ತಲಿರುವರು.

**ಲೇಲಿಹ್ಯಸೇ ಗ್ರಸಮಾನಃ ಸಮಂತಾ, ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ। ತೇಜೋಭಿರಾಪೂರ್ಯ ಜಗತ್ ಸಮಗ್ರಂ, ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥೩೦॥**

ಎಲೈ ವಿಷ್ಣು ಭಗವಂತನೇ ! ನಿನ್ನ ಜ್ವಾಲಾಮಯವಾದ ಮುಖಗಳಿಂದ ಸಮಸ್ತ ಲೋಕಗಳನ್ನೂ ಎಲ್ಲಾ ಕಡೆಯಿಂದಲೂ ನುಂಗುತ್ತಿರುವೆ ಮತ್ತು ಆಸ್ವಾದನಮಾಡುತ್ತಿರುವೆ. (ಇಷ್ಟಾದರೂ ಅತೃಪ್ತಿಯಿಂದ ನಾಲಗೆಗಳನ್ನು ಹೊರಗೆ ಚಾಚಿರುವೆ ಮತ್ತು ನಾಲಗೆಗಳನ್ನು ಚಪ್ಪರಿಸುತ್ತಿರುವೆ.) ನಿನ್ನ ಈ ಉಗ್ರವಾದ ತೇಜಸ್ಸು ಸಂಪೂರ್ಣವಾಗಿ ಜಗತ್ತೆಲ್ಲವನ್ನೂ ತುಂಬಿ ಸಂತಾಪಗೊಳಿಸುತ್ತಿದೆ.

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ, ನಮೋಽಸ್ತು ತೇ ದೇವವರ ಪ್ರಸೀದ। ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ, ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥೩೧॥**

ಎಲೈ ದೇವ ಶ್ರೇಷ್ಠನೇ ! ಪ್ರಸನ್ನನಾಗು. ನಿನಗೆ ನಮಸ್ಕಾರವಾಗಲಿ. ಈ ಉಗ್ರರೂಪವನ್ನು ಧರಿಸಿರುವ ನೀನು ಯಾರು ? ಸರ್ವಕಾರಣನಾದ ನಿನ್ನನ್ನು ತಿಳಿಯಲು ಅಪೇಕ್ಷೆಯುಳ್ಳವನಾಗಿರುವೆನು. ನಿನ್ನ ಪ್ರವೃತ್ತಿಯನ್ನು ತಿಳಿಯದವನಾಗಿರುತ್ತೇನೆ.

## ಶ್ರೀ ಭಗವಾನುವಾಚ

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ, ಲೋಕಾನ್ ಸಮಾಹ-
ರ್ತುಮಿಹ ಪ್ರವೃತ್ತಃ । ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ,
ಯೇಽವಸ್ಥಿತಾಃ ಪ್ರತ್ಯನೀಕೇಷುಯೋಧಾಃ ॥೩೨॥

ವಿಶ್ವರೂಪಧಾರಿಯಾದ ಭಗವಂತನು ಅರ್ಜುನನನ್ನು ಕುರಿತು ಇಂತೆಂದನು :– ನಾನು ಸರ್ವ ಸಂಹಾರಕನಾದ ಕಾಲನು. ಈ ಸಮಯದಲ್ಲಿ ಸಮಸ್ತಲೋಕಗಳನ್ನು ನಾಶಮಾಡಲು ಹೀಗೆ ವೃದ್ಧಿಯನ್ನು ಹೊಂದಿ ಪ್ರವರ್ತನಾಗಿರುವೆನು. ನೀನು ಯುದ್ಧಮಾಡದಿದ್ದರೂ ನಿನ್ನ ಶತ್ರು ಪಕ್ಷದವರ ಸೈನ್ಯಗಳಲ್ಲಿ ನಿಂತಿರುವ ವೀರರು ಯಾರೂ ಉಳಿಯುವಂತೆ ಇಲ್ಲ.

ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ, ಜಿತ್ವಾ ಶತ್ರೂನ್‌ಭುಂಕ್ಷ್ವ
ರಾಜ್ಯಂ ಸಮೃದ್ಧಮ್ । ಮಯೈವೈತೇ ನಿಹತಾಃ ಪೂರ್ವಮೇವ,
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥೩೩॥

ಎಲೈ ಸವ್ಯಸಾಚಿಯಾದ (X) ಅರ್ಜುನನೇ ! ಆದಕಾರಣ ನೀನು ಯುದ್ಧಕ್ಕಾಗಿ ಏಳು. ಶತ್ರುಗಳನ್ನು ಜಯಿಸಿ ನಿಷ್ಕಂಟಕವಾದ (ಶತ್ರುಗಳಿಲ್ಲದ) ರಾಜ್ಯವನ್ನು ಅನುಭವಿಸು. ನನ್ನಿಂದಲೇ ಇವರೆಲ್ಲರೂ ಇದಕ್ಕೆ ಮೊದಲೇ ಹತರಾಗಿರುವರು. ಆದುದರಿಂದ ನೀನು ನಿಮಿತ್ತಮಾತ್ರನಾಗಿ ಯುದ್ಧಮಾಡು.

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ, ಕರ್ಣಂ ತಥಾಽನ್ಯಾನಪಿ
ಯೋಧವೀರಾನ್ । ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ,
ಯುದ್ಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥೩೪॥

ನನ್ನಿಂದ ಹತರಾದ ದ್ರೋಣನನ್ನೂ, ಭೀಷ್ಮನನ್ನೂ, ಜಯದ್ರಥ ಕರ್ಣರನ್ನೂ ಮತ್ತು ಇನ್ನೂ ಉಳಿದಿರುವ ಯುದ್ಧಮಾಡತಕ್ಕ ವೀರರನ್ನೂ ನೀನು

(X) ಎಡದ ಕೈಯಿಂದ ಬಾಣಗಳನ್ನು ಬಿಡುವವನಾದ.

ಸಂಹಾರಮಾಡು. ವ್ಯಥೆಪಡಬೇಡ. ಯುದ್ಧವನ್ನುಮಾಡು. ಯುದ್ಧದಲ್ಲಿ ಶತ್ರುಗಳನ್ನು ಜಯಿಸುವೆ.

ಸಂಜಯ ಉವಾಚ

**ಏತಚ್ಛ್ರುತ್ವಾ ವಚನಂ ಕೇಶವಸ್ಯ, ಕೃತಾಂಜಲಿರ್ವೇಪಮಾನಃ ಕಿರೀಟೀ। ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ, ಸಗದ್ಗದಂ ಭೀತಭೀತಃ ಪ್ರಣಮ್ಯ ॥೩೫॥**

ಸಂಜಯನು ಧೃತರಾಷ್ಟ್ರನನ್ನು ಕುರಿತು ಇಂತೆಂದನು :– ಈ ರೀತಿಯಾಗಿ ಕೇಶವನಾದ ಶ್ರೀ ಕೃಷ್ಣಪರಮಾತ್ಮನ ವಚನವನ್ನು ಕೇಳಿದವನಾಗಿ ಕಿರೀಟಧಾರಿಯಾದ ಅರ್ಜುನನು ಭಯದಿಂದ ಗಡಗಡ ನಡುಗುತ್ತಾ ಕರಗಳನ್ನು ಗಳನ್ನು ಜೋಡಿಸಿಕೊಂಡು, ಶ್ರೀಕೃಷ್ಣನನ್ನು (ವಿಶ್ವರೂಪೀ ಭಗವಂತನನ್ನು) ನಮಸ್ಕಾರಮಾಡಿ, ಅತಿ ಭಯಭೀತನಾಗಿ ಪ್ರಣಾಮಮಾಡಿ, ಗದ್ಗದವಾಣಿಯಿಂದ ಪುನಃ ಹೀಗೆ ಹೇಳತೊಡಗಿದನು.

ಅರ್ಜುನ ಉವಾಚ

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ, ಜಗತ್ ಪ್ರಹೃಷ್ಯತ್ಯನುರಜ್ಯತೇ ಚ। ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ, ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥೩೬॥**

ಅರ್ಜುನನು ವಿಶ್ವರೂಪಧಾರಿಯಾದ ಶ್ರೀ ಕೃಷ್ಣಪರಮಾತ್ಮನನ್ನು ಕುರಿತು ಇಂತೆಂದನು :–

ಎಲೈ ಹೃಷೀಕೇಶನೇ! (X) ನಿನ್ನ ನಾಮ ಮತ್ತು ಗುಣಗಳ ಸಂಕೀರ್ತನದಿಂದ ಜಗತ್ತು ಹರ್ಷವನ್ನು ಹೊಂದುತ್ತಿರುವುದು. ಮತ್ತು ಅನುರಾಗವನ್ನೂ ಹೊಂದುತ್ತಿರುವುದು. ರಾಕ್ಷಸರು ಭಯಭೀತರಾಗಿ ನಾನಾ ದಿಕ್ಕುಗಳಲ್ಲಿ ಓಡುತ್ತಿರುವರು. ಸಿದ್ಧಸಮುದಾಯವು ನಮಸ್ಕರಿಸುತ್ತಿರುವುದು. ಇವೆಲ್ಲವೂ ಜಗದ್ವಂದ್ಯನಾದ ನಿನಗೆ ಯೋಗ್ಯವೇ ಸರಿ.

---

(X) ಹೃಷೀಕ ಅಂದರೆ ಇಂದ್ರಿಯಗಳಿಗೆ, ಈಶ ಅಂದರೆ ಯಾರು ಒಡೆಯನೋ ಅವನಿಗೆ ಹೃಷೀಕೇಶನೆಂದು ಹೆಸರು.

18

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್, ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ। ಅನಂತ ದೇವೇಶ ಜಗನ್ನಿವಾಸ, ತ್ವಮಕ್ಷರಂ ಸದಸತ್ತತ್ಪರಂ ಯತ್ ॥೩೭॥**

ಓ ಮಹಾತ್ಮನೇ ! ಹೇ ಅನಂತನೇ ! ಹೇ ದೇವಶ್ರೇಷ್ಠನೇ ! ಹೇ ಜಗನ್ನಿವಾಸನೇ ! ಬ್ರಹ್ಮನನ್ನು ಸೃಷ್ಟಿಸಿದ ಆದಿಕರ್ತನು ನೀನು. (ಬ್ರಹ್ಮನಿಗೆ ತಂದೆ ಮತ್ತು ಗುರು). ಆದುದರಿಂದ ನೀನೇ ಎಲ್ಲರಿಗಿಂತ ದೊಡ್ಡವನು ಮತ್ತು ಶ್ರೇಷ್ಠತಮನು. ನೀನು ನಾಶರಹಿತನು, ಸದ್ರೂಪನು ಮತ್ತು ಅಸದ್ರೂಪನು, ಮತ್ತು ಇವೆರಡಕ್ಕೂ ಪರವಾದ ಯಾವ ಅಕ್ಷರಬ್ರಹ್ಮವಿರುವುದೋ ಅದೂ ಸಹ ನೀನೇ ಆಗಿದ್ದೀಯೆ. ಇಂತಹನಿನಗೆ ದೇವತೆಗಳಾದಿಯಾಗಿ ಸರ್ವರೂ ಏಕೆ ನಮಸ್ಕರಿಸದಿದ್ದಾರು ? ಅಂದರೆ ಎಲ್ಲರೂ ನಮಸ್ಕರಿಸಿಯೇ ನಮಸ್ಕರಿಸುವರು.

**ತ್ವಮಾದಿದೇವಃ ಪುರುಷಃ ಪುರಾಣ, ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್। ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ, ತ್ವಯಾ ತತಂ ವಿಶ್ವಮನಂತರೂಪ ॥೩೮॥**

ಎಲೈ ಅನಂತರೂಪನೇ ! ನೀನೇ ಆದಿದೇವನು, ಪುರುಷನು, ಪುರಾತನನು (ಸನಾತನನು), ಈ ಜಗತ್ತಿಗೆ ಮುಖ್ಯವಾದ ಆಶ್ರಯನು, ಈ ಸಮಸ್ತ ಜಗತ್ತನ್ನು ತಿಳಿದವನು ನೀನು. ಮತ್ತು ಜ್ಞಾನಿಗಳಿಂದ ತಿಳಿಯಲು ಯೋಗ್ಯವಾದವನೂ ನೀನೇ ಮೋಕ್ಷರೂಪನಾದ ಪರಂಧಾಮನೂ ನೀನೇ. ಈ ವಿಶ್ವವೆಲ್ಲವೂ ನಿನ್ನಿಂದಲೇ ವ್ಯಾಪಿಸಲ್ಪಟ್ಟಿದೆ.

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ, ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ। ನಮೋ ನಮಸ್ತೇಽಸ್ತು ಸಹಸ್ರಕೃತ್ವಃ, ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥೩೯॥**

ವಾಯು, ಯಮ, ಅಗ್ನಿ, ವರುಣ, ಚಂದ್ರ, ಪ್ರಜಾಪತಿ, ಮತ್ತು ಪ್ರಪಿತಾಮಹ ಇವರೇ ಆದಿಯಾದ ಸಮಸ್ತ ದೇವತಾರೂಪವು ನೀನೇ ಆಗಿದ್ದೀಯೆ ! ಆದಕಾರಣ ಪರಮೇಶ್ವರನಾದ ನಿನಗೆ ಸಹಸ್ರಾವರ್ತಿ ನಮಸ್ಕಾರವಾಗಲಿ. ಪುನಃ ಪುನಃ ನಿನಗೆ ನಮಸ್ಕಾರ, ನಮಸ್ಕಾರವಾಗಲಿ.

**ನಮಃ ಪುರಸ್ತಾದಥ ಪೃಷ್ಠತಸ್ತೇ, ನಮೋಽಸ್ತು ತೇ ಸರ್ವತ ಏವ ಸರ್ವ। ಸರ್ವ। ಅನಂತವೀರ್ಯಾಮಿತವಿಕ್ರಮಸ್ತ್ವಂ, ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥೪೦॥**

ಎಲೈ ಸರ್ವರೂಪನೇ ! ಮುಂಭಾಗದಲ್ಲಿಯೂ, ಹಿಂಭಾಗದಲ್ಲಿಯೂ, ಹಾಗೆಯೇ ಎಲ್ಲಾ ಕಡೆಗಳಲ್ಲಿಯೂ ನಿನಗೆ ನಮಸ್ಕಾರವಾಗಲಿ. ನೀನು ಅಪರಿಮಿತವಾದ ವೀರ್ಯವುಳ್ಳವನೂ, ಅಪಾರವಾದ ಪರಾಕ್ರಮವುಳ್ಳವನೂ ಆಗಿರುತ್ತೀಯೆ. ಈ ಜಗತ್ತೆಲ್ಲವನ್ನೂ ನೀನು ನಿನ್ನ ಮಹಿಮೆಯಿಂದಲೇ ವ್ಯಾಪಿಸಿರುವೆ. ಆದ್ದರಿಂದ ನೀನು ಸರ್ವನೆಂದು ಹೇಳಲ್ಪಡುತ್ತಿರುವೆ.

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ, ಹೇ ಕೃಷ್ಣ ಹೇ ಯಾದವ ಹೇ ಸಖೇತಿ । ಅಜಾನತಾ ಮಹಿಮಾನಂ ತವೇದಂ, ಮಯಾ ಪ್ರಮಾ-**
**ದಾತ್ ಪ್ರಣಯೇನ ವಾಪಿ ॥೪೧॥**

ನಿನ್ನ ಈ ಮಹಿಮೆಯನ್ನು ತಿಳಿಯದೇ ನಿನ್ನನ್ನು ನನ್ನ ಸ್ನೇಹಿತನೆಂದು ತಿಳಿದು ಅನೇಕಾವರ್ತಿ ಹಠಾತ್ತಾಗಿ ಪ್ರಮಾದದಿಂದ ಅಥವಾ ಸ್ನೇಹಭಾವದಿಂದ ನನ್ನಿಂದ ಹೇಳಲ್ಪಟ್ಟ ಹೇ ಕೃಷ್ಣ ! ಹೇ ಯಾದವಾ ! ಹೇ ಸಖೇ ! ಇತ್ಯಾದಿ ಮಾತುಗಳನ್ನು ನೀನು ಕ್ಷಮಿಸು.

**ಯಚ್ಚಾವಹಾಸಾರ್ಥಮಸತ್ಕೃತೋಽಸಿ, ವಿಹಾರ ಶಯ್ಯಾಸನಭೋಜ-ನೇಷು । ಏಕೋಽಥವಾಪ್ಯಚ್ಯುತ ತತ್ಸಮಕ್ಷಂ, ತತ್ ಕ್ಷಾಮಯೇ-**
**ತ್ವಾಮಹಮಪ್ರಮೇಯಮ್ ॥೪೨॥**

ಎಲೈ ಅಚ್ಯುತನೇ ! ಇದಲ್ಲದೇ ಸ್ನೇಹಿತರ ಸಮಕ್ಷಮದಲ್ಲಿ ಅಥವಾ ಏಕಾಂತದಲ್ಲಿ ಉಪಹಾಸಾರ್ಥವಾಗಿ (ವಿನೋದಕ್ಕಾಗಿ) ಆಹಾರ, ವಿಹಾರವನ್ನು ಮಾಡುವಾಗ ಮತ್ತು ಮಲಗುವಾಗ, ಕುಳಿತಿರುವಾಗ—ಇಂತಹ ಸಂದರ್ಭಗಳಲ್ಲಿ ನನ್ನಿಂದ ನೀನು ತಿರಸ್ಕೃತನಾಗಿರುವೆ(ಅವಮಾನಿತನಾಗಿರುವೆ). ಅಪ್ರಮೇಯನಾದ ನಿನ್ನಲ್ಲಿ ನನ್ನ ಈ ಸರ್ವಾಪರಾಧಗಳಿಗೆ ಕ್ಷಮಾಪಣೆಯನ್ನು ಬೇಡುತ್ತೇನೆ.

**ಪಿತಾಸಿ ಲೋಕಸ್ಯ ಚರಾಚರಸ್ಯ, ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ । ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ,**
**ಲೋಕತ್ರಯೇಽಪ್ಯಪ್ರತಿಮಪ್ರಭಾವಃ ॥೪೩॥**

ಈ ಚರಾಚರ ಜಗತ್ತಿಗೆ ನೀನು ತಂದೆಯಾಗಿರುವೆ; ನೀನೇ ಪೂಜ್ಯನಾಗಿರುವೆ; ನೀನೇ ಗುರುವಾಗಿಯೂ, ಶ್ರೇಷ್ಠನಾಗಿಯೂ ಇರುವೆ. ಎಲೈ ಅನುಪಮ ಪ್ರಭಾವವುಳ್ಳವನೇ ! ಮೂರು ಲೋಕಗಳಲ್ಲಿಯೂ ನಿನಗೆ ಸಮಾನ

ರಾದವರು ಯಾರೂ ಇಲ್ಲ. ಇನ್ನು ನಿನಗಿಂತಲೂ ಅಧಿಕನು ಎಲ್ಲಿರುವನು ? (ಇಲ್ಲ) ಏಕೆಂದರೆ, ನೀನು ಅಸಮಾನನು, ಅದ್ವಿತೀಯನು.

ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ, ಪ್ರಸಾದಯೇ ತ್ವಾಮಹ-
ಮೀಶಮೀಡ್ಯಮ್ । ಪಿತೇವ ಪುತ್ರಸ್ಯ ಸಖೇವ ಸಖ್ಯುಃ, ಪ್ರಿಯಃ
ಪ್ರಿಯಾಯಾರ್ಹಸಿ ದೇವ ಸೋಢುಮ್ ॥೪೪॥

ಓ ದೇವನೇ ! ಆದಕಾರಣ ಸ್ತೋತ್ರಾರ್ಹನಾಗಿಯೂ, ಲೋಕೇಶ್ವರನಾಗಿಯೂ ಇರುವ ನಿನ್ನನ್ನು ದೀರ್ಘದಂಡದಿಂದ ನಮಸ್ಕರಿಸಿ ನಿನ್ನ ಪ್ರಸನ್ನತೆಯನ್ನು ಬೇಡುವೆನು. ಮಗನ ಅಪರಾಧವನ್ನು ಕ್ಷಮಿಸುವ ತಂದೆಯಂತೆಯೂ, ಮಿತ್ರನ ಅಪರಾಧವನ್ನು ಕ್ಷಮಿಸುವ ಮಿತ್ರನಂತೆಯೂ, ಭಾರ್ಯೆಯ ಅಪರಾಧವನ್ನು ಕ್ಷಮಿಸುವ ಪತಿಯಂತೆಯೂ, ನನ್ನ ಅಪರಾಧವನ್ನು ನೀನು ಕ್ಷಮಿಸಲು ಅರ್ಹನಾಗಿರುತ್ತೀಯೆ.

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ, ಭಯೇನ ಚ ಪ್ರವ್ಯಥಿತಂ
ಮನೋ ಮೇ । ತದೇವ ಮೇ ದರ್ಶಯ ದೇವ ರೂಪಂ, ಪ್ರಸೀದ
ದೇವೇಶ ಜಗನ್ನಿವಾಸ ॥೪೫॥

ಹಿಂದೆ ಎಂದೂ ನೋಡದಿರುವ ವಿಶ್ವರೂಪವನ್ನು ನೋಡಿ ಸಂತೋಷವುಳ್ಳವನಾಗಿರುವೆನು. ಆದರೆ ಈ ನಿನ್ನ ವಿಕರಾಳರೂಪದ ದರ್ಶನದಿಂದ ನನ್ನ ಮನಸ್ಸು ಭಯಭೀತವಾಗಿ ವ್ಯಥೆಯನ್ನು ತಾಳಿರುವುದು. ಆದಕಾರಣ ಓ ದೇವೇಶನೇ ! ಜಗನ್ನಿವಾಸನೇ ! ದೇವನೇ ! (ನನ್ನಮೇಲೆ) ಪ್ರಸನ್ನನಾಗು. ಪೂರ್ವದಲ್ಲಿದ್ದ ನಿನ್ನ ಸೌಮ್ಯರೂಪವನ್ನೇ ತೋರಿಸು.

ಕಿರೀಟಿನಂ ಗದಿನಂ ಚಕ್ರಹಸ್ತ, ಮಿಚ್ಛಾಮಿ ತ್ವಾಂ ದ್ರಷ್ಟುಮಹಂ
ತಥೈವ। ತೇನೈವ ರೂಪೇಣ ಚತುರ್ಭುಜೇನ, ಸಹಸ್ರಬಾಹೋ ಭವ
ವಿಶ್ವಮೂರ್ತೇ ॥೪೬॥

ಓ ವಿಶ್ವಮೂರ್ತಿಯೇ ! ಹೇ ಸಹಸ್ರಬಾಹುವೇ ! ಕಿರೀಟಧಾರಿಯಾಗಿಯೂ, ಗದಾಧರನಾಗಿಯೂ, ಚಕ್ರಹಸ್ತನಾಗಿಯೂ, ಇರುವ ನಿನ್ನನ್ನು ನೋಡಲು ಅಪೇಕ್ಷಿಸುತ್ತೇನೆ. ಆದಕಾರಣ ಅದೇ ಚತುರ್ಭುಜ ರೂಪದಿಂದ ನನಗೆ ದರ್ಶನವನ್ನು ಕೊಡುವವನಾಗು.

ಶ್ರೀ ಭಗವಾನುವಾಚ

ಮಯಾ ಪ್ರಸನ್ನೇನ ತವಾರ್ಜುನೇದಂ, ರೂಪಂ ಪರಂ ದರ್ಶಿತ-
ಮಾತ್ಮಯೋಗಾತ್ । ತೇಜೋಮಯಂ ವಿಶ್ವಮನಂತಮಾದ್ಯಂ,
ಯನ್ಮೇ ತವದನ್ಯೇನ ನ ದೃಷ್ಟಪೂರ್ವಮ್ ॥೪೭॥

ಶ್ರೀ ಭಗವಂತನಿಂತೆಂದನು :- (ಭಾಗ್ಯಶಾಲಿಯಾದ) ಎಲೈ ಅರ್ಜುನನೇ ! ಪ್ರಸನ್ನನಾದ ನನ್ನಿಂದ ನನ್ನ ಯೋಗಶಕ್ತಿಯಿಂದ ಸರ್ವೋತ್ಕೃಷ್ಟವಾದ ಈ ವಿಶ್ವರೂಪವು ನಿನಗಾಗಿ ತೋರಿಸಲ್ಪಟ್ಟಿತು. ತೇಜೋಮಯವಾಗಿಯೂ, ವಿಶ್ವಾಕಾರವಾಗಿಯೂ, ಅನಂತವಾಗಿಯೂ, ಸರ್ವಕಾರಣವಾಗಿಯೂ ಇರುವ ನನ್ನ ರೂಪವು ನಿನ್ನ ವಿನಹ ಬೇರೆ ಯಾರಿಂದಲೂ ನೋಡಲ್ಪಡಲಿಲ್ಲ.

ನ ವೇದಯಜ್ಞಾಧ್ಯಯನೈರ್ನ ದಾನೈ, ರ್ನ ಚ ಕ್ರಿಯಾಭಿರ್ನ ತಪೋ
ಭಿರುಗ್ರೈಃ । ಏವಂರೂಪಃ ಶಕ್ಯ ಅಹಂ ನೃಲೋಕೇ, ದ್ರಷ್ಟುಂ
ತ್ವದನ್ಯೇನ ಕುರುಪ್ರವೀರ ॥೪೮॥

ಕುರುವಂಶದೋಳ್ ಅತಿ ಶೂರ ವೀರನಾದ ಅರ್ಜುನನೇ ! ನಿನಗಿಂತ ಅನ್ಯರಾರಿಂದಲೂ ನೋಡಲ್ಪಡದ ಈ ರೂಪವುಳ್ಳ ನಾನು ಮನುಷ್ಯಲೋಕದಲ್ಲಿ ವೇದಾಧ್ಯಯನದಿಂದಲೂ, ಯಜ್ಞಕರ್ಮಗಳನ್ನು ಪೇಳುವ ಶಾಸ್ತ್ರಾಧ್ಯಯನದಿಂದಲೂ, ದಾನದಿಂದಲೂ, ಯಾಗಾದಿ ಕ್ರಿಯೆಗಳಿಂದಲೂ, ಉಗ್ರವಾದ ತಪಸ್ಸುಗಳಿಂದಲೂ ನೋಡಲು ಶಕ್ಯನಲ್ಲ.

ಮಾ ತೇ ವ್ಯಥಾ ಮಾ ಚ ವಿಮೂಢಭಾವೋ, ದೃಷ್ಟ್ವಾ ರೂಪಂ
ಘೋರಮೀದೃಙ್ಮಮೇದಮ್। ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ,
ತದೇವ ಮೇ ರೂಪಮಿದಂ ಪ್ರಪಶ್ಯ ॥೪೯॥

ಈ ವಿಧವಾದ ನನ್ನ ಘೋರರೂಪವನ್ನು ನೋಡಿ ನೀನು ವ್ಯಾಕುಲವನ್ನೂ ಮೂಢಭಾವವನ್ನೂ ಹೊಂದಬೇಡ. ಭಯವನ್ನು ಬಿಟ್ಟುಬಿಡು. ಪ್ರಸನ್ನ ಚಿತ್ತನಾಗು (ಶಾಂತಚಿತ್ತನಾಗು). ನನ್ನ ಪೂರ್ವದ ಶಂಖ ಚಕ್ರಗದಾಪದ್ಮಯುಕ್ತ ಚತುರ್ಭುಜ ರೂಪವನ್ನೇ ನೋಡುವನಾಗು.

## ಸಂಜಯ ಉವಾಚ

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ, ಸ್ವಕಂ ರೂಪಂ ದರ್ಶಯಾ-
ಮಾಸ ಭೂಯಃ । ಆಶ್ವಾಸಯಾಮಾಸ ಚ ಭೀತಮೇನಂ, ಭೂತ್ವಾ
ಪುನಃ ಸೌಮ್ಯವಪುರ್ಮಹಾತ್ಮಾ ॥೫೦॥**

ಸಂಜಯನು ಧೃತರಾಷ್ಟ್ರನನ್ನು ಕುರಿತು ಇಂತೆಂದನು :– ವಾಸುದೇವನಾದ ಶ್ರೀ ಕೃಷ್ಣಪರಮಾತ್ಮನು ಈ ಪ್ರಕಾರ ಅರ್ಜುನನಿಗೆ ಹೇಳಿದವನಾಗಿ ಪುನಃ ತನ್ನ ನಿಜರೂಪವನ್ನು ತೋರಿಸಿದನು. ಮಹಾತ್ಮನಾದ ಶ್ರೀ ಕೃಷ್ಣಪರಮಾತ್ಮನು ಸೌಮ್ಯರೂಪವನ್ನು ತಾಳಿದವನಾಗಿ ಭಯಭೀತನಾದ ಅರ್ಜುನನನ್ನು ಪುನಃ ಸಮಾಧಾನಪಡಿಸಿದನು.

## ಅರ್ಜುನ ಉವಾಚ

**ದೃಷ್ಟ್ವೇದಂ ಮಾನುಷಂ ರೂಪಂ, ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ, ಸಚೇತಾಃ ಪ್ರಕೃತಿಂ ಗತಃ ॥೫೧॥**

ಅರ್ಜುನನಿಂತೆಂದನು—ಹೇ ಜನಾರ್ದನನೇ ! ಸೌಮ್ಯವಾದ (ಮನೋಹರವಾದ) ಈ ನಿನ್ನ ಮಾನುಷರೂಪವನ್ನು ನೋಡಿ ಸಮಾಧಾನವಾದ ಚಿತ್ತವುಳ್ಳವನಾದೆನು ಮತ್ತು ನನ್ನ ಸ್ವಾಭಾವಿಕ ಸ್ಥಿತಿಯನ್ನು ಹೊಂದಿದೆನು.

## ಶ್ರೀ ಭಗವಾನುವಾಚ

**ಸುದುರ್ದರ್ಶಮಿದಂ ರೂಪಂ, ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ರೂಪಸ್ಯ, ನಿತ್ಯಂ ದರ್ಶನಕಾಂಕ್ಷಿಣಃ ॥೫೨॥**

ಶ್ರೀ ಭಗವಂತನಿಂತೆಂದನು—ನೀನು ಅತ್ಯಂತ ದುರ್ಲಭವಾದ ನನ್ನ ರೂಪವನ್ನು ನೋಡಿದವನಾದೆ. ದೇವತೆಗಳೂ ಸಹ ಈ ನನ್ನ ರೂಪವನ್ನು ನೋಡಲು ಯಾವಾಗಲೂ ಅಪೇಕ್ಷಿಸುವವರಾಗಿರುತ್ತಾರೆ. (ಇಂತಹ ದೇವದುರ್ಲಭವಾದ ರೂಪವನ್ನು ನೀನು ನನ್ನ ಅನುಗ್ರಹದಿಂದ ನೋಡಿದವನಾದೆ).

**ನಾಹಂ ವೇದೈರ್ನ ತಪಸಾ, ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ, ದೃಷ್ಟವಾನಸಿ ಮಾಂ ಯಥಾ ॥೫೩॥**

ಯಾವ ಪ್ರಕಾರವಾಗಿ ನನ್ನ ರೂಪವನ್ನು ನೋಡಿದೆಯೋ ಆ ರೂಪವುಳ್ಳ ನನ್ನನ್ನು ವೇದಾಧ್ಯಯನದಿಂದಲೂ, ತಪಸ್ಸಿನಿಂದಲೂ, ದಾನದಿಂದಲೂ ಯಜ್ಞಗಳಿಂದಲೂ, ನೋಡಲು ಶಕ್ಯವಿಲ್ಲ. (X)

**ಭಕ್ತ್ಯಾ ತ್ವನನ್ಯಯಾ ಶಕ್ಯ, ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ, ಪ್ರವೇಷ್ಟುಂ ಚ ಪರಂತಪ ॥೫೪॥**

ಎಲೈ ಅರ್ಜುನನೇ ! ಎಲೈ ಪರಂತಪನೇ ! ಈ ಬಗೆಯ ರೂಪವುಳ್ಳ ನಾನು ಅನನ್ಯ ಭಕ್ತಿಯಿಂದಲೇ ತಿಳಿಯುವುದಕ್ಕೂ, ಯಥಾರ್ಥರೀತಿಯಿಂದ ಸಾಕ್ಷಾತ್ಕರಿಸುವುದಕ್ಕೂ ಮತ್ತು ಅಭೇದಭಾವದಿಂದ ಹೊಂದುವುದಕ್ಕೂ ಶಕ್ಯನು.

**ಮತ್ಕರ್ಮಕೃನ್ಮತ್ಪರಮೋ, ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು, ಯಃ ಸ ಮಾಮೇತಿ ಪಾಂಡವ ॥೫೫॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ವಿಶ್ವರೂಪದರ್ಶನಯೋಗೋನಾಮ**
**ಏಕಾದಶೋಽಧ್ಯಾಯಃ**

ಎಲೈ ಮಧ್ಯಮ ಪಾಂಡವನೇ ! ಯಾವ ಪುರುಷನು ನನಗೋಸ್ಕರವಾಗಿಯೇ ಕರ್ಮಗಳನ್ನು ಮಾಡತಕ್ಕವನಾಗಿರುವನೋ, ನನ್ನನ್ನೇ ಪರಮಶ್ರೇಷ್ಠನೆಂದು ಭಾವಿಸಿರುವನೋ, ನನ್ನಲ್ಲಿ ಅನನ್ಯವಾದ ಭಕ್ತಿಯನ್ನು ಮಾಡುವವನಾಗಿರುವನೋ, ಸಮಸ್ತ ಅನಾತ್ಮ ಪದಾರ್ಥಗಳಲ್ಲಿ ಆಸಕ್ತಿ ಇಲ್ಲದಿರುವನೋ, ಯಾವ ಪ್ರಾಣಿಯನ್ನೂ ದ್ವೇಷಿಸದೇ ಇರುವನೋ—ಇಂತಹವನು ನನ್ನನ್ನು ಅಭೇದಭಾವದಿಂದ ಹೊಂದುವನು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ವಿಶ್ವರೂಪದರ್ಶನಯೋಗವೆಂಬ ಹನ್ನೊಂದನೆಯ ಅಧ್ಯಾಯವು ಸಂಪೂರ್ಣವು.



---

(X) ಹಿಂದೆ (ನವೇದಯಜ್ಞಾಧ್ಯಯನೈಃ) ಎಂಬ 48ನೇ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ (ನಾಹಂ ವೇದೈರ್ನತಪಸಾ) ಎಂದು ಪುನಃ ಹೇಳಿರುವುದು ವಿಶ್ವರೂಪದರ್ಶನವು ಅತ್ಯಂತ ದುರ್ಲಭವಾದುದು ಎಂಬುದನ್ನು ತಿಳಿಸುವುದಕ್ಕಾಗಿ ಹೇಳಲಾಗಿದೆ. ಇದರಿಂದ ಇಲ್ಲಿ ಪುನರುಕ್ತಿ ದೋಷ ಉಂಟಾಗುವುದಿಲ್ಲ.

# ಅಥ ಭಕ್ತಿಯೋಗೋನಾಮ
# ದ್ವಾದಶೋಽಧ್ಯಾಯಃ

## ಅರ್ಜುನ ಉವಾಚ

ಏವಂ ಸತತಯುಕ್ತಾ ಯೇ, ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ, ತೇಷಾಂ ಕೇ ಯೋಗವಿತ್ತಮಾಃ ॥೧॥

ಅರ್ಜುನನು ಇಂತೆಂದನು—ಈ ರೀತಿಯಾಗಿ ನಿರಂತರವೂ ನಿನ್ನಲ್ಲಿಯೇ ಸಮರ್ಪಿಸಿದ ಚಿತ್ತವುಳ್ಳವರಾಗಿ ವಿಶ್ವ(ಸಾಕಾರ) ರೂಪನಾದ ನಿನ್ನನ್ನು ಯಾವ ಭಕ್ತರು ಉಪಾಸನೆ ಮಾಡುತ್ತಾರೆಯೋ ಮತ್ತು ಯಾರು ಅವ್ಯಕ್ತ(ನಿರಾಕಾರ) ವಾಗಿಯೂ, ನಾಶರಹಿತವಾಗಿಯೂ ಇರುವ ಪರಬ್ರಹ್ಮವಾಗಿರುವ ನಿನ್ನ ಉಪಾಸನೆ ಮಾಡುವರೋ ಇವರೊಳಗೆ—ಅಂದರೆ ಎರಡು ಬಗೆಯ ಈ ಉಪಾಸಕರಲ್ಲಿ ಉತ್ತಮವಾದ ಯೋಗವೇತ್ತನು ಯಾರು ?

## ಶ್ರೀ ಭಗವಾನುವಾಚ

ಮಯ್ಯಾವೇಶ್ಯ ಮನೋ ಯೇ ಮಾಂ, ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾ, ಸ್ತೇ ಮೇ ಯುಕ್ತತಮಾ ಮತಾಃ ॥೨॥

ಶ್ರೀ ಭಗವಂತನಿಂತೆಂದನು—ಯಾರು ತಮ್ಮ ಮನಸ್ಸನ್ನು ಸಗುಣ ಮೂರ್ತಿಯಾದ ನನ್ನಲ್ಲಿ ಏಕಾಗ್ರವಂ ಮಾಡಿ ಸದಾ ನನ್ನ ಭಜನೆ-ಧ್ಯಾನಗಳಲ್ಲಿ ನಿರತರಾಗಿರುವರೋ ಮತ್ತು ಅತಿ ಶ್ರೇಷ್ಠವಾದ ಶ್ರದ್ಧೆಯಿಂದ ನಿತ್ಯದಲ್ಲಿಯೂ ನನ್ನನ್ನು ಉಪಾಸನೆ ಮಾಡುವರೋ ಅವರೇ ಶ್ರೇಷ್ಠವಾದ ಯೋಗಿಗಳು ಎಂದು ನನ್ನ ಅಭಿಪ್ರಾಯವು.

ಯೇ ತ್ವಕ್ಷರಮನಿರ್ದೇಶ್ಯ, ಮವ್ಯಕ್ತಂ ಪರ್ಯುಪಾಸತೇ । ॥೩॥
ಸರ್ವತ್ರಗಮಚಿತ್ಯಂ ಚ, ಕೂಟಸ್ಥಮಚಲಂ ಧ್ರುವಮ್
ಸನ್ನಿಯಮ್ಯೇಂದ್ರಿಯಗ್ರಾಮಂ, ಸರ್ವತ್ರ ಸಮಬುದ್ಧಯಃ । ॥೪॥
ತೇ ಪ್ರಾಪ್ನುವಂತಿ ಮಾಮೇವ, ಸರ್ವಭೂತ ಹಿತೇ ರತಾಃ

(ಇನ್ನು ನಿರ್ಗುಣ ಬ್ರಹ್ಮ ಉಪಾಸನೆಗೆ ಫಲವೇನೆಂದರೆ) ಯಾರು ಸರ್ವೇಂದ್ರಿಯಗಳನ್ನು ನಿಗ್ರಹಿಸಿದವರಾಗಿ, ಸರ್ವತ್ರ ಸಮಬುದ್ಧಿಯುಳ್ಳವರಾಗಿ ಸರ್ವಭೂತಗಳ ಹಿತದಲ್ಲಿ ಪ್ರೀತಿಯುಳ್ಳವರಾಗಿದ್ದುಕೊಂಡು ನಾಶರಹಿತವಾಗಿಯೂ,ಹೀಗೆಂದುನಿರ್ದೇಶಿಸಲು ಅಶಕ್ಯವಾಗಿಯೂ,ಅವ್ಯಕ್ತವಾಗಿಯೂ,ಸರ್ವತ್ರ ವ್ಯಾಪಕವಾಗಿಯೂ, ಚಿಂತಿಸುವುದಕ್ಕೆ ಆಗದುದಾಗಿಯೂ, ಸದಾ ಏಕರೀತಿಯಾಗಿ (ನಿರ್ವಿಕಾರವಾಗಿ) ಇರುವುದಾಗಿಯೂ, ಅಚಲವಾಗಿಯೂ, ಸರ್ವದಾ ಸ್ಥಿರವಾಗಿಯೂ ಇರುವ ನನ್ನ ಸ್ವರೂಪವನ್ನು ಉಪಾಸನೆ ಮಾಡುವರೋ ಅವರು ನಿರ್ಗುಣ ಬ್ರಹ್ಮನಾಗಿರುವ ನನ್ನನ್ನೇ ಹೊಂದುವರು.(ಈ ವಿಷಯದಲ್ಲಿ "ಬ್ರಹ್ಮೈವಸನ್ ಬ್ರಹ್ಮಾಪ್ಯೇತಿ" ಎಂತಲೂ "ಬ್ರಹ್ಮವಿದ್ಬ್ರಹ್ಮೈವಭವತಿ" ಎಂತಲೂ ಶೃತಿಗಳಿರುವುವು. ಇವುಗಳ ಅರ್ಥ :- ಈ ಅಧಿಕಾರಿಗಳು ಬ್ರಹ್ಮರೂಪವಿದ್ದೇ ಬ್ರಹ್ಮವನ್ನು ಪಡೆದವರೆಂತಲೂ ಮತ್ತು ನಾವು ಬ್ರಹ್ಮವಾಗಿರುವೆನು ಹೀಗೆಂದು ತಮ್ಮ ಆತ್ಮರೂಪದಿಂದ ಬ್ರಹ್ಮವನ್ನು ತಿಳಿದವರು ಬ್ರಹ್ಮನೇ ಆಗುವರೆಂತಲೂ ಶೃತಿಗಳ ಅರ್ಥವು.

ಇನ್ನು ಜ್ಞಾನವಂತನು ಬ್ರಹ್ಮರೂಪವೇ ಎಂಬ ಮಾತು (ಜ್ಞಾನೀತ್ವಾತ್ಮೈವಮೇಮತಮ್) ಈ ವಚನದಿಂದ ಶ್ರೀ ಭಗವಂತನು ತಾನೇ ಈ ಗೀತಾ ಶಾಸ್ತ್ರದಲ್ಲಿ ಹೇಳಿರುವನು.

ಕ್ಲೇಶೋಽಧಿಕತರಸ್ತೇಷಾ, ಮವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ, ದೇಹವದ್ಭಿರವಾಪ್ಯತೇ ॥೫॥

ಪೂರ್ವೋಕ್ತ ನಿರ್ಗುಣಬ್ರಹ್ಮದಲ್ಲಿ ಆಸಕ್ತವಾದ ಚಿತ್ತವುಳ್ಳವರಿಗೆ (ತಮ್ಮ ಸಾಧನೆಯಲ್ಲಿ) ಕ್ಲೇಶವು ಅಧಿಕವಾಗಿರುವುದು. ಏಕೆಂದರೆ, ದೇಹಾಭಿಮಾನಿಗಳಿಗೆ ನಿರ್ಗುಣ ಬ್ರಹ್ಮದಲ್ಲಿ ನಿಷ್ಠೆಯು (ಸ್ಥಿತಿ, ಗತಿಯು) ಅತಿ ಕಷ್ಟದಿಂದಾಗುವುದು.

ಯೇ ತು ಸರ್ವಾಣಿ ಕರ್ಮಾಣಿ, ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ, ಮಾಂ ಧ್ಯಾಯಂತ ಉಪಾಸತೇ ॥೬॥
ತೇಷಾಮಹಂ ಸಮುದ್ಧರ್ತಾ, ಮೃತ್ಯುಸಂಸಾರಸಾಗರಾತ್ ।
ಭವಾಮಿ ನಚಿರಾತ್ಪಾರ್ಥ,ಮಯ್ಯಾವೇಶಿತಚೇತಸಾಮ್ ॥೭॥

ಯಾರು ಸಮಸ್ತ ಕರ್ಮಗಳನ್ನು ನನ್ನಲ್ಲಿಯೇ ಸಮರ್ಪಿಸಿ ನನ್ನ ಪರಾಯಣರಾಗಿ, ಅನನ್ಯ ಭಾವದಿಂದ ನನ್ನನ್ನು ಧ್ಯಾನಮಾಡಿ ಉಪಾಸಿಸುವರೋ, ಎಲೈ ಪಾರ್ಥನೇ ! ಹೀಗೆ ನನ್ನಲ್ಲಿಯೇ ನಿಲ್ಲಿಸಿರುವ ಚಿತ್ತವುಳ್ಳ ಭಕ್ತಜನರನ್ನು ಜನನ ಮರಣ ಪ್ರವಾಹವುಳ್ಳ ಸಂಸಾರ ಸಾಗರದಿಂದ ಬಹು ಶೀಘ್ರವಾಗಿಯೇ ಉದ್ಧಾರ ಮಾಡುವೆನು.

ಮಯ್ಯೇವ ಮನ ಆಧತ್ಸ್ವ, ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ, ಅತ ಊರ್ಧ್ವಂ ನ ಸಂಶಯಃ ॥೮॥

ಆದಕಾರಣ ನನ್ನಲ್ಲಿಯೇ ಮನಸ್ಸನ್ನು ನಿಲ್ಲಿಸುವವನಾಗು. ನನ್ನಲ್ಲಿಯೇ ಬುದ್ಧಿಯನ್ನು ಸೇರಿಸು. ಹೀಗೆ ಮಾಡಿದರೆ ನೀನು ನನ್ನಲ್ಲಿಯೇ ವಾಸಮಾಡುವೆ. ಇದರಲ್ಲಿ ಸಂಶಯವಿಲ್ಲ.

ಅಥ ಚಿತ್ತಂ ಸಮಾಧಾತುಂ, ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸ ಯೋಗೇನ ತತೋ, ಮಾಮಿಚ್ಛಾಪ್ತುಂ ಧನಂಜಯ ॥೯॥

ಎಲೈ ಧನಂಜಯನೇ ! ಒಂದು ವೇಳೆ ನನ್ನಲ್ಲಿ ಚಿತ್ತವನ್ನು ಸದಾ ಸ್ಥಿರವಾಗಿ ನಿಲ್ಲಿಸಲು ಆಗದೇ ಹೋದರೆ, ಪುನಃ ಪುನಃ ಸ್ಥಿರೀಕರಿಸುವ ಅಭ್ಯಾಸ ಯೋಗದಿಂದ ನನ್ನನ್ನು ಹೊಂದಲು ಅಪೇಕ್ಷಿಸುವವನಾಗು.

ಅಭ್ಯಾಸೇಽಪ್ಯಸಮರ್ಥೋಽಸಿ, ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ, ಕುರ್ವನ್ ಸಿದ್ಧಿಮವಾಪ್ಸ್ಯಸಿ ॥೧೦॥

ಹೀಗೆ ನನ್ನಲ್ಲಿ ಚಿತ್ತನಿರೋಧಮಾಡುವ ಅಭ್ಯಾಸಯೋಗವನ್ನು ಮಾಡಲು ಅಸಮರ್ಥನಾದರೆ ನನ್ನ ಪ್ರಸನ್ನತೆಯನ್ನುಂಟುಮಾಡುವ ಸತ್ಕರ್ಮಗಳನ್ನು ಮಾಡುವುದರಲ್ಲಿ ನಿರತನಾಗು. ನನಗೋಸ್ಕರವಾಗಿ ಮಾಡುವ ಕರ್ಮದಿಂದಲೂ ಚಿತ್ತಶುದ್ಧಿರೂಪವಾದ ಸಿದ್ಧಿಯನ್ನುಹೊಂದುವೆ. (ಇದು ಬ್ರಹ್ಮಭಾವಪ್ರಾಪ್ತಿಗೆ ಪರಂಪರಾಕಾರಣವಾಗಿರುವುದು.)

ಅಥೈತದಪ್ಯಶಕ್ತೋಽಸಿ, ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮಫಲತ್ಯಾಗಂ, ತತಃ ಕುರು ಯತಾತ್ಮವಾನ್ ॥೧೧॥

ಅದನ್ನೂ ಕೂಡ ಮಾಡಲು ಅಸಮರ್ಥನಾದರೆ ನನ್ನನ್ನು ಶರಣು ಹೊಂದಿದವನಾಗಿ ಮನಬುದ್ಧಿಗಳನ್ನು ವಶಪಡಿಸಿಕೊಂಡು ನೀನು ಸಮಸ್ತ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡು.

**ಶ್ರೇಯೋ ಹಿ ಜ್ಞಾನಮಭ್ಯಾಸಾ, ಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗ, ಸ್ತ್ಯಾಗಾಚ್ಛಾಂತಿರನಂತರಮ್ ॥೧೨॥**

ಸಮ್ಯಗ್ ಜ್ಞಾನರಹಿತನಾದವನಿಂದ (a) ಮಾಡಲ್ಪಡುವ ಅಭ್ಯಾಸಕ್ಕಿಂತಲೂ ಶಾಸ್ತ್ರಜನ್ಯಜ್ಞಾನವು (b) ಶ್ರೇಷ್ಠವು. ಶಾಸ್ತ್ರಜನ್ಯಜ್ಞಾನಕ್ಕಿಂತಲೂ ಭಗವಂತನ ಸ್ವರೂಪಧ್ಯಾನವು ಶ್ರೇಷ್ಠವಾಗಿರುವುದು. ಧ್ಯಾನಕ್ಕಿಂತಲೂ ಕರ್ಮಫಲತ್ಯಾಗವು ಶ್ರೇಷ್ಠವೆನಿಸುವುದು. ಕರ್ಮಫಲತ್ಯಾಗಾನಂತರ ಶಾಂತಿಯು ದೊರೆಯುವುದು.

**ಅದ್ವೇಷ್ಟಾ ಸರ್ವಭೂತಾನಾಂ, ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ, ಸಮದುಃಖಸುಖಃ ಕ್ಷಮೀ ॥೧೩॥**

**ಸಂತುಷ್ಟಃ ಸತತಂ ಯೋಗೀ, ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿ, ರ್ಯೋ ಮೇಭಕ್ತಃ ಸ ಮೇ ಪ್ರಿಯಃ॥**

(ಉತ್ತಮಶಾಂತಿ ರೂಪನಾಗುವ ಬ್ರಹ್ಮವಿದ್ವರನಲ್ಲಿ ಸ್ವಾಭಾವಿಕವಾಗಿರುವ ಧರ್ಮಗಳನ್ನು ಏಳು ಶ್ಲೋಕಗಳಲ್ಲಿ ಹೇಳಿದೆ.) ಸಮಸ್ತ ಪ್ರಾಣಿಗಳಲ್ಲಿಯೂ ದ್ವೇಷರಹಿತನಾಗಿಯೂ, ಎಲ್ಲರನ್ನೂ ಸ್ವಾರ್ಥವಿಲ್ಲದೆ ಮಿತ್ರಭಾವದಿಂದ ಪ್ರೀತಿ ಮಾಡುವನಾಗಿಯೂ, ಅತಿ ಕರುಣಾಮಯನಾಗಿಯೂ, ಅಹಂಕಾರ ಮಮಕಾರ (x) ಗಳಿಲ್ಲದವನಾಗಿಯೂ, ಸುಖ ದುಃಖಗಳನ್ನು ಸಮಾನವೆಂದೆಣಿಸಿದವನಾಗಿಯೂ, ಕ್ಷಮಾಗುಣವುಳ್ಳವನಾಗಿಯೂ, ಸರ್ವದಾ ಸಂತೋಷವುಳ್ಳವನಾಗಿಯೂ, ಸಮಾಹಿತಚಿತ್ತವುಳ್ಳವನಾಗಿಯೂ, ಮನೋ ಬುದ್ಧಿ ಇಂದ್ರಿಯಾದಿಗಳನ್ನು ವಶಗೈದವನಾಗಿಯೂ, ನಾನೇ ಸರ್ವೋತ್ತಮನೆಂಬ ದೃಢನಿಶ್ಚಯವುಳ್ಳವನಾಗಿಯೂ, ನನ್ನಲ್ಲಿಯೇ ಸಮರ್ಪಿಸಲ್ಪಟ್ಟ ಮನೋಬುದ್ಧಿಯುಳ್ಳವನಾಗಿಯೂ ಇರುವ ಯಾವ ಭಕ್ತನಿರುವನೋ ಅವನೇ ನನಗೆ ಪ್ರಿಯನು.

**ಯಸ್ಮಾನ್ನೋದ್ವಿಜತೇ ಲೋಕೋ, ಲೋಕಾನ್ನೋದ್ವಿಜತೇ ಚ ಯಃ।**
**ಹರ್ಷಾಮರ್ಷಭಯೋದ್ವೇಗೈ, ರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥೧೫॥**

---

(a) ಸರಿಯಾದ ತಿಳುವಳಿಕೆಯಿಲ್ಲದವನಿಂದ. (b) ಗುರುಮುಖೇಣ ಮಾಡಿದ ಶಾಸ್ತ್ರಾಧ್ಯಯನದಿಂದ ಉಂಟಾದ ತಿಳುವಳಿಕೆ; ಪರೋಕ್ಷಜ್ಞಾನ.

(x) ನಾನು ನನ್ನದು ಎಂಬ ಭಾವನೆ.

Funding: Tattva Heritage Foundation,Kolkata. Digitization: eGangotri.



ಯಾವ ನನ್ನ ಅತ್ಯಂತ ಪ್ರೇಮಿಯಾದ ಭಕ್ತನ ದೆಸೆಯಿಂದ ಈ ಲೋಕವು ವ್ಯಾಕುಲಗೊಳ್ಳುವುದಿಲ್ಲವೋ ಮತ್ತು ಯಾವ ನನ್ನ ಭಕ್ತನಾದವನು ಈ ಲೋಕದ ಜನರಿಂದ ಭಯ ಸಂತಾಪಾದಿ ವ್ಯಾಕುಲತೆಯನ್ನು ಹೊಂದುವುದಿಲ್ಲವೋ ಮತ್ತು ಹರ್ಷ, ಅಸಹನ, ಭಯ, ಕ್ಷೋಭಗಳಿಂದ ಯಾವನು ಬಿಡಲ್ಪಟ್ಟಿರುವನೋ, ಅವನೇ ನನಗೆ ಪ್ರಿಯನು.

**ಅನಪೇಕ್ಷಃ ಶುಚಿರ್ದಕ್ಷ, ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ, ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥**

ಯಾವ ನನ್ನ ಭಕ್ತನು ಯಾವದೊಂದು ಅಪೇಕ್ಷೆಯೂ ಇಲ್ಲದವನಾಗಿಯೂ, ಸದಾಚಾರ ಸಂಪನ್ನನಾಗಿಯೂ, (a) ಸಾರಾಸಾರ ವಿಚಾರಮಾಡುವುದರಲ್ಲಿ ಅತಿ ಚತುರನೂ, ವಿಷಯಗಳಲ್ಲಿ ಉದಾಸೀನನೂ (ರಾಗದ್ವೇಷರಹಿತನೂ) ಅಥವಾ ಪಕ್ಷಪಾತರಹಿತನೂ, ವ್ಯಥೆಯಿಲ್ಲದವನಾಗಿಯೂ, ಪರಮೇಶ್ವರನಾದ ನನ್ನನ್ನು ಹೊಂದುವ ಇಚ್ಛೆಯಿಂದ ಬಂಧನಕ್ಕೆ ಕಾರಣವಾದ ಸರ್ವಕರ್ಮಗಳನ್ನು ಪರಿತ್ಯಾಗಮಾಡಿದವನಾಗಿಯೂ (b) ಇರುವನೋ ಅವನೇ ನನಗೆ ಪ್ರಿಯನು.

**ಯೋ ನ ಹೃಷ್ಯತಿ ನ ದ್ವೇಷ್ಟಿ, ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ, ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥೧೭॥**

ಯಾವನು ಇಷ್ಟವಸ್ತು ಪ್ರಾಪ್ತವಾದಾಗ ಹರ್ಷವನ್ನು ಪಡೆಯುವುದಿಲ್ಲವೋ, ಹಾಗೆಯೇ ಅನಿಷ್ಟವಸ್ತು ಪ್ರಾಪ್ತಿಯಾದಾಗ ದ್ವೇಷವನ್ನು ಮಾಡುವುದಿಲ್ಲವೋ, ಯಾವುದನ್ನೂ ಕುರಿತು ಶೋಕಮಾಡುವುದಿಲ್ಲವೋ, ಯಾವುದನ್ನೂ

---

(a) ಬಾಹ್ಯ ಶೌಚ, ಅಂತರ ಶೌಚನೆಂದು ಶೌಚವು ಎರಡು ಬಗೆಯಾಗಿದೆ. ಜಲ, ಮೃತ್ತಿಕಾದಿಗಳಿಂದ ಶರೀರವನ್ನು ತೊಳೆದು ಶುದ್ಧವಾಗಿಟ್ಟಿರುವುದು, ಶುದ್ಧ ವಸ್ತ್ರಗಳನ್ನು ಧರಿಸುವುದು ಇತ್ಯಾದಿಗಳು ಬಾಹ್ಯಶುದ್ಧಿ ಎನಿಸುವುದು. ಅಂತಃಕರಣವನ್ನು ಕಾಮಾದಿ ದೋಷರಹಿತವಾಗಿ ಮಾಡಿ ಶುದ್ಧವಾಗಿಟ್ಟಿರುವುದೇ ಅಂತರಶೌಚ.

(b) ಇಹಲೋಕ ಪರಲೋಕದ ಸುಖಗಳನ್ನು ಉಂಟುಮಾಡುವ ಲೌಕಿಕ ವೈದಿಕ ಕರ್ಮಗಳು 'ಸರ್ವಾರಂಭ' ಎನ್ನಲ್ಪಡುವುವು. ಇಂಥಾ ಸರ್ವಾರಂಭಗಳನ್ನುಯಾವ ಸನ್ಯಾಸಿಯು ಪರಿತ್ಯಜಿಸಿರುವನೋ ಅವನಿಗೆ 'ಸರ್ವಾರಂಭ ಪರಿತ್ಯಾಗೀ' ಎಂದು ಹೆಸರು.

ಅಪೇಕ್ಷಿಸುವುದಿಲ್ಲವೋ ಮತ್ತು ಯಾವನು ಶುಭಾಶುಭ ಕರ್ಮಗಳನ್ನು ನನ್ನಲ್ಲಿ ಸಮರ್ಪಿಸುವವನಾಗಿರುವನೋ, ಅಂತಹ ಭಕ್ತಿಯುಕ್ತ ಪುರುಷನು ನನಗೆ ಪ್ರಿಯನು

**ಸಮಃ ಶತ್ರೌ ಚ ಮಿತ್ರೇ ಚ, ತಥಾ ಮಾನಾಪಮಾನಯೋಃ ।**
**ಶೀತೋಷ್ಣ ಸುಖದುಃಖೇಷು, ಸಮಃ ಸಂಗವಿವರ್ಜಿತಃ ॥೧೮॥**
**ತುಲ್ಯನಿಂದಾಸ್ತುತಿರ್ಮೌನೀ, ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿ, ರ್ಭಕ್ತಿಮಾನ್ ಮೇ ಪ್ರಿಯೋ ನರಃ ॥೧೯॥**

ಯಾವ ಮನುಷ್ಯನು ಶತ್ರು—ಮಿತ್ರರಲ್ಲಿಯೂ, ಮಾನ ಅವಮಾನ ಉಂಟಾದಾಗಲೂ, ಶೀತೋಷ್ಣ ಸುಖದುಃಖಗಳ ಅನುಭವಕಾಲದಲ್ಲಿ ಸಮ ಭಾವನೆಯುಳ್ಳವನಾಗಿಯೂ, ಕರ್ತೃತ್ವಾಭಿಮಾನವಿಲ್ಲದವನಾಗಿಯೂ, ನಿಂದಾ ಸ್ತುತಿಗಳನ್ನು ಸಮಾನ ವೆಂದೆಣಿಸುವವನಾಗಿಯೂ, ಮಿತ ಭಾಷಿಯಾಗಿಯೂ, ದೈವವಶಾತ್ ಪ್ರಾಪ್ತಿಯಾದ ಎಂತಹ ಸಾಧಾರಣ ವಸ್ತುವೇ ಆಗಲಿ ಅದರಿಂದಲೇ ಸಂತುಷ್ಟನಾಗುವವನಾಗಿಯೂ, ನಿವಾಸ ಸ್ಥಾನದಲ್ಲಿ ಮಮತೆಯಿಲ್ಲದವನಾಗಿಯೂ, ಸ್ಥಿರಬುದ್ಧಿಯುಳ್ಳವನಾಗಿಯೂ ಇರುವನೋ ಇಂತಹ ಭಕ್ತಿಯುಳ್ಳ ಪುರುಷನು ಪರಮೇಶ್ವರನಾದ ನನಗೆ ಅತಿ ಪ್ರಿಯನು.

**ಯೇ ತು ಧರ್ಮ್ಯಾಮೃತಮಿದಂ, ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ಧಧಾನಾಮತ್ಪರಮಾ, ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಭಕ್ತಿಯೋಗೋನಾಮ ದ್ವಾದಶೋಽಧ್ಯಾಯಃ**

(ಈ ಹಿಂದೆ ಏಳು ಶ್ಲೋಕಗಳಲ್ಲಿ ವಿವರಿಸಿದ ಬ್ರಹ್ಮವಿದ್ವರರ ಧರ್ಮ ಗಳನ್ನು ಸಾಧಕರು ಅನುಷ್ಠಿಸತಕ್ಕದ್ದು)

ಯಾರು ಅಧಿಕ ಶ್ರದ್ಧಾಯುಕ್ತರಾಗಿ ನನ್ನ ಪರಾಯಣರಾಗಿ ಪೂರ್ವೋಕ್ತ ಧರ್ಮಮಯವಾದ ಮತ್ತು ಅಮೃತಪ್ರಾಯವಾದ ಈ ನನ್ನ ಉಪದೇಶವನ್ನು ನಾನು ಹೇಳಿದ ಮೇರೆಗೆ ಅನುಷ್ಠಿಸಿ ನನ್ನನ್ನು ಯಾರು ಉಪಾಸಿಸುವರೋ ಆ ಭಕ್ತರೇ ನನಗೆ ಅತ್ಯಂತ ಪ್ರಿಯರು.

ಇಂತು ಶ್ರೀಮದ್ಭಗವದ್ಗೀತೆಯುಲ್ಲಿ ಭಕ್ತಿಯೋಗವೆಂಬ
ಹನ್ನೆರಡನೆಯ ಅಧ್ಯಾಯವು ಸಂಪೂರ್ಣವು.



# ಅಥ ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗೋ ನಾಮ ತ್ರಯೋದಶೋಽಧ್ಯಾಯಃ

## ॥ ತೃತೀಯ ಷಟ್ಕಮ್ ॥

## ( ಜ್ಞಾನಕಾಂಡಂ—ಅಸಿಪದನಿರೂಪಣಂ )

### ಶ್ರೀ ಭಗವಾನುವಾಚ

**ಇದಂ ಶರೀರಂ ಕೌಂತೇಯ, ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ, ಕ್ಷೇತ್ರಜ್ಞ ಇತಿ ತದ್ವಿದಃ ॥೧॥**

ಶ್ರೀ ಭಗವಂತನಿಂತೆಂದನು:—ಎಲೈ ಕುಂತೀಪುತ್ರನೇ! ಈ ಶರೀರವು "ಕ್ಷೇತ್ರ" ಎಂಬ ನಾಮದಿಂದ ಕರೆಯಲ್ಪಟ್ಟದೆ. ಇದನ್ನು ಯಾವನು ತಿಳಿಯುವನೋ ಅವನನ್ನು ಕ್ಷೇತ್ರಜ್ಞನೆಂಬುದಾಗಿ ಕ್ಷೇತ್ರಕ್ಷೇತ್ರಜ್ಞರ (x) ಸ್ವರೂಪವನ್ನು ಬಲ್ಲ ಜ್ಞಾನಿಗಳು ಹೇಳುತ್ತಾರೆ.

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ, ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ, ಯತ್ತಜ್ಜ್ಞಾನಂ ಮತಂ ಮಮ ॥**

ಎಲೈ ಭರತ ವಂಶೋದ್ಭವನೇ! ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ನಾನೆಂಬುದಾಗಿ ತಿಳಿಯುವನಾಗು. ಕ್ಷೇತ್ರಕ್ಷೇತ್ರಜ್ಞರ ಯಾವ ಜ್ಞಾನವಿರುವುದೋ ಅದೇ ಜ್ಞಾನವೆಂಬುದಾಗಿ ನನ್ನ ಅಭಿಪ್ರಾಯವು.

**ತತ್ ಕ್ಷೇತ್ರಂ ಯಚ್ಚ ಯಾದೃಕ್ಚ, ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ, ತತ್ಸಮಾಸೇನ ಮೇ ಶೃಣು ॥೩॥**

ಈ ಶರೀರವೆಂಬ ಕ್ಷೇತ್ರವು ಎಂಥಾದ್ದೋ, ಅದರ ಸ್ವಭಾವವು ಎಂತಹುದೋ ಅದರ ವಿಕಾರಗಳು ಯಾವುವೋ, ಯಾವ ಕ್ಷೇತ್ರವೆಂಬ ಕಾರಣ ವಸ್ತುವಿನಿಂದ ಯಾವ ಕಾರ್ಯವಸ್ತು ಉತ್ಪನ್ನವಾಯಿತೋ, ಮತ್ತು ಕ್ಷೇತ್ರಜ್ಞನು ಯಾವ

---

(x) ಧಾನ್ಯಾದಿಗಳನ್ನು ಬೆಳೆಯುವ ಗದ್ದೆ ಹೊಲಗಳಂತೆ, ಪುಣ್ಯ ಪಾಪವೆಂಬ ಕೃಷಿಯಿಂದ ಸುಖದುಃಖಗಳೆಂಬ ಫಸಲನ್ನು ಬೆಳೆಯುವುದರಿಂದ ಈ ಶರೀರವನ್ನು ಕ್ಷೇತ್ರವೆಂದು ಕರೆಯುತ್ತಾರೆ. ಈ ಶರೀರವನ್ನು ಆಳುವವನೂ ಫಲವನ್ನು ಅನುಭವಿಸುವವನೂ ಕ್ಷೇತ್ರಜ್ಞನು.

ಸ್ವಭಾವವುಳ್ಳವನಾಗಿರುವನೋ ಮತ್ತು ಯಾವ ಪ್ರಭಾವವುಳ್ಳವನಾಗಿರುವನೋ—ಇವೆಲ್ಲವನ್ನೂ ಸಂಕ್ಷೇಪದಿಂದ ಕೇಳುವವನಾಗು.

ಋಷಿಭಿರ್ಬಹುಧಾ ಗೀತಂ, ಛಂದೋಭಿರ್ವಿವಿಧೈಃ ಪೃಥಕ್ ।
ಬ್ರಹ್ಮಸೂತ್ರ ಪದೈಶ್ಚೈವ, ಹೇತುಮದ್ಭಿರ್ವಿನಿಶ್ಚಿತೈಃ ॥೪॥

ಈ ಕ್ಷೇತ್ರ ಕ್ಷೇತ್ರಜ್ಞರ ಸ್ವರೂಪವನ್ನು ವಿಸ್ತಾರವಾಗಿ ವಶಿಷ್ಠಾದಿ ಋಷಿಗಳು ನಿರೂಪಿಸಿರುವರು. ಋಗ್ವೇದಾದಿಗಳೂ ಕೂಡ ಇದನ್ನು ಬಹು ಪ್ರಕಾರವಾಗಿ ಪ್ರತಿಪಾದಿಸಿವೆ.

ಅಲ್ಲದೆ ಯುಕ್ತಿಯಿಂದ ನ್ಯಾಯ ನಿರ್ಣಯಮಾಡುವ ಬ್ರಹ್ಮಸೂತ್ರ ಪದಗಳಿಂದಲೂ ಸಹ ಅನೇಕ ಪ್ರಕಾರವಾಗಿ ನಿರೂಪಿಸಲ್ಪಟ್ಟಿರುವುದು.

ಮಹಾಭೂತಾನ್ಯಹಂಕಾರೋ, ಬುದ್ಧಿರವ್ಯಕ್ತಮೇವ ಚ ।
ಇಂದ್ರಿಯಾಣಿ ದಶೈಕಂ ಚ, ಪಂಚ ಚೇಂದ್ರಿಯ ಗೋಚರಾಃ ॥೫॥

ಇಚ್ಛಾ ದ್ವೇಷಃ ಸುಖಂ ದುಃಖಂ, ಸಂಘಾತ ಶ್ಚೇತನಾ ಧೃತಿಃ ।
ಏತತ್ ಕ್ಷೇತ್ರಂ ಸಮಾಸೇನ, ಸವಿಕಾರಮುದಾಹೃತಮ್ ॥೬॥

ಪಂಚಮಹಾಭೂತಗಳೂ, ಅಹಂಕಾರವೂ, ಬುದ್ಧಿಯೂ (ಮಹತ್ತತ್ವವೂ), ಮೂಲಪ್ರಕೃತಿಯೂ, ಮನಸ್ಸಿನಿಂದಕೂಡಿದ ದಶೇಂದ್ರಿಯಗಳೂ, ಶಬ್ದಾದಿ ಪಂಚವಿಷಯಗಳೂ, ಇಚ್ಛೆಯೂ, ದ್ವೇಷವೂ, ಸುಖವೂ, ದುಃಖವೂ, ಶರೀರವೂ, ಮನೋವೃತ್ತಿಯೂ, ಪ್ರಾಣಾದಿಗಳೂ, ಇವುಗಳೆಲ್ಲವೂ ಸೇರಿ ಕ್ಷೇತ್ರವಾಗಿರುವುದು. ಹೀಗೆ ವಿಕಾರಸಹಿತವಾದ ಕ್ಷೇತ್ರದ ಸ್ವರೂಪವು ನನ್ನಿಂದ ಸಂಕ್ಷೇಪವಾಗಿ ಹೇಳಲ್ಪಟ್ಟಿತು.

ಅಮಾನಿತ್ವಮದಂಭಿತ್ವ, ಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ, ಸ್ಥೈರ್ಯಮಾತ್ಮ ವಿನಿಗ್ರಹಃ ॥೭॥
ಇಂದ್ರಿಯಾರ್ಥೇಷು ವೈರಾಗ್ಯ, ಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿ, ದುಃಖದೋಷಾನುದರ್ಶನಮ್ ॥೮॥
ಅಸಕ್ತಿರನಭಿಷ್ವಂಗಃ, ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವ, ಮಿಷ್ಟಾನಿಷ್ಟೋಪಪತ್ತಿಷು ॥೯॥
ಮಯಿ ಚಾನನ್ಯಯೋಗೇನ, ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವ, ಮರತಿರ್ಜನಸಂಸದಿ ॥೧೦॥

**ಅಧ್ಯಾತ್ಮಜ್ಞಾನನಿತ್ಯತ್ವಂ, ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತ, ಮಜ್ಞಾನಂ ಯದತೋಽನ್ಯಥಾ ॥೧೧॥**

ಮಾನವನ್ನು ಅಪೇಕ್ಷಿಸದಿರುವುದು (ಸನ್ಮಾನ, ಪೂಜೆ, ಪ್ರತಿಷ್ಠೆ, ದೊಡ್ಡಸ್ತಿಕೆ ಮುಂತಾದುವನ್ನು ಬಯಸದಿರುವಿಕೆ), ದಂಭವಿಲ್ಲದಿರುವುದು, (a) ಅಹಿಂಸೆಯೂ, ಕ್ಷಮಾಗುಣವೂ, ಸರಳತೆಯೂ, (b) ಶ್ರದ್ಧಾಭಕ್ತಿಸಹಿತ ಸದ್ಗುರುವಿನ ಉಪಾಸನೆಯೂ (ಸೇವಾದಿ ಕೈಂಕರ್ಯಗಳೂ), ಶುಚಿಯಾಗಿರುವಿಕೆಯೂ, ಮನೋಸ್ಥೈರ್ಯವೂ, (c) ಮನೋನಿಗ್ರಹವೂ, ಶಬ್ದಾದಿ ವಿಷಯಗಳಲ್ಲಿ ವೈರಾಗ್ಯವೂ, ಅಹಂಕಾರವಿಲ್ಲದಿರುವಿಕೆಯೂ, ಹುಟ್ಟು ಸಾವು ವೃದ್ಧಾಪ್ಯ ರೋಗ ದುಃಖ—ಇವುಗಳಲ್ಲಿರುವ ದೋಷವನ್ನು ಪದೇ ಪದೇ ವಿಚಾರಮಾಡುವುದೂ, ವಿಷಯಗಳಲ್ಲಿ ಆಸಕ್ತಿಯಿಲ್ಲದಿರುವುದೂ, ಸ್ತ್ರೀ ಪುತ್ರ ಗೃಹಾದಿಗಳಲ್ಲಿ ಮಮತ್ವಬುದ್ಧಿ ಇಲ್ಲದಿರುವುದೂ, ಇಷ್ಟಾನಿಷ್ಟ ಪ್ರಾಪ್ತಿಯಲ್ಲಿ ಸರ್ವದಾ ಸಮಚಿತ್ತದಿಂದಿರುವಿಕೆಯೂ, ಪರಮೇಶ್ವರನಾದ ನನ್ನಲ್ಲಿ ಅಖಂಡವಾದ ಭಕ್ತಿಯಿಂದ ಇರುವಿಕೆಯೂ, ಏಕಾಂತವಾದ ಸ್ಥಾನದಲ್ಲಿ ವಾಸಮಾಡತಕ್ಕ ಸ್ವಭಾವವೂ, ಜನಸಮುದಾಯದಲ್ಲಿ ಇರಲು ಪ್ರೀತಿಯಿಲ್ಲದಿರುವಿಕೆಯೂ, ಅಧ್ಯಾತ್ಮ ವಿಚಾರದಲ್ಲಿ ಸದಾ ತತ್ಪರತೆಯೂ, ತತ್ವಜ್ಞಾನದ ಫಲವಾದ ಮೋಕ್ಷವನ್ನು ನೋಡುವಿಕೆಯೂ, ಇವುಗಳೆಲ್ಲವೂ (ಕೆಲವು ಸಾಕ್ಷಾತ್ತಾಗಿಯೂ ಕೆಲವು ಪರಂಪರೆಯಿಂದಲೂ) ಜ್ಞಾನಸಾಧನೆಗಳಾದುದರಿಂದ ಜ್ಞಾನವೆಂಬುದಾಗಿಯೇ ಜ್ಞಾನಿಗಳಿಂದ ಹೇಳಲ್ಪಟ್ಟಿದೆ. ಇವುಗಳಿಗೆ ವಿರುದ್ಧವಾಗಿರುವುದೇ ಅಜ್ಞಾನವು. (d)

---

(a) ತಾನು ಮಾಡುವ ಕಾರ್ಯವನ್ನು ಇತರರು ನೋಡಿ ತನ್ನನ್ನು ಹೊಗಳಬೇಕೆಂಬ ಭಾವನೆಯಿಂದ ಮಾಡುವುದು ದಂಭವೆನಿಸುವುದು. (b) ಮನ, ವಾಣಿಯಲ್ಲಿ ಕುಟಿಲತನ ವಿಲ್ಲದಿರುವಿಕೆ. (c) ಪ್ರಾರಂಭಿಸಿದ ಕಾರ್ಯಕ್ಕೆ ವಿಘ್ನಗಳು ಒದಗಿದರೂ, ಎದೆಗೆಡದೆ, ಅದನ್ನು ಪುನಃ ಪುನಃ ಅಧಿಕ ಪ್ರಯತ್ನದಿಂದ ಸಾಧಿಸತಕ್ಕ ಮನೋಬಲ. (d) ಅಮಾನಿತ್ವಾದಿ ೨೦ ಗುಣಗಳಿಗೆ ನೇರವಿರುದ್ಧವಾದ ಪ್ರತಿಷ್ಠೆ, ದಂಭ, ಹಿಂಸಾದಿಗಳು ಅಜ್ಞಾನದ ಕಾರ್ಯಗಳಾಗಿವೆ. ಆದ ಪ್ರಯುಕ್ತ ಅವನ್ನು ಅಜ್ಞಾನವೆಂದೇ ಕರೆಯಲಾಗಿದೆ.

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ, ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ, ನ ಸತ್ತನ್ನಾಸದುಚ್ಯತೇ ॥೧೨॥**

ಯಾವುದನ್ನು ತಿಳಿದುದೇ ಆದರೆ ಅಮೃತಮಯವಾದ ಮೋಕ್ಷವನ್ನು ಹೊಂದಬಹುದೋ ಆ ಜ್ಞೇಯಸ್ವರೂಪನಾದ ಪರಮಾತ್ಮನ ಸ್ವರೂಪವನ್ನು ಹೇಳುವೆನು. ಆ ಬ್ರಹ್ಮವು ಅನಾದಿಯಾಗಿಯೂ, ಸರ್ವೋತ್ಕೃಷ್ಟವಾಗಿಯೂ (ನಿರ್ವಿಶೇಷವಾಗಿಯೂ) ಇರುವುದು . ಇನ್ನು ಆ ಬ್ರಹ್ಮವು ಸತ್ ಎಂತಲೂ ಮತ್ತು ಅಸತ್ ಎಂತಲೂ ಜ್ಞಾನಿಗಳಿಂದ ಹೇಳಲ್ಪಡುವುದಿಲ್ಲ. (ಅಂದರೆ ನಿರ್ವಿಶೇಷವಾಗಿರುವುದರಿಂದ ವಾಣಿ ಮನಗಳಿಗೆ ಅಗೋಚರವೆಂಬ ಭಾವ).

**ಸರ್ವತಃ ಪಾಣಿಪಾದಂ, ತತ್ಸರ್ವತೋಽಕ್ಷಿ ಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ, ಸರ್ವಮಾವೃತ್ಯ ತಿಷ್ಠತಿ ॥೧೩॥**

ಆ ಪರಬ್ರಹ್ಮವು ವಿಶ್ವಾಕಾರವಾಗಿ ಸರ್ವತ್ರವ್ಯಾಪಿಸಿದೆ. ಅದು ಎಲ್ಲಾ ಕಡೆಗಳಲ್ಲಿಯೂ ಹಸ್ತಪಾದಗಳುಳ್ಳದ್ದಾಗಿಯೂ, ಸರ್ವ ದಿಕ್ಕುಗಳಲ್ಲಿಯೂ ಶಿರಸ್ಸು, ಮುಖಗಳುಳ್ಳದ್ದಾಗಿಯೂ ಮತ್ತು ಎಲ್ಲಾ ಕಡೆಗಳಲ್ಲಿಯೂ ಕಣ್ಣು, ಕಿವಿಗಳುಳ್ಳದ್ದಾಗಿಯೂ ಇದೆ. ಅಲ್ಲದೆ ಜ್ಞೇಯವಾದ ಈ ಬ್ರಹ್ಮವು ಲೋಕದಲ್ಲಿ ಸಮಸ್ತವನ್ನೂ ಆವರಿಸಿಕೊಂಡಿರುವುದು.

**ಸರ್ವೇಂದ್ರಿಯ ಗುಣಾಭಾಸಂ, ಸರ್ವೇಂದ್ರಿಯ ವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ, ನಿರ್ಗುಣಂ ಗುಣ ಭೋಕ್ತೃಚ ॥೧೪॥**

ಆ ಜ್ಞೇಯ ಬ್ರಹ್ಮವು ಸರ್ವೇಂದ್ರಿಯಗಳ ಮೂಲಕ ನಾನಾ ಬಗೆಯ ಕರ್ಮಗಳನ್ನು ಮಾಡುತ್ತಿರುವಂತೆ ಭಾಸಮಾನವಾದರೂ, ವಸ್ತುತಃ ಸರ್ವೇಂದ್ರಿಯರಹಿತವೂ, ಸಮಸ್ತವನ್ನೂ ಧಾರಣ—ಪೋಷಣಮಾಡುವದಾದರೂ ಅವುಗಳಲ್ಲಿ ಅಸಕ್ತ (ಅಸಂಗ)ವಾಗಿರುವುದು ಮತ್ತು ಪ್ರಕೃತಿಯ ಸತ್ವಾದಿಗುಣಗಳ ಫಲವಾದ ಸುಖದುಃಖಗಳನ್ನು ಅನುಭವಿಸುವದಾಗಿ ಕಂಡು ಬಂದರೂ ವಸ್ತುತಃ ನಿರ್ಗುಣವಾಗಿರುವುದು.

**ಬಹಿರಂತಶ್ಚ ಭೂತಾನಾ, ಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ, ದೂರಸ್ಥಂ ಚಾಂತಿಕೇ ಚ ತತ್ ॥೧೫॥**

ಆ ಪರಬ್ರಹ್ಮವು ಎಲ್ಲಾ ಪ್ರಾಣಿಗಳ ಒಳಹೊರಗೂ ಏಕರೂಪವಾಗಿ ವ್ಯಾಪಿಸಿದೆ; ಅದು ಚರಾಚರ ರೂಪದಿಂದ ಸ್ಥೂಲವಾಗಿಯೂ, ಅತ್ಯಂತ

ಸೂಕ್ಷ್ಮವಾಗಿರುವುದರಿಂದ ಗೋಚರವಾಗದೆ ಇದೆ; ಮತ್ತು ಅಜ್ಞಾನಿಗಳಿಗೆ ದೂರವಾಗಿಯೂ ಮತ್ತು ಜ್ಞಾನಿಗಳಿಗೆ ತಮ್ಮ ಸ್ವರೂಪಭೂತವಾಗಿಯೂ ಇರುವುದು.

**ಅವಿಭಕ್ತಂ ವಿಭಕ್ತೇಷು, ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ, ಗ್ರಸಿಷ್ಣು ಪ್ರಭ ವಿಷ್ಣು ಚ ॥೧೬॥**

ಮತ್ತು ಜ್ಞೇಯವಾದ ಬ್ರಹ್ಮವು ಆಕಾಶದಂತೆ ಏಕರೂಪವಾಗಿ ಮತ್ತು ಪರಿಪೂರ್ಣವಾಗಿ ಇದ್ದರೂ ಭೂತಸಮುದಾಯದಲ್ಲಿ ಪರಿಚ್ಛಿನ್ನ(ಖಂಡಖಂಡ) ವಾಗಿ ಇರುವಂತೆ ಪ್ರತೀತಿಯಾಗುತ್ತದೆ. (X) ತಿಳಿಯಲು ಯೋಗ್ಯವಾದ ಈ ಬ್ರಹ್ಮವು ಸಮಸ್ತ ಭೂತಗಳ ಧಾರಣೆ ಪೋಷಣೆಮಾಡುವದಾಗಿಯೂ, ಸಂಹಾರಮಾಡುವದಾಗಿಯೂ ಮತ್ತು ಪುನಃ ಉತ್ಪತ್ತಿಮಾಡುವುದಾಗಿಯೂ ಇರುವುದು.

**ಜ್ಯೋತಿಷಾಮಪಿ ತಜ್ಜ್ಯೋತಿ, ಸ್ತಮಸಃ ಪರ ಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ, ಹೃದಿ ಸರ್ವಸ್ಯ ವಿಷ್ಠಿತಮ್॥೧೭॥**

ಆ ಬ್ರಹ್ಮವು ಸೂರ್ಯಾದಿ ಜ್ಯೋತಿಗಳಿಗೂ ಜ್ಯೋತಿಯಾಗಿರುವುದು.(೩) ಮತ್ತು ಅಜ್ಞಾನಾಂಧಕಾರದಿಂದ ಭಿನ್ನವಾಗಿರುವುದು. ಬಳಿಕ ಅದು ಜ್ಞಾನ ಸ್ವರೂಪವಾಗಿಯೂ, ಜ್ಞೇಯಸ್ವರೂಪವಾಗಿಯೂ, ತತ್ವಜ್ಞಾನದಿಂದ ಹೊಂದಲು ಯೋಗ್ಯವಾಗಿಯೂ ಮತ್ತು ಸರ್ವ ಪ್ರಾಣಿಗಳ ಬುದ್ಧಿಯಲ್ಲಿ ವಿಶೇಷ ರೂಪದಿಂದ ಅಭಿವ್ಯಕ್ತಿಯನ್ನು ಹೊಂದಿರುವುದು.

**ಇತಿ ಕ್ಷೇತ್ರಂ ತಥಾ ಜ್ಞಾನಂ, ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ, ಮದ್ಭಾವಾಯೋಪಪದ್ಯತೇ ॥೧೮॥**

---

(X) ಉಪಾಧಿಸಹಿತವಾಗಿರುವಾಗ ದೇಶಕಾಲವಸ್ತುಗಳಿಂದ ವಿಭಾಗ ಮಾಡಲ್ಪಟ್ಟಂತೆಯೂ ಬಹುರೂಪವಾಗಿ ಇರುವಂತೆಯೂ ಜ್ಞೇಯವು ಕಂಡುಬರುತ್ತದೆ. ಆದರೆ ಅದು ವಸ್ತುತಃ ಹೀಗೆ ಖಂಡಾತ್ಮಕವಾಗಿಲ್ಲ. ತಾನೇತಾನಾಗಿ ಪರಿಪೂರ್ಣವಾಗಿರುತ್ತದೆ.

(೩) ಸೂರ್ಯ ಚಂದ್ರಾಗ್ನಿ ಮಿಂಚು ಮುಂತಾದ ಬಾಹ್ಯ ಜ್ಯೋತಿಗಳನ್ನೂ, ಮನೋಬುದ್ಧ್ಯಾದಿ ಅಂತರ್ಜ್ಯೋತಿಗಳನ್ನೂ ಪ್ರಕಾಶಪಡಿಸುವುದರಿಂದ ಜ್ಯೋತಿಗೂ ಜ್ಯೋತಿಯಾಗಿದೆ; ಸ್ವಯಂ ಜ್ಯೋತಿ, ಸಾಧನನಿರಪೇಕ್ಷ ಜ್ಯೋತಿ.

ಈ ರೀತಿಯಾಗಿ ಕ್ಷೇತ್ರ, ಜ್ಞಾನ ಮತ್ತು ಜ್ಞೇಯಗಳ ಸ್ವರೂಪಗಳು ಸಂಕ್ಷೇಪವಾಗಿ ನನ್ನಿಂದ ಹೇಳಲ್ಪಟ್ಟವು. ನನ್ನ ಭಕ್ತನು (ಉಪಾಸಕನು) ಇದನ್ನು ತಿಳಿದವನಾಗಿ ನನ್ನ ಸ್ವರೂಪಭೂತವಾದ ಮೋಕ್ಷವನ್ನು ಹೊಂದಲು ಯೋಗ್ಯನಾಗುವನು.

**ಪ್ರಕೃತಿಂ ಪುರುಷಂ ಚೈವ, ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ, ವಿದ್ಧಿ ಪ್ರಕೃತಿ ಸಂಭವಾನ್ ॥೧೯॥**

ಪ್ರಕೃತಿ ಮತ್ತು ಪುರುಷ ಇವೆರಡೂ ಅನಾದಿ ಎಂಬುದಾಗಿ ತಿಳಿ. ಮತ್ತು ರಾಗದ್ವೇಷಾದಿ ವಿಕಾರಗಳೂ ಮತ್ತು ತ್ರಿಗುಣಾತ್ಮಕವಾದ ಸಮಸ್ತ ಪದಾರ್ಥಗಳೂ ಪ್ರಕೃತಿಯಿಂದ ಹುಟ್ಟವೆ ಎಂದು ತಿಳಿಯುವನಾಗು.

**ಕಾರ್ಯಕಾರಣಕರ್ತೃತ್ವೇ, ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ, ಭೋಕ್ತೃತ್ವೇ ಹೇತುರುಚ್ಯತೇ ॥೨೦॥**

ಕಾರ್ಯ ಮತ್ತು ಕಾರಣಗಳನ್ನು ಉತ್ಪತ್ತಿಮಾಡುವುದರಲ್ಲಿ ಪ್ರಕೃತಿಯು ಕಾರಣವೆಂದು ಜ್ಞಾನಿಗಳಿಂದ ಹೇಳಲ್ಪಟ್ಟಿದೆ. ಬಳಿಕ ಸುಖದುಃಖಗಳನ್ನು ಅನುಭವಿಸುವುದರಲ್ಲಿ ಪುರುಷನು ಕಾರಣನೆಂಬುದಾಗಿ ಅವರಿಂದ ಹೇಳಲಾಗಿದೆ.

**ಪುರುಷಃ ಪ್ರಕೃತಿಸ್ಥೋ ಹಿ, ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ, ಸದಸದ್ಯೋನಿ ಜನ್ಮಸು ॥೨೧॥**

ಈ ಕ್ಷೇತ್ರಜ್ಞನೆಂಬ ಪುರುಷನು ಪ್ರಕೃತಿಯ ವಿಕಾರವಾದ ಶರೀರದಲ್ಲಿದ್ದುಕೊಂಡೇ ಪ್ರಕೃತಿಯಿಂದ ಉತ್ಪನ್ನವಾಗುವ ಸುಖದುಃಖಾದಿಗಳನ್ನು ಅನುಭವಿಸುತ್ತಾನೆ. ಪುರುಷನಿಗೆ ಪ್ರಕೃತಿಯಗುಣಗಳೊಡನೆ ಉಂಟಾದ ಸಂಗವೇ (ಅಭಿಮಾನವೇ) ಉಚ್ಚ ನೀಚ ಯೋನಿಗಳಲ್ಲಿ ಹುಟ್ಟುವುದಕ್ಕೆ ಕಾರಣವಾಗಿರುವುದು.

**ಉಪದ್ರಷ್ಟಾನುಮಂತಾ ಚ, ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ, ದೇಹೇಽಸ್ಮಿನ್ಪುರುಷಃ ಪರಃ ॥೨೨॥**

ಪುರುಷನು ಈ ದೇಹದಲ್ಲಿ ಇರುತ್ತಿದ್ದರೂ ಬೇರೆಯೇ ಆಗಿರುವನು. ಎಂತೆಂದರೆ, ಸರ್ವಕರ್ಮಗಳನ್ನು ನೋಡುತ್ತಾ ಅವುಗಳಿಗೆ ಸಾಕ್ಷಿಯಾಗಿರುವುದರಿಂದ ಉಪದ್ರಷ್ಟನೆಂದೂ, ಸಮ್ಮತಿ ಕೊಡುವವನಾದ್ದರಿಂದ 'ಅನುಮಂತ'ನೆಂದೂ, ಸರ್ವರನ್ನೂ ಪೋಷಿಸುವವನಾದ್ದರಿಂದ 'ಭರ್ತ'ನೆಂದೂ, ಜೀವ

ರೂಪದಿಂದ ಭೋಕ್ತೃವೆಂದೂ, ಬ್ರಹ್ಮಾದಿಸ್ತಂಭ ಪರ್ಯಂತವಾದ ಸಮಸ್ತ ಪ್ರಾಣಿಗಳ ನಿಯಾಮಕನಾಗಿರುವುದರಿಂದ "ಮಹೇಶ್ವರ"ನೆಂದೂ, ಮತ್ತು ಅನಾತ್ಮ ಪದಾರ್ಥಗಳಿಗಿಂತ ಅತ್ಯಂತ ಉತ್ಕೃಷ್ಟನೂ, ವಿಲಕ್ಷಣನೂ, ಸಚ್ಚಿದಾನಂದರೂಪನೂ ಆಗಿರುವುದರಿಂದ "ಪರಮಾತ್ಮ"ನೆಂದೂ ಜ್ಞಾನಿಗಳಿಂದ ಹೇಳಲ್ಪಟ್ಟಿರುವನು. (X)

**ಯ ಏವಂ ವೇತ್ತಿ ಪುರುಷಂ, ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ, ನ ಸ ಭೂಯೋಽಭಿಜಾಯತೇ ॥೨೪॥**

---

(X) ಪುರುಷನು ಜೀವರೂಪದಿಂದ ಈ ಸಂಘಾತ (ದೇಹ)ದಲ್ಲಿ ಇರುತ್ತಿದ್ದರೂ 'ಪರ' ನಾಗಿರುವನು.

(1) ಉಪದ್ರಷ್ಟಾ (2) ಅನುಮಂತಾ (3) ಭರ್ತಾ (4) ಭೋಕ್ತಾ (5) ಮಹೇಶ್ವರ (6) ಪರಮಾತ್ಮಾ—ಈ ಆರು ವಿಶೇಷಣಗಳು ಪುರುಷನ ಅಸಂಗತೆಯನ್ನು ಬೋಧಿಸುವುವು.

1· ಉಪದ್ರಷ್ಟಾ—ದೇಹೇಂದ್ರಿಯಗಳ ವ್ಯಾಪಾರವನ್ನು ತಾನು ಕೇವಲ ಸಾಕ್ಷಿಯಾಗಿದ್ದುಕೊಂಡು ನೋಡುತ್ತಿರುವನು. ಆದ್ದರಿಂದ ಸರ್ವಕ್ಕೂ ಭಿನ್ನನೇ ಆಗಿರುವನು. ಉದಾ:- ಋತ್ವಿಜರಿಂದ ಮಾಡಲ್ಪಡುತ್ತಿರುವ ಯಜ್ಞಕರ್ಮವನ್ನು ನೋಡುತ್ತಿರುವ ಯಜಮಾನನಂತೆ. ಉಪ—ಸಮೀಪದಲ್ಲಿದ್ದು, ದ್ರಷ್ಟಾ—ನೋಡುವವನು, ಇವನೇ ಉಪದ್ರಷ್ಟನು. (ಸಾಕ್ಷೀಭೂತನು ನಿರ್ವಿಕಾರಿ).

2· ಅನುಮಂತಾ—ದೇಹೇಂದ್ರಿಯಾದಿಗಳ ಪ್ರವೃತ್ತಿಗೆ ಅನುಮತಿ ಕೊಡುವವನು. (ಅನುಕೂಲವಾದವನು) ಆದ್ದರಿಂದ ದೇಹಕ್ಕೆ ಭಿನ್ನನು.

3· ಚೈತನ್ಯದ ಆಭಾಸದಿಂದ ಕೂಡಿಕೊಂಡು ದೇಹೇಂದ್ರಿಯ ಮನೋಬುದ್ಧಿಗಳನ್ನು ತನ್ನ ಸತ್ತಾಸ್ಫುರಣೆಯಿಂದ ಧರಿಸಿಕೊಂಡು ಪೋಷಿಸುತ್ತಿರುವವನಾದ್ದರಿಂದ ದೇಹಕ್ಕೆ ಭಿನ್ನನು.

4· ಪುರುಷನು ಬುದ್ಧ್ಯಾದಿಗಳಿಂದ ಭಿನ್ನನು, ಭೋಕ್ತನಾದ್ದರಿಂದ, ಭೋಜ್ಯ ಪದಾರ್ಥಕ್ಕಿಂತ ಭೋಕ್ತನು ಭಿನ್ನನಾಗಿರುವಂತೆ.

5· ಸರ್ವನಿಯಾಮಕನು.

6· ಸರ್ವವಿಲಕ್ಷಣನು, ಸರ್ವಶ್ರೇಷ್ಠನು.

ಯಾವ ಅಧಿಕಾರಿಯು ಪೂರ್ವೋಕ್ತಪ್ರಕಾರಕ್ಷೇತ್ರಜ್ಞನಾದ ಪುರುಷನನ್ನೂ, ಗುಣಗಳಿಂದಕೂಡಿದ ಪ್ರಕೃತಿಯನ್ನೂ ಸಹ ತಿಳಿಯುವನೋ ಅವನು ಹೇಗೆ ವರ್ತಿಸುತ್ತಿದ್ದಾಗ್ಯೂ (X) ಪುನರ್ಜನ್ಮವನ್ನು ಹೊಂದುವುದಿಲ್ಲ.

ಧ್ಯಾನೇನಾತ್ಮನಿ ಪಶ್ಯಂತಿ, ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ, ಕರ್ಮಯೋಗೇನ ಚಾಪರೇ ॥೨೪॥

ಕ್ಷೇತ್ರಜ್ಞನಾದ ಈ ಪುರುಷನನ್ನು ಕೆಲವು ಅಧಿಕಾರಿಗಳು ಶುದ್ಧವಾದ ಸೂಕ್ಷ್ಮಬುದ್ಧಿಯಿಂದ ಧ್ಯಾನದ ಮೂಲಕ ತಮ್ಮ ಹೃದಯದಲ್ಲಿ ಸಾಕ್ಷಾತ್ಕರಿಸುತ್ತಾರೆ. ಇನ್ನು ಕೆಲವರು ತತ್ವ ವಿಚಾರದಿಂದಲೂ, ಕೆಲವರು ಅಷ್ಟಾಂಗ ಯೋಗಸಾಧನೆಯಿಂದಲೂ ಮತ್ತೆ ಕೆಲವರು ನಿಷ್ಕಾಮಕರ್ಮಯೋಗದಿಂದಲೂ ಸಾಕ್ಷಾತ್ಕಾರಮಾಡುತ್ತಾರೆ.

ಅನ್ಯೇ ತ್ವೇವಮಜಾನಂತಃ, ಶ್ರುತ್ವಾನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ, ಮೃತ್ಯುಂ ಶ್ರುತಿ ಪರಾಯಣಾಃ ॥೨೫॥

ಇನ್ನು ಕೆಲವರು ಪೂರ್ವೋಕ್ತರೀತಿಯಿಂದ ಪುರುಷನನ್ನು ತಿಳಿಯದವರಾಗಿ, ಆತ್ಮಜ್ಞಾನಿಗಳಿಂದ ಆತ್ಮತತ್ವವನ್ನು ಶ್ರವಣಮಾಡಿ ಉಪಾಸನೆಮಾಡುವರು. ಹೀಗೆ ಶ್ರವಣ ಪಾರಾಯಣರಾದ ಪುರುಷರೂ ಸಹ ಮೃತ್ಯುರೂಪವಾದ ಸಂಸಾರವನ್ನು ಅತಿಕ್ರಮಿಸುವರು.

ಯಾವತ್ಸಂಜಾಯತೇ ಕಿಂಚಿ, ತ್ಸತ್ತ್ವಂ ಸ್ಥಾವರ ಜಂಗಮಮ್ ।
ಕ್ಷೇತ್ರಕ್ಷೇತ್ರಜ್ಞಸಂಯೋಗಾ, ತ್ತದ್ವಿದ್ಧಿ ಭರತರ್ಷಭ ॥೨೬॥

ಎಲೈ ಭರತಶ್ರೇಷ್ಠನೇ ! ಸ್ಥಾವರ(a)ಜಂಗಮ(b)ರೂಪವಾದ ಎಷ್ಟು ಬಗೆಯ ಪ್ರಾಣಿಗಳು ಉತ್ಪನ್ನವಾಗುತ್ತಿರುವುವೋ ಅವೆಲ್ಲವೂ ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದಲೇ ಹುಟ್ಟಿದವುಗಳೆಂಬದಾಗಿ ತಿಳಿ.

---

(X) ಪುರುಷ—ಪ್ರಕೃತಿ—ಇವುಗಳ ಸ್ವರೂಪವನ್ನು ತಿಳಿದವನು ಪ್ರಕೃತಿಸ್ಥನಾಗದುದರಿಂದ ಮತ್ತು ತನ್ನನ್ನು ಅಕರ್ತನೆಂದು ತಿಳಿದಿರುವುದರಿಂದ, ಪ್ರಾರಬ್ಧವಶಾತ್ ಅವನಿಂದ ಆಗುವ ಕರ್ಮಗಳು ಅವನಿಗೆ ಬಂಧನಕಾರಕಗಳಾಗುವುದಿಲ್ಲ. "ಸರ್ವಥಾ ವರ್ತಮಾನೋಽಪಿ" ಅಂದರೆ 'ಹೇಗೆ ವರ್ತಿಸಿದರೂ' ಎಂಬ ಪದದಿಂದ ನಿಷಿದ್ಧಕರ್ಮಾಚರಣೆ ಎಂಬ ಅರ್ಥವಲ್ಲ.

(a) ಬೆಟ್ಟ ವೃಕ್ಷಾದಿ ಸ್ಥಿರ ಪದಾರ್ಥಗಳು. (b) ಮನುಷ್ಯ, ಪಶು, ಪಕ್ಷ್ಯಾದಿ ಚಲಿಸುವ ಪ್ರಾಣಿಗಳು.

**ಸಮಂ ಸರ್ವೇಷು ಭೂತೇಷು, ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ, ಯಃ ಪಶ್ಯತಿ ಸ ಪಶ್ಯತಿ ॥೨೭॥**

ದೇಹಾದಿ ಸಂಘಾತಗಳು ನಾಶವಾಗುತ್ತಿದ್ದರೂ ಅವುಗಳಲ್ಲಿರುವ ಪರಮೇಶ್ವರನು ನಾಶವಿಲ್ಲದವನೆಂತಲೂ, ಸರ್ವ ಭೂತಗಳಲ್ಲಿ ಸಮವಾಗಿ ನಿರ್ವಿಕಾರವಾಗಿ ಮತ್ತು ವ್ಯಾಪಕವಾಗಿ ಇರುವನೆಂತಲೂ, ಯಾವನು ತಿಳಿಯುವನೋ ಅವನೇ ನಿಜವಾಗಿಯೂ ತಿಳಿದವನು.

**ಸಮಂ ಪಶ್ಯನ್ ಹಿ ಸರ್ವತ್ರ, ಸಮವಸ್ಥಿತಮೀಶ್ವರಮ್ ।**
**ನಹಿನಸ್ತ್ಯಾತ್ಮನಾಽಽತ್ಮಾನಂ, ತತೋ ಯಾತಿ ಪರಾಂ ಗತಿಮ್ ॥೨೮॥**

ಎಲ್ಲಾ ಸ್ಥಳದಲ್ಲಿಯೂ ಸಮಭಾವದಿಂದ ಇರುವ ಪರಮೇಶ್ವರನನ್ನು ನೋಡುವವನು ಅವಿವೇಕತನದಿಂದ ತನ್ನ ಆತ್ಮವನ್ನು ನಾಶಗೊಳಿಸುವುದಿಲ್ಲ. (x) ಆದಕಾರಣ ಅವನು ಪರಮಗತಿಯನ್ನು ಹೊಂದುವನು.

**ಪ್ರಕೃತ್ಯೈವ ಚ ಕರ್ಮಾಣಿ, ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾಽಽತ್ಮಾನ, ಮಕರ್ತಾರಂ ಸ ಪಶ್ಯತಿ ॥೨೯॥**

ತ್ರಿಗುಣಗಳಿಂದ ಕೂಡಿದ ಪ್ರಕೃತಿಯಿಂದಲೇ ಸೃಷ್ಟ್ಯಾದಿ ಸಮಸ್ತ ಕಾರ್ಯಕಲಾಪಗಳು ಜರುಗುತ್ತಿವೆ ಎಂದೂ, ಮತ್ತು ಕ್ಷೇತ್ರಜ್ಞಪುರುಷನು ಅಕರ್ತನೆಂದೂ ಯಾವ ವಿವೇಕಿಯು ನೋಡುವನೋ ಅವನೇ ಯಥಾರ್ಥವಾಗಿ ನೋಡತಕ್ಕವನು.

**ಯದಾ ಭೂತಪೃಥಗ್ಭಾವ, ಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ, ಬ್ರಹ್ಮ ಸಂಪದ್ಯತೇ ತದಾ ॥೩೦॥**

ಭಿನ್ನ ಭಿನ್ನವಾಗಿರುವ ಸಮಸ್ತ ಪ್ರಾಣಿಗಳೂ ಒಬ್ಬ ಪರಮಾತ್ಮನಲ್ಲಿಯೇ ಇರುವುದಾಗಿಯೂ, ಆ ಪರಮಾತ್ಮನಿಂದಲೇ ಇವೆಲ್ಲವೂ ಉತ್ಪನ್ನವಾಗಿವೆ ಎಂಬುದಾಗಿಯೂ ಯಾವಾತನು ಯಾವ ಸಮಯದಲ್ಲಿ ತಿಳಿಯುವನೋ ಆತನು ಆ ಸಮಯದಲ್ಲಿಯೇ ಬ್ರಹ್ಮಭಾವವನ್ನು ಹೊಂದುತ್ತಾನೆ.

**ಅನಾದಿತ್ವಾನ್ನಿರ್ಗುಣತ್ವಾತ್, ಪರಮಾತ್ಮಾಯ ಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ, ನ ಕರೋತಿ ನ ಲಿಪ್ಯತೇ ॥೩೧॥**

ಎಲೈ ಕುಂತೀಪುತ್ರನೇ ! ಈ ಪರಮಾತ್ಮನು ಅನಾದಿಯೂ ಮತ್ತು ನಿರ್ಗುಣನೂ ಆಗಿರುವುದರಿಂದ ನಾಶರಹಿತನಾಗಿರುವನು. ಹೀಗಿರುವ ಈ

---

(x) ಸಂಸಾರ ಬಂಧನದಲ್ಲಿ ಸಿಕ್ಕುವುದಿಲ್ಲ.

ಪರಮಾತ್ಮನು ಶರೀರದಲ್ಲಿದ್ದರೂ ಯಾವ ಕರ್ಮವನ್ನೂ ಮಾಡುವುದಿಲ್ಲ ಮತ್ತು ಶರೀರದಿಂದ ಆಗುವ ಆ ಕರ್ಮಗಳಿಂದ ಲಿಪ್ತನೂ ಆಗುವುದಿಲ್ಲ.

**ಯಥಾ ಸರ್ವಗತಂ ಸೌಕ್ಷ್ಮ್ಯಾ, ದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ, ತಥಾಽಽತ್ಮಾ ನೋಪಲಿಪ್ಯತೇ ॥೩೨॥**

ಹೇಗೆ ಸರ್ವತ್ರ ವ್ಯಾಪಕವಾಗಿರುವ ಆಕಾಶವು ಸೂಕ್ಷ್ಮವಾದ ಕಾರಣ ಇತರ ಪದಾರ್ಥಗಳಿಂದ ಲಿಪ್ತವಾಗುವುದಿಲ್ಲವೋ ಹಾಗೆಯೇ ಸರ್ವತ್ರ ವ್ಯಾಪಕ ನಾಗಿರುವ ಈ ಪರಮಾತ್ಮನು ದೇಹದಲ್ಲಿದ್ದರೂ ದೇಹೇಂದ್ರಿಯಾದಿಗಳಿಂದಾ ಗುವ ಕರ್ಮಗಳಿಂದ ಲಿಪ್ತನಾಗುವುದಿಲ್ಲ.

**ಯಥಾ ಪ್ರಕಾಶಯತ್ಯೇಕಃ, ಕೃತ್ಸ್ನಂ ಲೋಕ ಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ, ಪ್ರಕಾಶಯತಿ ಭಾರತ ॥೩೩॥**

ಎಲೈ ಭಾರತನೇ ! ಹೇಗೆ ಒಬ್ಬನೇ ಸೂರ್ಯನು ಸಮಸ್ತ ಲೋಕಗಳನ್ನೂ ಪ್ರಕಾಶಿಸುವನೋ ಹಾಗೆಯೇ ಈ ಕ್ಷೇತ್ರಜ್ಞನಾದ ಆತ್ಮನು ಕ್ಷೇತ್ರವೆಂಬ ಸಮಸ್ತ ಶರೀರಗಳನ್ನೂ ಪ್ರಕಾಶಗೊಳಿಸುವನು.

**ಕ್ಷೇತ್ರಕ್ಷೇತ್ರಜ್ಞಯೋರೇವ, ಮಂತರಂ ಜ್ಞಾನ ಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ, ಯೇ ವಿದುರ್ಯಾಂತಿ ತೇ ಪರಮ್॥೩೪॥**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಕ್ಷೇತ್ರಕ್ಷೇತ್ರಜ್ಞ ವಿಭಾಗಯೋಗೋನಾಮ
ತ್ರಯೋದಶೋಽಧ್ಯಾಯಃ

ಈ ರೀತಿಯಾಗಿ ಯಾವ ಪುರುಷರು ಜ್ಞಾನದೃಷ್ಟಿಯಿಂದ ಕ್ಷೇತ್ರಕ್ಷೇತ್ರ ಜ್ಞರ ವಿಲಕ್ಷಣತೆಯನ್ನೂ, ಕಾರ್ಯಸಹಿತ ಪ್ರಕೃತಿಯ ಅಭಾವವನ್ನೂ ಅರ್ಥಾತ್ ಪ್ರಕೃತಿಯಿಂದ ಬಿಡುಗಡೆಹೊಂದುವ ಉಪಾಯವನ್ನೂ ತಿಳಿಯುವರೋ ಆ ಮಹಾತ್ಮರು ಪರಮಪದವಿಯನ್ನು ಹೊಂದುವರು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಕ್ಷೇತ್ರಕ್ಷೇತ್ರಜ್ಞ ವಿಭಾಗಯೋಗವೆಂಬ ಹದಿಮೂರನೆಯ ಅಧ್ಯಾಯವು ಸಂಪೂರ್ಣವು.



# ಅಥ ಗುಣತ್ರಯ ವಿಭಾಗ ಯೋಗೋನಾಮ ಚತುರ್ದಶೋಽಧ್ಯಾಯಃ

## ಶ್ರೀ ಭಗವಾನುವಾಚ

**ಪರಂ ಭೂಯಃ ಪ್ರವಕ್ಷ್ಯಾಮಿ, ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾಮುನಯಃ ಸರ್ವೇ, ಪರಾಂ ಸಿದ್ಧಿಮಿತೋ ಗತಾಃ ॥೧॥**

ಶ್ರೀ ಭಗವಂತನಿಂತೆಂದನು :— ಎಲ್ಲಾ ಮುನಿಶ್ರೇಷ್ಠರು ಯಾವುದನ್ನು ತಿಳಿದು ಈ ಸಂಸಾರದಿಂದ ಮುಕ್ತರಾಗಿ ಪರಮಸಿದ್ಧಿಯನ್ನು ಹೊಂದಿದರೋ, ಅಂತಹ ಸರ್ವೋತ್ಕೃಷ್ಟವಾದ ಜ್ಞಾನಗಳಲ್ಲೆಲ್ಲಾ ಉತ್ತಮವಾದ ಜ್ಞಾನದ ಸ್ವರೂಪವನ್ನು ಪುನಃ ನಿನಗೋಸ್ಕರ ಹೇಳುವೆನು.

**ಇದಂ ಜ್ಞಾನಮುಪಾಶ್ರಿತ್ಯ, ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ, ಪ್ರಲಯೇನ ವ್ಯಥಂತಿ ಚ ॥೨॥**

ನನ್ನಿಂದ ಹೇಳಲ್ಪಡುವ ಈ ಜ್ಞಾನವನ್ನು ಆಶ್ರಯಮಾಡಿ (ಅನುಷ್ಠಾನ ಮಾಡಿ) ನನ್ನ ಅದ್ವಿತೀಯ ನಿರ್ಗುಣಸ್ವರೂಪವನ್ನು ಅಭೇದದಿಂದ ಹೊಂದಿರುವವರು ಪುನಃ ಈ ಸೃಷ್ಟಿಯ ಕಾಲದಲ್ಲಿ ಹುಟ್ಟುವುದೂ ಇಲ್ಲ ಮತ್ತು ಪ್ರಳಯ ಕಾಲದಲ್ಲಿಯೂ ವ್ಯಥೆಯನ್ನು ಹೊಂದುವುದಿಲ್ಲ.

**ಮಮ ಯೋನಿರ್ಮಹದ್ಬ್ರಹ್ಮ, ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ, ತತೋ ಭವತಿ ಭಾರತ ॥೩॥**

ಎಲೈ ಭರತಕುಲೋತ್ಪನ್ನನೇ ! ತ್ರಿಗುಣಾತ್ಮಕವಾದ ಮಾಯೆಯು ನನಗೆ ಗರ್ಭಾದಾನ ಸ್ಥಾನವಾಗಿರವುದು. ಅದರಲ್ಲಿ ನಾನು ಗರ್ಭದಾನ ಮಾಡುತ್ತೇನೆ. (X) ಸಮಸ್ತ ಪ್ರಾಣಿಗಳ ಉತ್ಪತ್ತಿಯು ಇದರಿಂದಲೇ ಆಗುತ್ತಿದೆ.

**ಸರ್ವಯೋನೀಷು ಕೌಂತೇಯ, ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿ, ರಹಂ ಬೀಜಪ್ರದಃ ಪಿತಾ ॥೪॥**

ಎಲೈ ಕೌಂತೇಯನೇ ! (ದೇವಾದಿ) ಸರ್ವಯೋನಿಗಳಲ್ಲಿ ಯಾವ ಯಾವ ಪ್ರಾಣಿಗಳು ಉತ್ಪನ್ನವಾಗುವುವೋ ಅವುಗಳಿಗೆ ಪ್ರಕೃತಿಯೇ ತಾಯಿಯಾಗಿರುವಳು. ನಾನಾದರೋ ಬೀಜಸ್ಥಾಪನೆ (ಚೇತನ ಸಮರ್ಪಣ) ಮಾಡುವ ತಂದೆಯಾಗಿರುವೆನು.

---

(X) ಜಡವಾದ ಪ್ರಕೃತಿಗೆ ಚೈತನ್ಯವನ್ನು ಕೊಡುತ್ತೇನೆ.

**ಸತ್ತ್ವಂ ರಜಸ್ತಮ ಇತಿ, ಗುಣಾಃ ಪ್ರಕೃತಿ ಸಂಭವಾಃ ।**
**ನಿಬಧ್ನಂತಿ ಮಹಾಬಾಹೋ, ದೇಹೇ ದೇಹಿನಮವ್ಯಯಮ್ ॥೫॥**

ಎಲೈ ಮಹಾಬಾಹುವಾದ ಅರ್ಜುನನೇ ! ಪ್ರಕೃತಿಯಿಂದ ಉತ್ಪನ್ನವಾಗಿರುವ ಸತ್ವ, ರಜ ಮತ್ತು ತಮವೆಂಬ ಮೂರು ಗುಣಗಳು ಈ ದೇಹದಲ್ಲಿರುವ ಅವ್ಯಯ (ನಾಶರಹಿತ)ನಾದ ದೇಹಿಯಾದ ಆತ್ಮನನ್ನು ಬಂಧಿಸುವುವು.

**ತತ್ರ ಸತ್ತ್ವಂ ನಿರ್ಮಲತ್ವಾತ್, ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ, ಜ್ಞಾನಸಂಗೇನ ಚಾನಘ ॥೬॥**

ಎಲೈ ನಿಷ್ಪಾಪನೇ ! ಈ ಮೂರು ಗುಣಗಳಲ್ಲಿ ಸತ್ವಗುಣವು ನಿರ್ಮಲವಾದುದರಿಂದ ಪ್ರಕಾಶಯುಕ್ತವಾಗಿಯೂ, ದುಃಖರಹಿತವಾಗಿಯೂ ಇರುವುದು. ಆದಕಾರಣ ಇದು ಸುಖಾಸಕ್ತಿಯಿಂದಲೂ ಮತ್ತು ಜ್ಞಾನದ ಅಭಿಮಾನದಿಂದಲೂ ಆತ್ಮನನ್ನು ಬಂಧಿಸುವುದು.

**ರಜೋ ರಾಗಾತ್ಮಕಂ ವಿದ್ಧಿ, ತೃಷ್ಣಾಸಂಗ ಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ, ಕರ್ಮಸಂಗೇನ ದೇಹಿನಮ್ ॥೭॥**

ಎಲೈ ಕುಂತಿಪುತ್ರನಾದ ಅರ್ಜುನನೇ ! ಇಚ್ಛಾರೂಪವಾಗಿರುವುದೇ ರಜೋಗುಣವು. ಇದು ಕಾಮನೆ ಮತ್ತು ಆಸಕ್ತಿ—ಇವೆರಡರಿಂದ ಹುಟ್ಟಿರುವುದು. ಇದು ಈ ದೇಹಿಯಾದ ಆತ್ಮನನ್ನು ಕರ್ಮಾಸಕ್ತಿ (ಫಲಾಸಕ್ತಿ) ಯಿಂದ ಬಂಧಿಸುವುದು.

**ತಮಸ್ತ್ವಜ್ಞಾನಜಂ ವಿದ್ಧಿ, ಮೋಹನಂ ಸರ್ವದೇಹಿನಾಂ ।**
**ಪ್ರಮಾದಾಲಸ್ಯ ನಿದ್ರಾಭಿ, ಸ್ತನ್ನಿಬಧ್ನಾತಿ ಭಾರತ ॥೮॥**

ಎಲೈ ಭಾರತನೇ ! ಸಮಸ್ತ ಪ್ರಾಣಿಗಳನ್ನು ಮೋಹಗೊಳಿಸುವ ಈ ತಮೋಗುಣವು ಅಜ್ಞಾನದಿಂದ ಉತ್ಪನ್ನವಾದುದೆಂದು ತಿಳಿ. ಮರವೆಯಿಂದಲೂ, ಆಲಸ್ಯದಿಂದಲೂ, ನಿದ್ರೆಯಿಂದಲೂ ಈ ಆತ್ಮನನ್ನು ಬಂಧಿಸುವುದು.

**ಸತ್ತ್ವಂ ಸುಖೇ ಸಂಜಯತಿ, ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ, ಪ್ರಮಾದೇ ಸಂಜಯತ್ಯುತ ॥೯॥**

ಎಲೈ ಭಾರತನೇ ! ಸತ್ವಗುಣವು ಈ ಪುರುಷನನ್ನು ಸುಖದಲ್ಲಿ (ಸುಖಾಸಕ್ತಿಯಲ್ಲಿ) ಸೇರಿಸುವುದು, ರಜೋಗುಣವು ಕರ್ಮದಲ್ಲಿ (ಕರ್ಮಫಲಾಪೇಕ್ಷೆಯಲ್ಲಿ) ಸೇರಿಸಿಬಿಡುವುದು; ಇನ್ನು ತಮೋಗುಣವಾದರೋ ಜ್ಞಾನವನ್ನು ಮುಚ್ಚಿಬಿಡುವುದಲ್ಲದೆ ಪ್ರಮಾದದಲ್ಲಿಯೂ (X) ಸೇರಿಸಿಬಿಡುವುದು.

**ರಜಸ್ತಮಶ್ಚಾಭಿಭೂಯ, ಸತ್ತ್ವಂ ಭವತಿ ಭಾರತ ।**
**ರಜಸ್ಸತ್ತ್ವಂ ತಮಶ್ಚೈವ, ತಮಸ್ಸತ್ತ್ವಂ ರಜಸ್ತಥಾ ॥೧೦॥**

ಹೇ ಅರ್ಜುನಾ ! ಸತ್ವಗುಣವು ವೃದ್ಧಿಯಾದಾಗ ರಜೋಗುಣ ತಮೋಗುಣಗಳನ್ನು ತಿರಸ್ಕರಿಸಿ (ಅದುಮಿ) ತಾನು ಪ್ರಧಾನವಾಗಿ ತನ್ನ ಕಾರ್ಯವನ್ನು ಮಾಡುವುದು. ಇದರಂತೆಯೇ ರಜೋಗುಣವು ಹೆಚ್ಚಿದಾಗ ಸತ್ವ ತಮುಗಳನ್ನು ತಿರಸ್ಕರಿಸಿ ಮತ್ತು ತಮೋಗುಣವೃದ್ಧಿಯಾದಕಾಲದಲ್ಲಿ ಸತ್ವರಜಗಳನ್ನು ತಿರಸ್ಕರಿಸಿ ತಮ್ಮ ಕಾರ್ಯಗಳನ್ನು ನೆರವೇರಿಸುತ್ತವೆ.

**ಸರ್ವದ್ವಾರೇಷು ದೇಹೇಽಸ್ಮಿನ್, ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾ, ದ್ವಿವೃದ್ಧಂ ಸತ್ತ್ವಮಿತ್ಯುತ ॥೧೧॥**

ಈ ದೇಹಗಳಲ್ಲಿ ಶ್ರೋತ್ರಾದಿ ಇಂದ್ರಿಯಗಳೊಳಗೆ ಯಾವಕಾಲದಲ್ಲಿ ಪ್ರಕಾಶವು ಉತ್ಪನ್ನವಾಗುವುದೋ ಮತ್ತು ಅಂತಃಕರಣದಲ್ಲಿ ವಿವೇಚನಾ ಶಕ್ತಿ ಅಧಿಕವಾಗುವುದೋ ಆಗ ಸತ್ವಗುಣವು ಅಭಿವೃದ್ಧಿಯಾಗಿರುವುದೆಂದು ತಿಳಿಯುವುದು.

**ಲೋಭಃ ಪ್ರವೃತ್ತಿರಾರಂಭಃ, ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ, ವಿವೃದ್ಧೇ ಭರತರ್ಷಭ ॥೧೨॥**

ಎಲೈ ಭರತಶ್ರೇಷ್ಠನೇ ! ರಜೋಗುಣವು ಹೆಚ್ಚಿದಕಾಲದಲ್ಲಿ ಲೋಭ, ವಿಷಯಗಳಲ್ಲಿ ಪ್ರವೃತ್ತಿ, ಹೊಸಹೊಸ ಕಾರ್ಯಗಳನ್ನು ಆರಂಭಿಸುವಿಕೆ, ಲೆಕ್ಕವಿಲ್ಲದಷ್ಟು ಕಾರ್ಯಕಲಾಪಗಳ ಇಚ್ಛೆಯು, ವಿಷಯಭೋಗಗಳ ಲಾಲಸೆ (ಸ್ಪೃಹೆ)—ಇವು ಉಂಟಾಗುತ್ತವೆ.

---

(x) ದೇಹೇಂದ್ರಿಯ ಮನ ಬುದ್ಧಿಗಳಿಂದಾಗುವ ವ್ಯರ್ಥಕ್ರಿಯೆಗಳು ಮತ್ತು ಶಾಸ್ತ್ರವಿಹಿತ ಕರ್ಮಗಳಲ್ಲಿ ಅವಹೇಳನ ಬುದ್ಧಿಯುಂಟಾಗಿ ಅವನ್ನು ಮಾಡದಿರುವುದು ಪ್ರಮಾದವೆನಿಸುವುದು.

**ಅಪ್ರಕಾಶೋಽಪ್ರವೃತ್ತಿಶ್ಚ, ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ, ವಿವೃದ್ಧೇ ಕುರುನಂದನ ॥೧೩॥**

ಎಲೈ ಕುರುನಂದನನೇ ! ತಮೋಗುಣದ ಅಭಿವೃದ್ಧಿಕಾಲದಲ್ಲಿ ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ಅಪ್ರಕಾಶವೂ, ಕರ್ತವ್ಯ ಕರ್ಮಗಳಲ್ಲಿ ಅಪ್ರವೃತ್ತಿ, ಪ್ರಮಾದ (ವ್ಯರ್ಥಕರ್ಮಾಚರಣೆ) ಮತ್ತು ನಿದ್ರಾದಿ ಅಂತಃಕರಣದ ಮೋಹಿನೀ ವೃತ್ತಿಗಳು ಉಂಟಾಗುತ್ತವೆ.

**ಯದಾ ಸತ್ತ್ವೇ ಪ್ರವೃದ್ಧೇತು, ಪ್ರಲಯಂ ಯಾತಿ ದೇಹಭೃತ್ ॥**
**ತದೋತ್ತಮವಿದಾಂಲೋಕಾ, ನಮಲಾನ್ ಪ್ರತಿಪದ್ಯತೇ ॥೧೪॥**

ಸತ್ವಗುಣವು ಅಭಿವೃದ್ಧಿಯಾಗಿರುವ ಸಮಯದಲ್ಲಿ ದೇಹಾಭಿಮಾನವುಳ್ಳ ಈ ಜೀವನು ಮರಣಹೊಂದಿದರೆ ಉತ್ತಮ ಕರ್ಮಗಳನ್ನು ಮಾಡಿದವರು ಹೊಂದಲು ಯೋಗ್ಯವಾಗಿರುವ ನಿರ್ಮಲವಾದ (ರಜ ತಮಗಳಿಲ್ಲದ) ದೇವಾದಿ ಲೋಕಗಳನ್ನು ಹೊಂದುವನು.

**ರಜಸಿ ಪ್ರಲಯಂ ಗತ್ವಾ, ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ, ಮೂಢಯೋನಿಷು ಜಾಯತೇ ॥೧೫॥**

ರಜೋಗುಣದ ಅಭಿವೃದ್ಧಿಯಲ್ಲಿ ಮರಣ ಹೊಂದಿದವನು ಕರ್ಮಾಸಕ್ತಿ ಮತ್ತು ಫಲಾಸಕ್ತಿಯುಳ್ಳ ಕರ್ಮಿಗಳ ಗೃಹದಲ್ಲಿ ಜನ್ಮವನ್ನು ತಾಳುವನು. ಇನ್ನು ತಮೋಗುಣಾಭಿವೃದ್ಧಿಯಲ್ಲಿ ಮರಣಹೊಂದಿದವನು ಪಶ್ವಾದಿ ಮೂಢಯೋನಿಗಳಲ್ಲಿ ಹುಟ್ಟುವನು.

**ಕರ್ಮಣಃ ಸುಕೃತಸ್ಯಾಹುಃ, ಸಾತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖ, ಮಜ್ಞಾನಂ ತಮಸಃ ಫಲಮ್ ॥೧೬॥**

ಸಾತ್ವಿಕ ಕರ್ಮದ ಫಲವು ನಿರ್ಮಲವಾದ ಸುಖ ಶಾಂತಿ ಜ್ಞಾನ ವೈರಾಗ್ಯಾದಿಗಳು, ರಜೋಗುಣದ ಕರ್ಮಗಳ ಫಲವು ದುಃಖವು, ಮತ್ತು ತಾಮಸ ಕರ್ಮಗಳ ಫಲವು ಅಜ್ಞಾನವಾಗಿರುವುದು.

**ಸತ್ತ್ವಾತ್ಸಂಜಾಯತೇ ಜ್ಞಾನಂ, ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ, ಭವತೋಽಜ್ಞಾನಮೇವ ಚ ॥೧೭॥**

ಸತ್ವಗುಣದಿಂದ ಜ್ಞಾನೋತ್ಪತ್ತಿಯಾಗುವುದು. ರಜೋಗುಣದಿಂದ ಲೋಭವು ಹುಟ್ಟುವುದು. ಇನ್ನು ತಮೋಗುಣದಿಂದ ಪ್ರಮಾದ (ಮರೆವೆ, ವಿಸ್ಮೃತಿ), ಮೋಹ ಮತ್ತು ಅಜ್ಞಾನಗಳು ಉಂಟಾಗುವುವು.

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ, ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯ ಗುಣವೃತ್ತಿಸ್ಥಾ, ಅಧೋ ಗಚ್ಛಂತಿ ತಾಮಸಾಃ ॥೧೮॥**

ಸತ್ವಗುಣ ಪ್ರಧಾನರಾದವರು ಇಂದ್ರಾದಿ ಲೋಕಗಳನ್ನೂ, ರಜೋಗುಣ ಪ್ರಧಾನರಾದವರು ಮನುಷ್ಯಲೋಕವನ್ನೂ ಮತ್ತು ತಮೋಗುಣ ಪ್ರಧಾನರಾದವರು ನೀಚವೃತ್ತಿಯುಳ್ಳವರಾದ ಕಾರಣ ಅಧೋಗತಿಯನ್ನೂ, ಹೊಂದುವರು.

**ನಾನ್ಯಂ ಗುಣೇಭ್ಯಃ ಕರ್ತಾರಂ, ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ, ಮದ್ಭಾವಂ ಸೋಽಧಿಗಚ್ಛತಿ ॥೧೯॥**

ದ್ರಷ್ಟ (x) ನಾದ ಆತ್ಮನು ಯಾವ ಸಮಯದಲ್ಲಿ ಪ್ರಕೃತಿಜನ್ಯವಾದ ಮೂರುಗುಣಗಳಿಂದಲೂ ಭಿನ್ನವಾದ ಕರ್ತೃವು ಯಾವುದೂ ಇಲ್ಲವೆಂಬುದಾಗಿ ತಿಳಿಯುವನೋ ಮತ್ತು ತನ್ನನ್ನು ಪ್ರಕೃತಿಯಗುಣಗಳಿಂದಲೂ, ಅದರ ಕಾರ್ಯವಾದ ದೇಹೇಂದ್ರಿಯಾದಿಗಳಿಗಿಂತಲೂ (ಪರಂ) ಅತೀತ (ದ್ರಷ್ಟ) ನೆಂಬುದಾಗಿಯೂ ತಿಳಿಯುವನೋ ಆಗ ಅವನು ಬ್ರಹ್ಮಭಾವವನ್ನೇ ಹೊಂದುವನು.

**ಗುಣಾನೇತಾನತೀತ್ಯ ತ್ರೀನ್, ದೇಹೀ ದೇಹ ಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈ, ರ್ವಿಮುಕ್ತೋಽಮೃತಮಶ್ನುತೇ ॥೨೦॥**

ಈ ದೇಹಿಯಾದ ಆತ್ಮನು ಶರೀರದ ಉತ್ಪತ್ತಿಗೆ ಕಾರಣಭೂತವಾದ ಸತ್ವಾದಿ ಮೂರುಗುಣಗಳನ್ನು ಉಲ್ಲಂಘಿಸಿ (a)ದವನಾಗಿ ಜನ್ಮ ಮೃತ್ಯು ಜರಾ ಮತ್ತು ಇತರ ವಿವಿಧ ದುಃಖಗಳಿಂದ ಬಿಡುಗಡೆಯನ್ನು ಹೊಂದಿ ಮೋಕ್ಷವನ್ನು ಹೊಂದುತ್ತಾನೆ.

---

(x) ನೋಡತಕ್ಕವನು, ಸಾಕ್ಷೀಭೂತನು.

(a) ದಾಟಿ, ಅತಿಕ್ರಮಿಸಿ.

## ಅರ್ಜುನ ಉವಾಚ

**ಕೈರ್ಲಿಂಗೈಸ್ತ್ರೀನ್ ಗುಣಾನೇತಾ, ನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂ, ಸ್ತ್ರೀನ್ ಗುಣಾನತಿವರ್ತತೇ ॥೨೧॥**

ಅರ್ಜುನನಿಂತೆಂದನು :– ಎಲೈ ಪ್ರಭುವೇ ! ಸತ್ವಾದಿ ಈ ಮೂರು ಗುಣಗಳನ್ನು ಅತಿಕ್ರಮಿಸಿದವನು ಯಾವ ಲಕ್ಷಣಗಳಿಂದ ಕೂಡಿದವನು ? (ಯಾವ ಲಕ್ಷಣಗಳಿಂದ ಅವನನ್ನು ಗುಣಾತೀತನೆಂದು ತಿಳಿಯಬಹುದು ?) ಮತ್ತು ಈ ಮೂರುಗುಣಗಳನ್ನು ದಾಟುವ ಬಗೆ ಹೇಗೆ ? (X)

## ಶ್ರೀ ಭಗವಾನುವಾಚ

(ಗುಣಾತೀತ ಪುರುಷನ ಲಕ್ಷಣಗಳು)

**ಪ್ರಕಾಶಂ ಚ ಪ್ರವೃತ್ತಿಂ ಚ, ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ, ನ ನಿವೃತ್ತಾನಿ ಕಾಂಕ್ಷತಿ ॥೨೨॥**

ಶ್ರೀ ಭಗವಂತನಿಂತೆಂದನು :– ಎಲೈ ಪಾಂಡವನೇ ! ಸತ್ವಗುಣದ ಕಾರ್ಯವಾದ ಪ್ರಕಾಶವಾದರೂ, ರಜೋಗುಣದ ಕಾರ್ಯವಾದ ಪ್ರವೃತ್ತಿಯಾದರೂ, ತಮೋಗುಣದ ಕಾರ್ಯವಾದ ಮೋಹವಾದರೂ ಪ್ರಾಪ್ತವಾದಾಗ ಯಾವನು ಅವುಗಳನ್ನು ದ್ವೇಷಿಸದಿರುವನೋ ಮತ್ತು ಅವು ನಿವೃತ್ತವಾದಾಗ ಅವುಗಳನ್ನು ಅಪೇಕ್ಷಿಸದಿರುವನೋ, ಅವನು ಗುಣಾತೀತ ಪುರುಷನು ಎಂದು ತಿಳಿ. (a)

**ಉದಾಸೀನವದಾಸೀನೋ, ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ, ಯೋಽವತಿಷ್ಠತಿ ನೇಂಗತೆ ॥೨೩॥**

---

(x) ಗುಣಾತೀತನ ಲಕ್ಷಣ ಮತ್ತು ಆಚರಣೆಗೆ ಸಂಬಂಧಿಸಿದ ಪ್ರಶ್ನೆಗೆ ಮುಂದಿನ ನಾಲ್ಕು ಶ್ಲೋಕಗಳಲ್ಲಿ ಮತ್ತು ಕೊನೆಯ ಪ್ರಶ್ನೆಗೆ ಅದರ ಮುಂದಿನ 26ನೇ ಶ್ಲೋಕದಲ್ಲಿ ಉತ್ತರ ಹೇಳಲಾಗಿದೆ.

(a) ಉಕ್ತ ಲಕ್ಷಣಗಳು ತುರ್ಯಗಾನಾಮಕ ಸಪ್ತಮ ಜ್ಞಾನಭೂಮಿಕೆಯನ್ನು ಪಡೆದ ಬ್ರಹ್ಮವಿದ್ವರಿಷ್ಠನ ಲಕ್ಷಣಗಳು. ನಿತ್ಯ ಸಮಾಧಿ ಅದ್ವೈತಾವಸ್ಥಾನ ಸಮಾಧಿ ಎಂದೂ ಈ ಸ್ಥಿತಿಗೆ ಹೆಸರು.

ಯಾವ ಪುರುಷನು ಪ್ರಕೃತಿಕಾರ್ಯವಾದ ದೃಶ್ಯ ಪ್ರಪಂಚದೊಡನೆ ಸಂಬಂಧವಿಲ್ಲದವನಾಗಿ ಸಾಕ್ಷೀಪುರುಷನಂತೆ ಉದಾಸೀನನಾಗಿ ಇರುವನೋ, ಯಾವನು ಪ್ರಕೃತಿಗುಣಗಳಿಂದ ಸ್ವಲ್ಪವೂ ವಿಚಲಿತನಾಗದಿರುವನೋ ಮತ್ತು ಯಾವನು 'ಪ್ರಕೃತಿಕಾರ್ಯಗಳಾದ ಗುಣಗಳೇ ತಮ್ಮ ತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತವೆ, ನಾನು ಮಾತ್ರ ದ್ರಷ್ಟಾಸ್ವರೂಪನು, ಅಕರ್ತ, ಅಸಂಗ, ಅವಿಕಾರಿಯು'—ಹೀಗೆಂದು ತಿಳಿದು ತನ್ನ ಸ್ವರೂಪಸುಖದಲ್ಲಿ ನಿಶ್ಚಲನಾದ ಸ್ಥಿತಿಯುಳ್ಳವನಾಗಿರುವನೋ ಅವನೇ ಗುಣಾತೀತನು. (X)

ಸಮದುಃಖಸುಖಃ ಸ್ವಸ್ಥಃ, ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರ, ಸ್ತುಲ್ಯ ನಿಂದಾತ್ಮ ಸಂಸ್ತುತಿಃ ॥೨೪॥
ಮಾನಾಪಮಾನಯೋಸ್ತುಲ್ಯ, ಸ್ತುಲ್ಯೋಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ, ಗುಣಾತೀತಃ ಸ ಉಚ್ಯತೇ ॥೨೫॥

ಯಾರಿಗೆ ಸುಖದುಃಖಗಳೆರಡೂ ಸಮವಾಗಿರುವುದೋ, ತನ್ನ ಆತ್ಮನಲ್ಲಿಯೇ ನಿಷ್ಠೆ (ಸ್ಥಿತಿ) ಇರುವುದೋ, ಬಂಗಾರ ಕಲ್ಲು ಮಣ್ಣಿನ ಹೆಂಟೆಯಲ್ಲಿ ವಿಷಮಭಾವನೆಯು ತೊಲಗಿ ಸಮ ಬುದ್ಧಿಯುಂಟಾಗಿರುವುದೋ, ಯಾರಿಗೆ ಪ್ರಿಯಾಪ್ರಿಯಗಳು ಸ್ತುತಿ—ನಿಂದೆಗಳು ಸಮವಾಗಿ ತಿಳಿದು ಬರುವುದೋ ಇಂತಹ ಧೀರನು (ಜ್ಞಾನಿ) ಗುಣಾತೀತನು.

ಯಾರು ಮಾನಾಪಮಾನ ಪ್ರಾಪ್ತಿಯಲ್ಲಿ ಸಮರಸಭಾವವುಳ್ಳವನಾಗಿಯೂ, ಶತ್ರು ಮಿತ್ರ ಪಕ್ಷಗಳಲ್ಲಿ ಸಮಭಾವದಿಂದ ಇರುವನಾಗಿಯೂ, ಸಮಸ್ತ ಕರ್ಮಾರಂಭಗಳನ್ನು ಬಿಟ್ಟಿರುವವನಾಗಿಯೂ ಇರುವನೋ ಅವನನ್ನು ಗುಣಾತೀತನೆಂದು ಹೇಳುವರು.

---

(x) ಆರನೆಯ ಭೂಮಿಕೆಯನ್ನು ಪಡೆದ ಬ್ರಹ್ಮವಿದ್ವರೀಯಾನ್ ಪುರುಷನಲ್ಲಿ ಈ ಲಕ್ಷಣಗಳು ಕಂಡುಬರುತ್ತವೆ.

24ನೆಯ ಶ್ಲೋಕವು 'ಅಸಂಸಕ್ತಿ' ಎಂಬ ಐದನೆಯ ಭೂಮಿಕೆಯನ್ನು ಪಡೆದ ಬ್ರಹ್ಮವಿದ್ವರನ ಲಕ್ಷಣವನ್ನೂ ಮತ್ತು 25ನೆಯ ಶ್ಲೋಕವು "ಸತ್ವಾಪತ್ತಿ" ಭೂಮಿಕೆಯ ಬ್ರಹ್ಮವೇತ್ತನ ಲಕ್ಷಣಗಳನ್ನೂ ತಿಳಿಸುತ್ತದೆ.

ಮಾಂ ಚ ಯೋಽವ್ಯಭಿಚಾರೇಣ, ಭಕ್ತಿಯೋಗೇನ ಸೇವತೇ ।
ಸ ಗುಣಾನ್ಸಮತೀತ್ಯೈತಾನ್, ಬ್ರಹ್ಮಭೂಯಾಯ ಕಲ್ಪತೇ ॥೨೬॥

ಯಾವ ಪುರುಷನು ನನ್ನನ್ನು ಅಖಂಡವಾದ ಭಕ್ತಿಯೋಗದಿಂದ ಭಜಿಸುವನೋ ಅವನು ಈ ಮೂರು ಗುಣಗಳನ್ನು ಉಲ್ಲಂಘಿಸಿ ಬ್ರಹ್ಮಭಾವವನ್ನು ಹೊಂದಲು ಅರ್ಹನಾಗಿರುವನು.

ಬ್ರಹ್ಮಣೋ ಹಿ ಪ್ರತಿಷ್ಠಾಹ, ಮಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ, ಸುಖಸ್ಯೈಕಾಂತಿಕಸ್ಯ ಚ ॥೨೭॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಗುಣತ್ರಯ ವಿಭಾಗಯೋಗೋನಾಮ
ಚತುರ್ದಶೋಽಧ್ಯಾಯಃ

ನಾನು ಅವ್ಯಯವಾಗಿಯೂ (1) ಅಮೃತವಾಗಿಯೂ (2) ಇರುವ ಪರಬ್ರಹ್ಮಕ್ಕೂ, ಶಾಶ್ವತವಾಗಿರುವ ಧರ್ಮಕ್ಕೂ, (3) ಅಖಂಡವಾಗಿರುವ ಸುಖಕ್ಕೂ (4) ಮುಖ್ಯಾಶ್ರಯನಾಗಿರುವೆನು. ಅಂದರೆ, ನಾನೇ ಸ್ವರೂಪವಾಗಿರುವೆನು.

ಇಂತು ಶ್ರೀ ಮದ್ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗಯೋಗೋನಾಮವೆಂಬ
ಹದಿನಾಲ್ಕನೆಯ ಅಧ್ಯಾಯವು ಸಂಪೂರ್ಣವು.



1. ಷಡ್ಭಾವ ವಿಕಾರಗಳಿಲ್ಲದ್ದು. 2. ನಾಶವಿಲ್ಲದ್ದು. 3. ಜ್ಞಾನನಿಷ್ಠೆಯಿಂದ ಹೊಂದಲು ಯೋಗ್ಯವಾದುದು 4. ವಿಷಯಜನ್ಯಸುಖದಂತೆ ವ್ಯಭಿಚರಿಸದೆ ಸರ್ವದೇಶ ಕಾಲಾವಸ್ಥೆಯಲ್ಲಿಯೂ ಇರುವ ವ್ಯಾಪಕವಾದ ಸುಖ. ಇದನ್ನೇ, ಶ್ರುತಿಯೂ "ಯೋವೈ ಭೂಮಾ ತತ್‌ಸುಖಮ್ ನಾಲ್ಪೇ ಸುಖಮಸ್ತಿ" ಎಂದು ಹೇಳಿದೆ. ಅಂದರೆ, ಸರ್ವತ್ರ ವ್ಯಾಪಕವಾದುದೇ ಸುಖರೂಪವಾದುದು. ಅಲ್ಪ ವ್ಯಾಪಕವಸ್ತುವಿನಲ್ಲಿ ಪರಮಾನಂದರೂಪ ಸುಖವಿಲ್ಲ.

# ಅಥ ಪುರುಷೋತ್ತಮಯೋಗೋನಾಮ ಪಂಚದಶೋಽಧ್ಯಾಯಃ

## ಶ್ರೀ ಭಗವಾನುವಾಚ

**ಊರ್ಧ್ವಮೂಲಮಧಶ್ಶಾಖ, ಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ, ಯಸ್ತಂ ವೇದ ಸ ವೇದವಿತ್ ॥೧॥**

ಶ್ರೀ ಭಗವಂತನಿಂತೆಂದನು:–ಸರ್ವೋತ್ಕೃಷ್ಟವಾಗಿರುವುದರಿಂದ ಊರ್ಧ್ವಸ್ಥಾನವಾದ ಮಾಯಾವಿಶಿಷ್ಟ ಬ್ರಹ್ಮವು (a) ಈ ಸಂಸಾರವೆಂಬ ಅಶ್ವತ್ಥವೃಕ್ಷಕ್ಕೆ ಮೂಲ (ಕಾರಣ) ವಾಗಿರುವುದು. ಕಾರ್ಯಕಾರಣ ಭಾವದಿಂದ ಉಂಟಾದಕಾರಣ ಇದಕ್ಕಿಂತಲೂ ನಿಕೃಷ್ಟವೆನಿಸಿದ ಮಹದಾದಿ (b) ತತ್ವಗಳು ಅಧಸ್ಥಾನೀಯವಾದ ಶಾಖೆಗಳಾಗಿರುವುವು. ವೇದಗಳೇ ಈ ವೃಕ್ಷದ ಎಲೆಗಳು. ಈ ವೃಕ್ಷವು ಬಹುಕಾಲದಿಂದ ಇರುವಂತಹುದು. ಹೀಗಿರುವ ಈ ಸಂಸಾರ ವೃಕ್ಷವನ್ನು ಯಾವನು ತಿಳಿದಿರುವನೋ ಅವನೇ ವೇದಾರ್ಥವನ್ನು ಬಲ್ಲವನು (ವೇದವೇತ್ತನು).

ವೃಕ್ಷಗಳಲ್ಲೆಲ್ಲಾ ಅಶ್ವತ್ಥವೃಕ್ಷವು ಶ್ರೇಷ್ಠವಾದುದು. "ಅಶ್ವತ್ಥಃ ಸರ್ವ ವೃಕ್ಷಾಣಾಂ" ಎಂದು ಹಿಂದೆ ಹೇಳಿರುವುದರಿಂದ ಇದು ಭಗವಂತನ ವಿಭೂತಿ. ಆದಕಾರಣ ಸಂಸಾರವನ್ನು ಈ ವೃಕ್ಷದ ರೂಪಕದಿಂದ ವರ್ಣಿಸಿದ್ದಾರೆ.

ಊರ್ಧ್ವ ಶಬ್ದವು ಕಾರಣದ ವಾಚಕವಾಗಿದೆ. ಸಂಸಾರವೆಲ್ಲಾ ಬಾಧೆ(c)ಯಾದಾಗ್ಯೂ ಬಾಧೆಯೆಂಬುವದಿಲ್ಲದೆ ಸಮಸ್ತ ಸಂಸಾರ ಭ್ರಮೆಗೆ ಅಧಿಷ್ಠಾನವಾಗಿರುವ ಬ್ರಹ್ಮವು "ಊರ್ಧ್ವ" ವೆನಿಸುವುದು. ಇದೇ ಸರ್ವ ಸೃಷ್ಟಿಗೂ ಮುಖ್ಯಕಾರಣವಾದುದರಿಂದ ಇದು "ಊರ್ಧ್ವಮೂಲವು" ಸಗುಣ ದೃಷ್ಟಿಯಿಂದ ನೋಡಲು, ಈ ಸಂಸಾರ ವೃಕ್ಷದ ಉತ್ಪತ್ತಿ ಮತ್ತು ವಿಸ್ತಾರವು ಆದಿಪುರುಷನಾದ ಶ್ರೀಮನ್ನಾರಾಯಣನಿಂದಲೇ ಆಗಿದೆ. ಆದಕಾರಣ ಶ್ರೀ ಹರಿಯೇ ಊರ್ಧ್ವಮೂಲನು.

---

(a) ಮಾಯೆಯಿಂದ ಕೂಡಿರುವ ಬ್ರಹ್ಮವು. (b) ಮಹತ್ತತ್ವ, ಅಹಂಕಾರ, ತನ್ಮಾತ್ರೆಗಳು—ಸೃಷ್ಟಿಯ ಮೂಲತತ್ವಗಳು. (c) ನಾಶ.

ಅಧಃ ಶಾಖಂ :— ಇಲ್ಲಿ ಅಧಃ ಶಬ್ದದಿಂದ ಆಮೇಲೆ ಹುಟ್ಟಿದವುಗಳಾದ ಕಾರ್ಯೋಪಾದಿಯುಳ್ಳ ಅವ್ಯಾಕೃತ, ಹಿರಣ್ಯಗರ್ಭ, ವಿರಾಟ್—ಇವರನ್ನಾಗಲೀ ಅಥವಾ ಅವ್ಯಕ್ತ, ಮಹತ್ತತ್ತ್ವ, ಅಹಂಕಾರ, ಪಂಚತನ್ಮಾತ್ರಾದಿಗಳನ್ನು ಗ್ರಹಿಸಬೇಕು. ಇವು ಒಂದರಿಂದ ಒಂದು ಹುಟ್ಟಿದವುಗಳಾದುದರಿಂದ ನಿರುಪಾಧಿಕ ಬ್ರಹ್ಮಕ್ಕಿಂತ ನಿಕೃಷ್ಟವಾದವು. ಅಥವಾ "ಪಾದೋಽಸ್ಯ ವಿಶ್ವಾಭೂತಾನಿ, ತ್ರಿಪಾದಸ್ಯಾಮೃತಂ ದಿವಿ ।" ಎಂಬಂತೆ, ಸರ್ವಸೃಷ್ಟಿಯೂ ಭಗವಂತನ ಏಕಪಾದ (ಅಂಶ); ಆದುದರಿಂದ ಅವನಿಗಿಂತ ಇವೆಲ್ಲವೂ ನಿಕೃಷ್ಟ (ಕೀಳು). ಅವನಾದರೋ ಇನ್ನೂ ಪಾದತ್ರಯಗಳಿಂದ ಕೂಡಿದವನಾಗಿ ಸರ್ವ ವ್ಯಾಪಕನಾಗಿ ಸರ್ವಶ್ರೇಷ್ಠನಾಗಿದ್ದಾನೆ. ಆದಕಾರಣ ಭಗವಂತನಿಗಿಂತ ಈ ಸಂಸಾರವು "ಅಧಃ"ವಾಗಿದೆ. ಕಾರ್ಯಕಾರಣಭಾವದಿಂದ ಉತ್ಪನ್ನವಾಗಿರುವ ಪ್ರಯುಕ್ತ ಈ ಸೃಷ್ಟಿಯು ಅಂದರೆ ಸಂಸಾರವು "ಅಧಃಶಾಖ"ವಾಗಿದೆ.

ಅಶ್ವತ್ಥ :— "ತ್ಥ" ಎಂದರೆ ಇರುವಂಥಾದ್ದು; "ಶ್ವ" ನಾಳೆಯವರೆವಿಗೂ; "ಅ" ಇಲ್ಲದಿರುವುದು. ಅಂದರೆ ನಾಳೆಯವರೆವಿಗೂ ಇರುವುದೆಂಬ ಭರವಸೆ ಇಲ್ಲದಿರುವಂತಹುದು. ಇಂತಹ ಸ್ವರೂಪವುಳ್ಳದ್ದೇ ಸಂಸಾರವು. ತೋರ್ಕೆಗೆ ಮಾತ್ರವಿರುವುದು; ಜ್ಞಾನವಾದೊಡನೆಯೇ ಇಲ್ಲದೇಹೋಗುವುದು.

ಅವ್ಯಯ :— ಅನಾದಿಕಾಲದಿಂದ ನಾನಾವಿಧ ಸೃಷ್ಟಿರಚನೆಗೆ ಆಶ್ರಯಸ್ಥಾನವಾಗಿದೆ. ಆತ್ಮಜ್ಞಾನವಿಲ್ಲದೆ ಬೇರೆಯಾವ ಉಪಾಯದಿಂದಲೂ ಇದರ ಉಚ್ಛೇದವಾಗುವುದಿಲ್ಲ. ಆದಕಾರಣ ಗೌಣಾರ್ಥದಲ್ಲಿ ಅವ್ಯಯವೆಂದು ಹೇಳಲ್ಪಟ್ಟಿದೆ. ಬ್ರಹ್ಮಜ್ಞಾನದಿಂದ ಈ ಸಂಸಾರ ವೃಕ್ಷದ ಮೂಲೋತ್ಪಾಟನೆಯಾಗುವುದು. ಆದಕಾರಣ ಇದು ಅನಾದಿಯಾದರೂ ಸಾಂತ. ಪರಂತು ಬ್ರಹ್ಮವು ಅನಾದಿ ಮತ್ತು ಅನಂತ.

"ಛಂದಾಂಸಿಯಸ್ಯಪರ್ಣಾನಿ" :— ಸಂಸಾರರೂಪೀ ಈ ಅರಳೀ ವೃಕ್ಷಕ್ಕೆ ಕರ್ಮಕಾಂಡವೆಂಬ ವೇದವು ರಕ್ಷಣೆಗೈಯುವ ಎಲೆ ಹೂ ಕಾಯಿಗಳಂತಿವೆ.

ಯಸ್ತಂ ವೇದಸವೇದವಿತ್ :— "ಈ ಸಂಸಾರ ವೃಕ್ಷಕ್ಕೆ ಬ್ರಹ್ಮವು ಮೂಲವಾಗಿರುವುದು; ಹಿರಣ್ಯಗರ್ಭಾದಿ ಜೀವರು ಶಾಖೆಗಳಾಗಿರುವರು; ಇದು ಸ್ವರೂಪದಿಂದಾದರೆ ವಿನಾಶವುಳ್ಳದ್ದೇ ಆದರೂ ಪ್ರವಾಹರೂಪದಿಂದ ಅನಂತವೆನಿಸುವುದು; ಇದು ವೇದೋಕ್ತ ಕಾಮ್ಯಕರ್ಮವೆಂಬ ಜಲದಿಂದ

ಪೋಷಿತವಾಗಿ ವಿಸ್ತಾರವಾಗಿ ಬೆಳೆದಿರುವುದು; ಆದರೆ ಇದು ಬ್ರಹ್ಮಜ್ಞಾನ ವೆಂಬ ಖಡ್ಗದಿಂದ ಛೇದಿಸಲ್ಪಡುವುದು"—ಈ ಪ್ರಕಾರವಾಗಿ ಯಾರು ತಿಳಿಯು ವನೋ ಅವನೇ ಎಲ್ಲಾ ವೇದಗಳ ಮಥಿತಾರ್ಥವನ್ನು ತಿಳಿದವನು.

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ, ಗುಣ ಪ್ರವೃದ್ಧಾ ವಿಷಯ ಪ್ರವಾಲಾಃ । ಅಧಶ್ಚ ಮೂಲಾನ್ಯನುಸಂತತಾನಿ, ಕರ್ಮಾನುಬಂಧೀನೀ ಮನುಷ್ಯಲೋಕೇ ॥೨॥**

ಈ ಸಂಸಾರ ವೃಕ್ಷದ ಶಾಖೆಗಳು ಊರ್ಧ್ವಲೋಕಗಳಾದ ಬ್ರಹ್ಮಾದಿ ಲೋಕಗಳಲ್ಲಿಯೂ, ಮತ್ತು ಅಧೋಲೋಕಗಳಾದ ಮನುಷ್ಯಾದಿ ಲೋಕಗಳ ಲ್ಲಿಯೂ ಪ್ರಸರಿಸಿರುವುವು. ಈ ಶಾಖೆಗಳು ಸತ್ವಾದಿಗುಣಗಳೆಂಬ ಜಲದಿಂದ ವೃದ್ಧಿಯಾಗಿರುವುವು ಮತ್ತು ವಿಷಯಭೋಗಗಳೆಂಬ ಕೋಮಲ ಪಲ್ಲವ [ಚಿಗುರು]ಗಳಿಂದ ಕೂಡಿರುವುದು. ಮನುಷ್ಯಲೋಕದಲ್ಲಿ ಕಾಮ್ಯ ಕರ್ಮವೇ ಪ್ರಧಾನವಾಗಿರುವ ವಾಸನಾಮಯವಾದ ಅವಾಂತರ ಮೂಲಗಳೂ ಸಹ ಅನೇಕವಾಗಿ ಊರಿರುವುವು [ನಾಟಕೊಂಡಿರುವುವು].

**ನ ರೂಪಮಸ್ಯೇಹ ತಥೋಪಲಭ್ಯತೇ, ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ । ಅಶ್ವತ್ಥಮೇನಂ ಸುವಿರೂಢಮೂಲ, ಮಸಂಗಶಸ್ತ್ರೇಣ ದೃಢೇನ ಛಿತ್ವಾ ॥೩॥**

**ತತಃ ಪದಂ ತತ್ಪರಿಮಾರ್ಗಿತವ್ಯಂ, ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ । ತಮೇವ ಚಾದ್ಯಂ ಪುರುಷಂ ಪ್ರಪದ್ಯೇ, ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥೪॥**

ಈ ಲೋಕದಲ್ಲಿ ವಿಚಾರಪರರಿಗೂ ಬ್ರಹ್ಮವೇತ್ತರಿಗೂ ಈ ಸಂಸಾರ ವೃಕ್ಷದ ಸ್ವರೂಪವು [ಇದುವರೆಗೂ ತಿಳಿಸಿದಂತೆ] ಕಂಡುಬರುವುದಿಲ್ಲ. ಅಲ್ಲದೆ, ಇದನ್ನು ವಿಚಾರಿಸಲು ಹೊರಟರೆ ಇದಕ್ಕೆ ಆದಿಯಾಗಲೀ ಅಂತ್ಯವಾಗಲೀ ಕೊನೆಗೆ ಸ್ಥಿತಿಯಾದರೂ ಆಗಲೀ ಇರುವುದಿಲ್ಲ. ಆದರೂ ವಾಸನಾಮಯ ವಾದ ಈ ಸಂಸಾರ ವೃಕ್ಷದ ಮೂಲವು ನೆಲದಲ್ಲಿ ಆಳವಾಗಿ ಇಳಿದಿರುವುದರಿಂದ ಅತಿ ದೃಢವಾಗಿರುವುದು. ಹೀಗೆ ದೃಢವಾದ ವಾಸನಾರೂಪೀ ಬೇರುಗಳುಳ್ಳ ಅತಿ ವಿಶಾಲವಾದ ಈ ಸಂಸಾರ ವೃಕ್ಷವನ್ನು ದೃಢವಾಗಿರುವ ಅಸಂಗ[ವೈರಾಗ್ಯ]

ವೆಂಬ ಶಸ್ತ್ರ [X] ದಿಂದ ಛೇದಿಸಿ, ತದನಂತರ ಯಾವ ಸ್ಥಳವನ್ನು ಹೊಂದಿದರೆ ಪುನರಾವೃತ್ತಿ ಇರುವುದಿಲ್ಲವೋ ಆ ಪರಮಪದವನ್ನು ಹುಡುಕಬೇಕಾಗಿರುವುದು. ಯಾವ ಪರಮಾತ್ಮನಿಂದ ಹುಟ್ಟಿದ ಪುರಾತನವಾದ ಈ ಸಂಸಾರ ವೃಕ್ಷವು ಪ್ರವೃತ್ತವಾಗಿ ಅತಿ ವಿಸ್ತಾರವಾಗಿ ಪ್ರಸರಿಸಿಕೊಂಡಿದೆಯೋ, ಅಂತಹ ಸರ್ವ ಕಾರಣನಾಗಿರುವ ಆ ಪರಮ ಪುರುಷನನ್ನೇ [ಸಂಸಾರದ ನಿವೃತ್ಯರ್ಥ ಮತ್ತು ಪರಮಾನಂದದ ಪ್ರಾಪ್ತ್ಯರ್ಥ] ಶರಣು ಹೊಂದುವೆನು. [ಹೀಗೆಂಬ ನಿಶ್ಚಯದಿಂದ ಹುಡುಕುವುದು].

ಹಿಂದಿನ ಎರಡು ಶ್ಲೋಕಗಳಲ್ಲಿ ವರ್ಣಿಸಿರುವಂತೆ, ಈ ಸಂಸಾರರೂಪ ವೃಕ್ಷವು ಊರ್ಧ್ವಮೂಲ, ಅಧಃಶಾಖ, ಅವ್ಯಯ, ವೇದಗಳೆಂಬ ಎಲೆಗಳುಳ್ಳದ್ದು, ಈ ರೀತಿಯಾಗಿ ಜಿಜ್ಞಾಸುಗಳಿಗೂ, ಬ್ರಹ್ಮವೇತ್ತರಿಗೂ ಕಂಡುಬರುವುದಿಲ್ಲ. ಬ್ರಹ್ಮವಿಚಾರಮಾಡಲು ಹೊರಟರೆ, ಈ ವೃಕ್ಷಕ್ಕೆ ಸ್ವರೂಪವೇ ಇಲ್ಲದಂತಾಗುವುದು. ಏಕೆಂದರೆ, ಜಗತ್ತು ಮೂರು ಕಾಲದಲ್ಲಿ ಇಲ್ಲದ್ದು, ಪುಸಿಯಾಗಿ ತೋರುತ್ತಿರುವುದು; ಮೃಗಜಲದಂತೆ, ವಂಧ್ಯಾ ಪುತ್ರನಂತೆ, ಆಕಾಶ ಕುಸುಮದಂತೆ, ಮಿಥ್ಯಾ ಪ್ರತೀತಿಯುಳ್ಳದ್ದಾಗಿದೆಯೋ ಹೊರತು ವಿಚಾರಿಸಲು ಅದು ಇಲ್ಲದೇ ಹೋಗುವುದು. ವಸ್ತುತಃ ನೋಡಲು, ತ್ರಿಕಾಲದಲ್ಲೂ ಸಂಸಾರದ ಅತ್ಯಂತಾಭಾವವೇ ಸಿದ್ಧಿಸುವುದು. ಇಂತಹ ಮಿಥ್ಯಾಸಂಸಾರವನ್ನು "ಅಶ್ವತ್ಥ"ವೆಂದು ಕರೆಯುವುದು ತುಂಬಾ ಸಮಂಜಸವಾಗಿದೆ.

ವಿಚಾರಮಾಡಲು, ಈ ಜಗತ್ತಿನ ಆದಿಯಾಗಲೀ [ಉತ್ಪತ್ತಿಯಾಗಲೀ], ಸ್ಥಿತಿಯಾಗಲೀ, ಅಂತ್ಯವಾಗಲೀ ಇರುವಂತೆ ಕಂಡುಬರುವುದಿಲ್ಲ. ಏಕೆಂದರೆ, ಕಲ್ಪಿತ ಜಗತ್ತು ಅಧಿಷ್ಠಾನದ [ಬ್ರಹ್ಮದ] ಸ್ವರೂಪವೇ ಆಗಿರುತ್ತದೆ.

ಜಗತ್ತು ಇಂತಹ ಮಿಥ್ಯಾಸ್ವರೂಪವುಳ್ಳದ್ದಾದರೂ, ಅಜ್ಞಾನದಿಂದ ಸತ್ಯವಾಗಿ ತೋರುತ್ತಲಿದೆ. ಜ್ಞಾನದಿಂದ ಇಲ್ಲವಾಗುತ್ತದೆ. ಅಂತಃಕರಣದ ಮಲಿನ ವಾಸನಾವಿಶೇಷಗಳೇ ಅಜ್ಞಾನಕ್ಕೆ ಕಾರಣವಾಗಿದೆ. ಆದ್ದರಿಂದ ವೈರಾಗ್ಯವೆಂಬ ಖಡ್ಗದಿಂದ ವಾಸನೆಗಳನ್ನು ನಿರ್ಮೂಲಮಾಡಿ, ಸಂಸಾರ ವೃಕ್ಷವನ್ನುಬೇರುಸಹಿತ ಕಿತ್ತೊಗೆದು, ಮೋಕ್ಷಪದವಿಯನ್ನು ಹುಡುಕಬೇಕು. ಪುನರಾವೃತ್ತಿರಹಿತವಾದ ಪರಮಪದವನ್ನು ಪಡೆಯಲು ಯಾರಲ್ಲಿ ಮತ್ತು ಯಾರಿಂದ ಸಂಸಾರವು ಕಂಡುಬರುತ್ತಿರುವುದೋ, ಇದಕ್ಕೆ ಅಧಿಷ್ಠಾನವಾದ

---

(X) ದೇಹಾದಿಗಳಿಗಿಂತ ಆತ್ಮನು ವಿಲಕ್ಷಣನು, ಅಸಂಗನು, ನಿರ್ವಿಕಾರಿ ಪೂರ್ಣನು ಎಂಬ ಭಾವನೆ.

ಪರಮಾತ್ಮನನ್ನು ಅನನ್ಯ ಭಕ್ತಿಯಿಂದ ಶರಣು ಹೋಗಬೇಕು. ಇದರ ವಿನಹ ಬೇರೆಯಾವ ಉಪಾಯದಿಂದಲೂ ಸಂಸಾರದ [ಮಿಥ್ಯಾ ಪ್ರತೀತಿಯು] ನಿವೃತ್ತಿ ಯಾಗುವುದಿಲ್ಲ.

**ನಿರ್ಮಾನಮೋಹಾ ಜಿತಸಂಗದೋಷಾ, ಅಧ್ಯಾತ್ಮನಿತ್ಯಾ ವಿನಿವೃತ್ತ-**
**ಕಾಮಾಃ। ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ, ರ್ಗಚ್ಛಂತ್ಯ-**
**ಮೂಢಾಃ ಪದಮವ್ಯಯಂ ತತ್** ॥೫॥

ಮಾನ ಮೋಹಾದಿಗಳನ್ನು ಪರಿತ್ಯಜಿಸಿದವರು, ಸಂಗ [ಕರ್ತೃತ್ವಾಭಿಮಾನ] ಮತ್ತು ದೋಷ [ರಾಗದ್ವೇಷಗಳು]—ಇವುಗಳನ್ನು ಜಯಿಸಿದವರು, ಪರಮಾತ್ಮನ ಸ್ವರೂಪದಲ್ಲಿ ನಿತ್ಯತತ್ಪರರಾಗಿರುವವರು, ಸಮಸ್ತ ಕಾಮನೆಗಳನ್ನೂ ಬಿಟ್ಟಿರತಕ್ಕವರು, ಶೀತೋಷ್ಣ ಸುಖದುಃಖಗಳೆಂಬ ದ್ವಂದ್ವಗಳಿಂದ ಬಿಡಲ್ಪಟ್ಟವರು—ಹೀಗಿರುವ ಜ್ಞಾನೀಜನಗಳು ಅವಿನಾಶಿಯಾದ ಪರಮಪದವನ್ನು ಹೊಂದುತ್ತಾರೆ.

ಹಿಂದೆ ಪರಮಪದವಿಯ ಮಾರ್ಗವನ್ನು ಹುಡುಕಬೇಕೆಂದು ತಿಳಿಸಿದ್ದರು. ಅಲ್ಲಿ ಭಗವಂತನ ಶರಣಾಗತಿ ಎಂಬ ಸಾಧನೆಯೊಂದನ್ನೂ ಹೇಳಿದರು. ಈ ಶ್ಲೋಕದಲ್ಲಿ ಉಳಿದ ಸಾಧನೆಗಳನ್ನು ತಿಳಿಸಿದ್ದಾರೆ. ಇವು ಸಾಧಕನಿಗೆ ಉತ್ತಮ ಸಾಧನಗಳಾಗಿಯೂ, ಜ್ಞಾನಿಗೆ ಸಹಜ ಲಕ್ಷಣಗಳಾಗಿಯೂ ಇವೆ. ಆದುದರಿಂದ ಇವುಗಳ ಅಭ್ಯಾಸದಿಂದ ಜ್ಞಾನವು ಸುಲಭವಾಗಿಯೇ ಉಂಟಾಗುತ್ತದೆ.

**ನ ತದ್ಭಾಸಯತೇ ಸೂರ್ಯೋ, ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ, ತದ್ಧಾಮ ಪರಮಂ ಮಮ** ॥೬॥

ಯಾವ ಮೋಕ್ಷವೆಂಬ ಪರಮ ಪದವನ್ನು ಸೂರ್ಯನು ಪ್ರಕಾಶಿಸುವುದಿಲ್ಲವೋ ಮತ್ತು ಚಂದ್ರನೂ ಅಗ್ನಿಯೂ ಸಹ ಪ್ರಕಾಶಮಾಡುವುದಿಲ್ಲವೋ, ಯಾವ ಸ್ಥಾನವನ್ನು ಹೊಂದಿದರೆ ಈ ಸಂಸಾರಕ್ಕೆ ಪುನಃ ಹಿಂದಿರುಗಿ ಬರುವುದಿಲ್ಲವೋ, ಆ ಸರ್ವೋತ್ಕೃಷ್ಟವಾದ ಮೋಕ್ಷವೆಂಬ ಆತ್ಮಪದವು ನನ್ನದಾಗಿರುವುದು.

**ಮಮೈವಾಂಶೋ ಜೀವಲೋಕೇ, ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ, ಪ್ರಕೃತಿಸ್ಥಾನಿ ಕರ್ಷತಿ** ॥೭॥

ಈ ಪ್ರಪಂಚದಲ್ಲಿ ಪರಮಾತ್ಮನಾದ ನನ್ನ ಅಂಶವೇ ಸನಾತನವಾದ ಜೀವರೂಪವಾಗಿರುವುದು. ಈ ಜೀವನು ಮರಣಕಾಲದಲ್ಲಿ ಅವಿದ್ಯೆಯಲ್ಲಿರುವ ಐದು ಜ್ಞಾನೇಂದ್ರಿಯಗಳನ್ನೂ ಮನಸ್ಸನ್ನೂ—ಈ ಆರನ್ನೂ ಶರೀರದಿಂದ ಆಕರ್ಷಣೆ ಮಾಡುವನು.

**ಶರೀರಂ ಯದವಾಪ್ನೋತಿ, ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ, ವಾಯುರ್ಗಂಧಾನಿವಾಶಯಾತ್ ॥೮॥**

ಜೀವನು ಈ ದೇಹವನ್ನು ಬಿಟ್ಟು ನೂತನ ದೇಹವನ್ನು ಹೊಂದುವಾಗಲೂ, ಆ ಶರೀರವನ್ನು ಪುನಃ ಬಿಡುವಾಗಲೂ, ಹೂವಿನಲ್ಲಿರುವ ಗಂಧವನ್ನು ಗಾಳಿಯು ಸ್ಥಳದಿಂದ ಸ್ಥಳಾಂತರಕ್ಕೆ ತೆಗೆದುಕೊಂಡು ಹೋಗುವಂತೆ, ಮನದಿಂದ ಕೂಡಿದ ಇಂದ್ರಿಯಶಕ್ತಿಗಳನ್ನು ತೆಗೆದುಕೊಂಡು ಹೋಗುವನು.

ಬಾಡಿಗೆಮನೆಯಲ್ಲಿದ್ದವನು ಆ ಮನೆಯನ್ನು ಬಿಟ್ಟು ಬೇರೊಂದು ಮನೆಗೆ ಹೋಗುವಾಗ ಜೊತೆಯಲ್ಲಿ ತನ್ನ ಸಮಸ್ತ ಸಾಮಗ್ರಿಗಳನ್ನೂ ತೆಗೆದುಕೊಂಡು ಹೋಗುವಂತೆ, ದೇಹಿಯಾದ ಈ ಜೀವನೂ ಸಹ (X) ಪ್ರಕೃತಿಯ ಸ್ವಾಧೀನವಾದ ಈ ದೇಹವನ್ನು ಬಿಡುವಾಗಲೂ ಮತ್ತೊಂದು ದೇಹವನ್ನು ಪ್ರವೇಶಿಸುವಾಗಲೂ ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಅಂತಃಕರಣವನ್ನೂ ಮತ್ತು ಸ್ಥೂಲ ಸೂಕ್ಷ್ಮ ಸಂಸ್ಕಾರಗಳನ್ನೂ ತೆಗೆದುಕೊಂಡು ಹೋಗುವನು. ಇವುಗಳೇ ಜನ್ಮಮರಣಗಳಿಗೆ ಕಾರಣವಾಗಿರುತ್ತವೆ.

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ, ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ, ವಿಷಯಾನುಪಸೇವತೇ ॥೯॥**

ದೇಹಿಯಾದ ಈ ಜೀವಾತ್ಮನು ಶ್ರೋತ್ರಾದಿ ದಶೇಂದ್ರಿಯಗಳನ್ನೂ ಮನಸ್ಸನ್ನೂ ಆಶ್ರಯಿಸಿಕೊಂಡೇ ಈ ದೇಹದಲ್ಲಿ ಇದ್ದುಕೊಂಡು ಇಂದ್ರಿಯಗಳ ಸಹಾಯದಿಂದ ವಿಷಯಭೋಗಗಳನ್ನು ಅನುಭವಿಸುವನು.

**ಉತ್ಕ್ರಾಮಂತಂ ಸ್ಥಿತಂ ವಾಪಿ, ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ, ಪಶ್ಯಂತಿ ಜ್ಞಾನಚಕ್ಷುಷಃ ॥೧೦॥**

---

(X) ಎಲ್ಲಾ ದೇಹಗಳೂ ಪ್ರಕೃತಿಯ ಕಾರ್ಯವಾದದ್ದರಿಂದ ಪರರ ಮನೆಯಂತೆ ಅಥವಾ ಬಾಡಿಗೆಯ ಮನೆಯಂತೆ ಇರುವುದೆಂದು ಗ್ರಹಿಸಬೇಕು.

ಜೀವನು ಈ ಶರೀರವನ್ನು ಬಿಟ್ಟು ಬೇರೇ ಶರೀರವನ್ನು ಹೊಂದುವಾಗಲೂ, ಶರೀರದಲ್ಲಿರುವಾಗಲೂ, ವಿಷಯಭೋಗಗಳನ್ನು ಅನುಭವಿಸುವಾಗಲೂ, ಜ್ಞಾನ ನೇತ್ರಗಳುಳ್ಳ ಮಹಾತ್ಮರುಗಳು ಈ ಆತ್ಮನನ್ನು ನೋಡುತ್ತಿರುವರು. ಅಜ್ಞಾನಿಗಳು ( ದೇಹಾತ್ಮಬುದ್ಧಿಯುಳ್ಳವರಾದಕಾರಣ ) ಈ ಆತ್ಮನನ್ನು ತಿಳಿಯದವರಾಗಿದ್ದಾರೆ.

**ಯತಂತೋ ಯೋಗಿನಶ್ಚೈನಂ, ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ, ನೈನಂ ಪಶ್ಯಂತ್ಯಚೇತಸಃ ॥೧೧॥**

ಧ್ಯಾನಾಭ್ಯಾಸಗಳಿಂದ ಸದಾ ಪ್ರಯತ್ನಮಾಡುವ ಯೋಗಿಗಳು ತಮ್ಮ ಹೃದಯದಲ್ಲಿರುವ ಆತ್ಮನನ್ನು ನೋಡುವರು. ಆದರೆ ಪ್ರಯತ್ನಮಾಡುತ್ತಿದ್ದರೂ ಅಶುದ್ಧಾಂತಃಕರಣವುಳ್ಳ ಅವಿವೇಕಿಗಳು ಈ ಆತ್ಮನನ್ನು ನೋಡದವರಾಗಿರುವರು.

**ಯದಾದಿತ್ಯಗತಂ ತೇಜೋ, ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ, ತತ್ತೇಜೋ ವಿದ್ಧಿ ಮಾಮಕಮ್ ॥೧೨॥**

ಸಕಲ ಜಗತ್ತನ್ನು ಪ್ರಕಾಶಿಸುವ ಸೂರ್ಯನಲ್ಲಿ ಯಾವ ತೇಜಸ್ಸಿರುವುದೋ ಮತ್ತು ಚಂದ್ರನಲ್ಲಿಯೂ ಅಗ್ನಿಯಲ್ಲಿಯೂ ಯಾವ ತೇಜಸ್ಸಿರುವುದೋ ಆ ತೇಜಸ್ಸು ನನ್ನದೇ ಎಂಬುದಾಗಿ ತಿಳಿದುಕೋ.

ಸೂರ್ಯ ಚಂದ್ರಾಗ್ನಿ ವಿದ್ಯುದಾ(X)ದಿಗಳಲ್ಲಿರುವ ತೇಜಸ್ಸು ಸ್ವಪ್ರಕಾಶವಲ್ಲ, ಅದು ಪರಪ್ರಕಾಶ. ಪರಮಾತ್ಮನಿಂದ ಪ್ರಕಾಶವನ್ನು ಹೊಂದಿ ಲೋಕವನ್ನೆಲ್ಲಾ ಬೆಳಗುತ್ತಿವೆ. ಆದ್ದರಿಂದ ಸೂರ್ಯ ಚಂದ್ರಾದಿಗಳು ಪರಮಾತ್ಮನನ್ನ ಪ್ರಕಾಶಪಡಿಸಲಾರರು. ಈ ಭಾವವನ್ನು ಹಿಂದೆ (ನತದ್ಭಾಸಯತೇ ಸೂರ್ಯೋ) ಎಂಬ ವಚನದಿಂದ ಹೇಳಿದ್ದಾರೆ. ಇದನ್ನು ಉಪನಿಷತ್ತುಗಳೂ ಹೀಗೆ ತಿಳಿಸುತ್ತವೆ.

ಶ್ಲೋಕ॥ ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯಭಾಸಾ ಸರ್ವಮಿದಂ ವಿಭಾತಿ ॥

(X) ವಿದ್ಯುತ್-ಮಿಂಚು.

**ಅರ್ಥ** :-ಆ ಬ್ರಹ್ಮವನ್ನು ಸೂರ್ಯನು ಪ್ರಕಾಶಿಸುವುದಿಲ್ಲ; ಚಂದ್ರನಕ್ಷತ್ರಗಳೂ ಪ್ರಕಾಶಿಸಲಾರವು; ಹೀಗಾದ ಬಳಿಕ ಅಲ್ಪಪ್ರಕಾಶವುಳ್ಳ ಅಗ್ನಿಯು ಪರಬ್ರಹ್ಮವನ್ನು ಹೇಗೆ ಪ್ರಕಾಶಪಡಿಸೀತು ? ಅಂದರೆ, ಪ್ರಕಾಶಪಡಿಸಲಾರದು. ಬ್ರಹ್ಮದ ಪ್ರಕಾಶದಿಂದಲೇ ಈ ಜಗತ್ತೆಲ್ಲವೂ ಪ್ರಕಾಶಿಸುತ್ತಲಿದೆ.

ಸೂರ್ಯಾದಿಗಳು ಪರಮಾತ್ಮನಿಂದ ಪ್ರಕಾಶವನ್ನು ಪಡೆದು ಲೋಕವನ್ನೆಲ್ಲಾ ಪ್ರಕಾಶಿಸುತ್ತಿವೆ. ಆದಕಾರಣ ಸೂರ್ಯಾದಿಗಳಲ್ಲಿರುವ ಪ್ರಕಾಶವು ಪರಮಾತ್ಮನ ಪ್ರಕಾಶವೇ ಹೊರತು ಸೂರ್ಯಾದಿಗಳ ಸ್ವಂತ ಪ್ರಕಾಶವಲ್ಲ. ಇನ್ನು ಪರಮಾತ್ಮನಾದರೋ ಸ್ವಯಂ ಪ್ರಕಾಶನು, ಸೂರ್ಯಾದಿಗಳಿಂದ ಪ್ರಕಾಶಿತನಲ್ಲ.

**ಗಾಮಾವಿಶ್ಯ ಚ ಭೂತಾನಿ, ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ, ಸೋಮೋ ಭೂತ್ವಾ ರಸಾತ್ಮಕಃ ॥**

ನಾನು ಪೃಥಿವಿಯನ್ನು ಪ್ರವೇಶಿಸಿ ನನ್ನ (ಅಚಿಂತ್ಯ) ಪ್ರಭಾವದಿಂದ ಸಮಸ್ತ ಪ್ರಾಣಿಗಳನ್ನು ಧಾರಣಮಾಡುತ್ತಿರುವೆನು. ರಸಾತ್ಮಕವಾದ (ಅಮೃತವುಳ್ಳ) ಚಂದ್ರರೂಪದಿಂದ ಇದ್ದು ಸಮಸ್ತ ಓಷಧಿ (ವನಸ್ಪತಿ)ಗಳನ್ನು ಪೋಷಿಸುತ್ತಿರುವೆನು.

**ಅಹಂ ವೈಶ್ವಾನರೋ ಭೂತ್ವಾ, ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನ ಸಮಾಯುಕ್ತಃ, ಪಚಾಮ್ಯನ್ನಂ ಚತುರ್ವಿಧಮ್ ॥೧೪॥**

ನಾನು ಸಮಸ್ತ ಪ್ರಾಣಿಗಳ ದೇಹವನ್ನು ಆಶ್ರಯಿಸಿ ವೈಶ್ವಾನರರೂಪವಾದ ಜಠರಾಗ್ನಿ ಸ್ವರೂಪನಿಂದಿದ್ದು, ಪ್ರಾಣಾಪಾನಗಳಿಂದೊಡಗೂಡಿ ನಾಲ್ಕು ಬಗೆಯ ಅನ್ನವನ್ನು ಪಚನ (X) ಮಾಡುತ್ತಿರುವೆನು.

ಪ್ರಾಣಿಗಳು ಭುಂಜಿಸುವ ಎಲ್ಲಾ ಬಗೆಯ ಆಹಾರವನ್ನೂ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಎಂಬುದಾಗಿ ನಾಲ್ಕು ಮುಖ್ಯ ವಿಭಾಗಗಳಾಗಿ ವಿಭಾಗಿಸಬಹುದು.

1. ಭಕ್ಷ್ಯ—ಹಲ್ಲುಗಳಿಂದ ಅಗಿದು ತಿನ್ನುವ ಪೂರಿ, ಅನ್ನ ಮುಂತಾದುವುಗಳು.

---

(x) ಜೀರ್ಣವಾಗುವಂತೆ.

2. ಭೋಜ್ಯ—ಅಗಿಯದೇ ನಾಲಿಗೆಯಿಂದ ಗ್ರಹಿಸುವಂತಹ ವಸ್ತುಗಳು :– ಪಾಯಸ, ಹಾಲು ಇತ್ಯಾದಿ ದ್ರವ ಪದಾರ್ಥಗಳು.

3. ಲೇಹ್ಯ—ಜಿಹ್ವೆಯಲ್ಲಿ ಸೇರಿಕೊಂಡು ರಸದ ಸ್ವಾದಮಾತ್ರದಿಂದ ಒಳಗೆ ಗ್ರಹಿಸಲ್ಪಡುವ ವಸ್ತುಗಳು.

ಉದಾ :— ಜೆಲ್ಲಿ, ಆಮ್ರರಸ, ಜೇನುತುಪ್ಪ, ಚಟ್ನೀ ಇತ್ಯಾದಿಗಳು.

4. ಚೋಷ್ಯ—ದಂತಗಳ ನಿಷ್ಪೀಡನೆಯಿಂದ ರಸಾಂಶವನ್ನು ಒಳಗೆ ಎಳೆದುಕೊಂಡು ಉಳಿದ ಅಸಾರ ಅಂಶವನ್ನು ತ್ಯಜಿಸುವಂತಹವು. ಕಬ್ಬು, ರಸಯುಕ್ತವಾದ ಹಣ್ಣುಗಳು ಇತ್ಯಾದಿ.

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ, ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ । ವೇದೈಶ್ಚ ಸರ್ವೈರಹಮೇವ ವೇದ್ಯೋ, ವೇದಾಂತಕೃದ್ವೇದವಿದೇವ ಚಾಹಮ್ ॥೧೫॥**

ನಾನು ಸಮಸ್ತ ಪ್ರಾಣಿಗಳ ಹೃದಯದಲ್ಲಿ ವಾಸವಾಗಿರುತ್ತೇನೆ. ನನ್ನಿಂದಲೇ ಪ್ರಾಣಿಗಳಿಗೆ ಸ್ಮೃತಿಯೂ, ಅನುಭವಜ್ಞಾನವೂ, ಮತ್ತು ಮರವೆಯೂ ಉಂಟಾಗುತ್ತದೆ. ಸಮಸ್ತ ವೇದಗಳಿಂದ ತಿಳಿಯಲು ಯೋಗ್ಯನಾದವನೂ ನಾನೇ. ವೇದಾಂತಾರ್ಥಸಂಪ್ರದಾಯ ಪ್ರವರ್ತಕನೂ ನಾನೇ. ಅಲ್ಲದೆ ವೇದವನ್ನು ಸಮಗ್ರವಾಗಿ ತಿಳಿದವನೂ ಕೂಡ ನಾನೇ ಆಗಿರುವೆನು.

ಹಿಂದೆ ಅನುಭವಿಸಿದ ವಿಷಯದ ಸ್ಮರಣೆಯು "ಸ್ಮೃತಿ" ಎನಿಸುವುದು. ಇಂದ್ರಿಯಗಳ ಮೂಲಕ ಆಗುವ ವಸ್ತುಗಳ ಜ್ಞಾನವು ಬಾಹ್ಯಜ್ಞಾನವೆಂದೂ, ನಿರ್ವಿಷಯವಾದ ಆತ್ಮನ ಜ್ಞಾನವು ಅನುಭವ ಜ್ಞಾನವೆಂತಲೂ ಹೇಳಲ್ಪಡುವುದು. ಈ ಸ್ಮೃತಿ, ಜ್ಞಾನಗಳೆರಡರ ಮರವೆಯು ಅಪೋಹನವೆನಿಸುವುದು. ಪರಮೇಶ್ವರನು ಆದಿಯಲ್ಲಿ ಬ್ರಹ್ಮದೇವನನ್ನು ಸೃಷ್ಟಿಸಿ ಅವನಿಗೆ ವೇದಾರ್ಥವನ್ನು ಮೊಟ್ಟಮೊದಲು ಉಪದೇಶಿಸಿದನು. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈವೇದಾಂಶ್ಚಪ್ರಹಿಣೋತಿ ತಸ್ಮೈ"ಎಂದು ಶೃತಿಯೂ ತಿಳಿಸುತ್ತಿದೆ. ಬ್ರಹ್ಮನಿಂದ ಲೋಕದಲ್ಲಿ ವೇದಸಂಪ್ರದಾಯವು ಹರಡಿತು. ಆದುದರಿಂದ ವೇದಸಂಪ್ರದಾಯದ ಆದಿ ಪ್ರವರ್ತಕನೂ ಪರಮಾತ್ಮನೇ. ವೇದಾರ್ಥಗಳನ್ನುಚೆನ್ನಾಗಿ ತಿಳಿದವನೂ ಪರಮಾತ್ಮನ ವಿನಹ ಬೇರೆ ಯಾರೂ ಇರುವುದಿಲ್ಲ.

**ದ್ವಾವಿಮೌ ಪುರುಷೌ ಲೋಕೇ, ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ, ಕೂಟಸ್ಥೋಽಕ್ಷರ ಉಚ್ಯತೇ ॥೧೬॥**

ಈ ಲೋಕದಲ್ಲಿ ಕ್ಷರ ಮತ್ತು ಅಕ್ಷರ ರೆಂಬ ಇಬ್ಬರು ಪುರುಷರು ಇರುವರು. ಇಲ್ಲಿ ಕಾರ್ಯರೂಪವಾದ ಸಮಸ್ತ ಭೂತಗಳೂ ನಾಶವಾಗತಕ್ಕಂತಹವುಗಳಾದುದರಿಂದ ಕ್ಷರ ಪುರುಷನೆಂದು ಹೇಳಿದೆ. ಎಲ್ಲಕ್ಕೂ ಕಾರಣಭೂತವಾದ ಮೂಲಪ್ರಕೃತಿಯನ್ನು "ಅಕ್ಷರ ಪುರುಷ" ನೆಂದು ಹೇಳಲಾಗಿದೆ. ಇದಕ್ಕೆ ಕೂಟಸ್ಥವೆಂಬ ಹೆಸರೂ ಉಂಟು.

ಮಹತ್ತತ್ವಾದಿ ಕಾರ್ಯವರ್ಗಗಳಿಗೆ ಕಾರಣವಾದ ಮೂಲಪ್ರಕೃತಿಯನ್ನು ಅಕ್ಷರವೆಂದೂ, ಕಾರ್ಯೋಪಾಧಿಯುಳ್ಳ ಮತ್ತು ನಾಶವಾಗುವಂತಹ ಭೂತ ಸಮುದಾಯವನ್ನು ಕ್ಷರ ಪುರುಷನೆಂದೂ ಹೇಳಲಾಗಿದೆ.

**ಉತ್ತಮಃ ಪುರುಷಸ್ತ್ವನ್ಯಃ, ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ, ಬಿಭರ್ತ್ಯವ್ಯಯ ಈಶ್ವರಃ ॥೧೭॥**

ಯಾವ ಅವ್ಯಯನಾದ ಈಶ್ವರನು ಈ ಮೂರು ಲೋಕವನ್ನು ಪ್ರವೇಶಿಸಿ ಸಮಸ್ತ ಪ್ರಾಣಿಗಳನ್ನು ಧಾರಣೆಮಾಡುತ್ತಿರುವನೋ ಅವನೇ ಕ್ಷರಾಕ್ಷರಗಳಿಗಿಂತ ಭಿನ್ನನಾಗಿಯೂ, ಉತ್ತಮನಾಗಿಯೂ ಇರುವ ಪರಮಪುರುಷನು ಅಥವಾ ಪುರುಷೋತ್ತಮನು. ಇವನನ್ನೇ ಪರಮಾತ್ಮನೆಂದೂ ಪ್ರಾಜ್ಞರು ಹೇಳಿರುವರು.

**ಯಸ್ಮಾತ್ ಕ್ಷರಮತೀತೋಽಹ, ಮಕ್ಷರಾದಪಿ ಚೋತ್ತಮಃ**
**ಅತೋಽಸ್ಮಿ ಲೋಕೇ ವೇದೇ ಚ, ಪ್ರಥಿತಃ ಪುರುಷೋತ್ತಮಃ ॥೧೮॥**

ಪರಮೇಶ್ವರನಾದ ನಾನು ನಾಶವುಳ್ಳ ಭೂತಗಳಿಗಿಂತ ಅತೀತನಾಗಿಯೂ ಅಂದರೆ ಉತ್ಕೃಷ್ಟನಾಗಿಯೂ ಮತ್ತು ಅಕ್ಷರಕ್ಕಿಂತಲೂ ಅತ್ಯಂತ ಉತ್ತಮನಾಗಿಯೂ ಇರುವ ಕಾರಣ ಲೋಕದಲ್ಲಿಯೂ ಮತ್ತು ವೇದದಲ್ಲಿಯೂ ಪುರುಷೋತ್ತಮನೆಂಬುದಾಗಿ ಪ್ರಸಿದ್ಧನಾಗಿರುವೆನು.

ಪ್ರಕೃತಿಯ ಕಾರ್ಯವಾದ ಜಡವರ್ಗವೆಲ್ಲಾ ಕ್ಷರವು ಅಂದರೆ ವಿನಾಶವುಳ್ಳದ್ದು. ಸರ್ವಾಂತರ್ಯಾಮಿಯಾದ ಪರಮಾತ್ಮನು ಈ ಪ್ರಕೃತಿಯಲ್ಲಿ . ಅಭಿ

ಮಾನಿಸಿರುವ ಪ್ರಯುಕ್ತ ಕ್ಷರಕ್ಕಿಂತಲೂ ಶ್ರೇಷ್ಠನಾದ ಪುರುಷನೆನಿಸಿಕೊಂಡನು. ಪರಮಾತ್ಮನು ಗುಣಾತೀತನು. ಉಪಾಧಿರಹಿತನು ಮತ್ತು ಅಖಂಡನು, ಅಸಂಗನು. ಆದ್ದರಿಂದ ಪುರುಷನಿಗಿಂತ ಶ್ರೇಷ್ಠನು. ಪರಮಾತ್ಮನ ಚೇತನಾಂಶವೇ ಪುರುಷನಾದರೂ ಅವನು ಪ್ರಕೃತಿಸ್ಥನಾದುದರಿಂದ ನಿಕೃಷ್ಟನೆಂದೂ ಅಲ್ಪಜ್ಞನೆಂದೂ ಹೇಳಲ್ಪಟ್ಟನು. ಹೀಗೆ ಪುರುಷನಿಗಿಂತಲೂ ಅತಿ ಉತ್ತಮನಾದುದರಿಂದ ಪರಮಾತ್ಮನನ್ನು ವೇದಗಳು ಪುರುಷೋತ್ತಮನೆಂದು ಕೊಂಡಾಡುತ್ತಿವೆ.

**ಯೋ ಮಾಮೇವಮಸಮ್ಮೂಢೋ, ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ, ಸರ್ವಭಾವೇನ ಭಾರತ ॥೧೯॥**

ಎಲೈ ಅರ್ಜುನನೇ ! ಯಾವ ಪ್ರಾಜ್ಞನು ಈ ರೀತಿಯಾಗಿ ನನ್ನನ್ನು ಪುರುಷೋತ್ತಮನೆಂಬುದಾಗಿ ತಿಳಿಯುವನೋ ಅವನು ಸರ್ವವನ್ನೂ ತಿಳಿದವನಾಗುವನು. ಈ ಸರ್ವಜ್ಞ ಪುರುಷನೇ ಸರ್ವಾತ್ಮ ಭಾವದಿಂದ ಸದಾ ನನ್ನನ್ನೇ ಭಜಿಸುತ್ತಾನೆ.

**ಇತಿ ಗುಹ್ಯತಮಂ ಶಾಸ್ತ್ರ, ಮಿದಮುಕ್ತಂ ಮಯಾನಘ ।**
**ಏತದ್ಬುಧ್ವಾ ಬುದ್ಧಿಮಾನ್ ಸ್ಯಾತ್, ಕೃತಕೃತ್ಯಶ್ಚ ಭಾರತ ॥೨೦॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಪುರುಷೋತ್ತಮಯೋಗೋನಾಮ**
**ಪಂಚದಶೋಽಧ್ಯಾಯಃ**

ಎಲೈ ಪಾಪರಹಿತನೇ ! ಭಾರತನೇ ! ಈ ಪ್ರಕಾರವಾಗಿ ಅತ್ಯಂತ ರಹಸ್ಯವಾದ ಶಾಸ್ತ್ರವು ನನ್ನಿಂದ ಹೇಳಲ್ಪಟ್ಟಿತು. ಇದನ್ನು ಯಥಾರ್ಥವಾಗಿ ತಿಳಿದವನು ಜ್ಞಾನವುಳ್ಳವನಾಗುವನು ಮತ್ತು ಕೃತಕೃತ್ಯನೂ ಆಗುವನು.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಪುರುಷೋತ್ತಮ ಯೋಗನೆಂಬ
ಹದಿನೈದನೆಯ ಅಧ್ಯಾಯವು ಸಂಪೂರ್ಣವು.



# ಅಥ ದೈವಾಸುರ ಸಂಪದ್ವಿಭಾಗ ಯೋಗೋನಾಮ ಷೋಡಶೋಽಧ್ಯಾಯಃ

## ಶ್ರೀ ಭಗವಾನುವಾಚ

ಅಭಯಂ ಸತ್ತ್ವಸಂಶುದ್ಧಿ, ರ್ಜ್ಞಾನಯೋಗ ವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ, ಸ್ವಾಧ್ಯಾಯಸ್ತಪ ಆರ್ಜವಮ್ ॥೧॥
ಅಹಿಂಸಾ ಸತ್ಯಮಕ್ರೋಧ, ಸ್ತ್ಯಾಗಃ ಶಾಂತಿರಪೈಶುನಮ್ ।
ದಯಾ ಭೂತೇಷ್ವಲೋಲುಪ್ತ್ವಂ, ಮಾರ್ದವಂ ಹ್ರೀರಚಾಪಲಮ್ ॥
ತೇಜಃ ಕ್ಷಮಾ ಧೃತಿಃ ಶೌಚ, ಮದ್ರೋಹೋ ನಾತಿಮಾನಿತಾ ।
ಭವಂತಿ ಸಂಪದಂ ದೈವೀ, ಮಭಿಜಾತಸ್ಯ ಭಾರತ ॥೩॥

ಶ್ರೀಭಗವಂತನಿಂತೆಂದನು :– ಅಭಯ, ಅಂತಃಕರಣದ ಶುದ್ಧಿ, ಆತ್ಮಜ್ಞಾನವೂ ಮತ್ತು ಆತ್ಮನಿಷ್ಠೆಯಲ್ಲಿ ಸದಾ ತತ್ಪರತೆಯೂ, ಸತ್ಪಾತ್ರದಲ್ಲಿ ದಾನವೂ, ಇಂದ್ರಿಯ ನಿಗ್ರಹವೂ, ಯಜ್ಞವೂ, ವೇದಾಧ್ಯಾಯನವೂ, ತಪಸ್ಸು, ಸರಳತೆಯೂ, ಅಹಿಂಸೆ, ಯಥಾರ್ಥಭಾಷಣವೂ, ಕ್ರೋಧಮಾಡದಿರುವಿಕೆ, ತ್ಯಾಗಸ್ವಭಾವವೂ, ಶಾಂತಿಯೂ, ಅನ್ಯರ ದೋಷಗಳನ್ನು ಇತರರಿಗೆ ಪ್ರಕಟಪಡಿಸದಿರುವಿಕೆ, ಸಮಸ್ತ ಪ್ರಾಣಿಗಳಲ್ಲಿ ದಯೆಯೂ, ವಿಷಯಲಂಪಟತ್ವವಿಲ್ಲದಿರುವಿಕೆಯೂ, ಮೃದುಭಾವವೂ, ಲಜ್ಜೆಯೂ, ವ್ಯರ್ಥಕರ್ಮವನ್ನು ಮಾಡದಿರುವಿಕೆ, ತೇಜ, ಕ್ಷಮೆ, ಧೈರ್ಯ, ಬಾಹ್ಯಾಭ್ಯಂತರ ಶುದ್ಧಿ, ದ್ರೋಹತನವಿಲ್ಲದಿರುವಿಕೆ, ಮಾನ ಪೂಜ್ಯತೆ ಇವುಗಳಲ್ಲಿ ಅಪೇಕ್ಷೆಯಿಲ್ಲದಿರುವಿಕೆ— ಇವುಗಳೆಲ್ಲವೂ, ಹೇ ಅರ್ಜುನಾ ! ದೈವೀಸಂಪತ್ತಿನಿಂದ ಕೂಡಿದ ಮನುಷ್ಯನಲ್ಲಿರುವ ಗುಣಗಳು.

ಇಲ್ಲಿ ಮೊದಲನೆಯ ಶ್ಲೋಕದಲ್ಲಿ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳ ಅಸಾಧಾರಣ ಧರ್ಮಗಳನ್ನೂ, ಎರಡನೆಯದರಲ್ಲಿ ಬ್ರಾಹ್ಮಣವರ್ಗದವರ ಧರ್ಮವನ್ನೂತಿಳಿಸಿದ್ದಾರೆ. ಬಳಿಕ ತೇಜ ಕ್ಷಮಾ ಧೃತಿಗಳು ಕ್ಷತ್ರಿಯನ ಧರ್ಮವನ್ನೂ, ಶೌಚ ಅದ್ರೋಹಗಳೆರಡೂ ವೈಶ್ಯನ ಮತ್ತು ಮೂರು ವರ್ಣದವರ ಮುಂದೆ ನಮ್ರತೆ ಎಂಬ "ನಾತಿಮಾನಿತಾ" ಎಂಬುವುದರಿಂದ ಶೂದ್ರನ ಧರ್ಮವನ್ನೂ—ಹೀಗೆ ಸರ್ವ ವರ್ಣಾಶ್ರಮ ಧರ್ಮಗಳನ್ನೂ ಸೂಚಿಸಲಾಗಿದೆ.

ದಂಭೋ ದರ್ಪೋಽಭಿಮಾನಶ್ಚ, ಕ್ರೋಧಃ ಪಾರುಷ್ಯಮೇವ ಚ ।
ಅಜ್ಞಾನಂ ಚಾಭಿಜಾತಸ್ಯ, ಪಾರ್ಥ ಸಂಪದಮಾಸುರೀಮ್ ॥೪॥

ಎಲೈ ಪಾರ್ಥನೇ ತನ್ನ ಕಾರ್ಯವನ್ನು ಇತರರು ನೋಡಿ ಹೊಗಳಬೇಕೆಂಬ ಅಭಿಪ್ರಾಯದಿಂದ ಯಾವುದಾದರೂ ಕಾರ್ಯವನ್ನು ಆಚರಿಸುವುದು (ದಂಭ), ದರ್ಪ, ಅಭಿಮಾನ, ಕ್ರೋಧ, ಅಜ್ಞಾನ—ಇವೆಲ್ಲವೂ ಆಸುರೀ ಸಂಪತ್ತಿನಿಂದ ಕೂಡಿದವರ(ಲಕ್ಷಣ)ಗಳಾಗಿರುತ್ತವೆ.

ದೈವೀ ಸಂಪದ್ವಿಮೋಕ್ಷಾಯ, ನಿಬಂಧಾಯಾಸುರೀ ಮತಾ ।
ಮಾ ಶುಚಃ ಸಂಪದಂ ದೈವೀ, ಮಭಿಜಾತೋಽಸಿ ಪಾಂಡವ ॥೫॥

ಎಲೈ ಪಾಂಡವನೇ! ದೈವೀ ಸಂಪತ್ತು ಮೋಕ್ಷಕ್ಕಾಗಿಯೂ, ಆಸುರೀ ಸಂಪತ್ತು ಬಂಧಕ್ಕಾಗಿಯೂ ಇರುವುದೆಂದು ನನ್ನ ಮತವು. ನೀನು ದೈವೀ ಸಂಪತ್ತಿನ ಸಂಪಾದನೆಯಿಂದ ಹುಟ್ಟಿದ್ದೀಯೆ! ಆದ್ದರಿಂದ ನೀನು ಶೋಕಪಡಬೇಡ.

ದ್ವೌ ಭೂತಸರ್ಗೌ ಲೋಕೇಽಸ್ಮಿನ್, ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ, ಆಸುರಂ ಪಾರ್ಥ ಮೇ ಶೃಣು ॥೬॥

ಈ ಲೋಕದಲ್ಲಿ ಎರಡೇಬಗೆಯಾದ ಸೃಷ್ಟಿ ಇರುವುದು. ಒಂದು ದೈವಸರ್ಗ, ಮತ್ತೊಂದು ಆಸುರಸರ್ಗ. ಅದರಲ್ಲಿ ದೈವಸರ್ಗವನ್ನು ನಾನು ನಿನಗೆ ಮೊದಲು ವಿಸ್ತಾರವಾಗಿ ಹೇಳಿರುವೆನು.

ಈಗ ಆಸುರಸರ್ಗವನ್ನು ನೀನು ನನ್ನಿಂದ ಕೇಳು.

ಸರ್ಗವೆಂದರೆ ಸೃಷ್ಟಿ. ಭೂತಗಳ ಸೃಷ್ಟಿಗೆ ಭೂತಸರ್ಗವೆನ್ನುತ್ತಾರೆ. "ಅಸ್ಮಿನ್ ಲೋಕೇ" ಪದದಿಂದ ಈ ಮನುಷ್ಯಲೋಕವನ್ನು ಉದ್ದೇಶಿಸಿ ಹೇಳಿದ್ದಾರೆ. ಮನುಷ್ಯರ ಚಿತ್ತವೃತ್ತಿಯು (ಗುಣ, ಲಕ್ಷಣಗಳು) ಅನೇಕಬಗೆಯಾಗಿದ್ದರೂ ಮುಖ್ಯವಾಗಿ ಈ ಎರಡೇ ವಿಭಾಗಗಳಿರುತ್ತವೆ ಎಂಬುದನ್ನು "ಏವ" ಪದದಿಂದ ಸೂಚಿಸಿದ್ದಾರೆ.

ಪ್ರವೃತ್ತಿಂ ಚ ನಿವೃತ್ತಿಂ ಚ, ಜನಾ ನ ವಿದುರಾಸುರಾಃ ।
ನ ಶೌಚಂ ನಾಪಿ ಚಾಚಾರೋ, ನ ಸತ್ಯಂ ತೇಷು ವಿದ್ಯತೇ ॥೭॥

ಆಸುರ ಸ್ವಭಾವವುಳ್ಳ ಮನುಷ್ಯರು ಧರ್ಮದಲ್ಲಿ ಪ್ರವೃತ್ತಿಯನ್ನೂ, ಅಧರ್ಮದಲ್ಲಿ ನಿವೃತ್ತಿಯನ್ನೂ ಸಹ ತಿಳಿಯದವರಾಗಿ ಇರುತ್ತಾರೆ. ಇದ

ಲ್ಲದೆ ಆ ಜನಗಳಲ್ಲಿ ವಿಧಿಯುಕ್ತವಾದ ಶೌಚವಾಗಲೀ, ಸದಾಚಾರವಾಗಲೀ, ಸತ್ಯವಾಗಲೀ ಇರುವುದಿಲ್ಲ.

**ಅಸತ್ಯಮಪ್ರತಿಷ್ಠಂ ತೇ, ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ, ಕಿಮನ್ಯತ್ಕಾಮಹೈತುಕಮ್ ॥೮॥**

ಆಸುರ ಪ್ರಕೃತಿಯ ಜನರು ಜಗತ್ತನ್ನು ಅಸತ್ಯವೆಂತಲೂ, ಜಗತ್ತಿನ ವ್ಯವಸ್ಥೆಯಲ್ಲಿ ಧರ್ಮಾಧರ್ಮಗಳ ಪ್ರತಿಷ್ಠತೆಯು ಇಲ್ಲವೆಂತಲೂ, ಜಗತ್ತಿಗೆ ಕರ್ತೃವಾದ ಈಶ್ವರನೊಬ್ಬನು ಇಲ್ಲವೆಂತಲೂ, ಸ್ತ್ರೀ ಪುರುಷರ ಸಂಬಂಧದಿಂದಲೇ ಪ್ರಜೋತ್ಪತ್ತಿಯಾಗುವುದೆಂತಲೂ ( ಈಶ್ವರನಿಂದ ಅಲ್ಲವೆಂದಲೂ ), ಆದ್ದರಿಂದ ಈ ಪ್ರಪಂಚವು ಭೋಗಕ್ಕಾಗಿಯೇ ಇರುವುದಲ್ಲದೆ ಮತ್ತಾವುದಕ್ಕೂ ಇಲ್ಲವೆಂತಲೂ—ಈ ಪ್ರಕಾರವಾಗಿ ಹೇಳುವರು.

'ಅಸತ್ಯ ಅಪ್ರತಿಷ್ಠ' ಪದದಿಂದ ಶೂನ್ಯವಾದಿಗಳನ್ನೂ, "ಅನೀಶ್ವರಮ್" ಪದದಿಂದ ನಾಸ್ತಿಕರನ್ನೂ, "ಅಪರಸ್ಪರ ಸಂಭೂತಂ" ಪದದಿಂದ ಚಾರ್ವಾಕರನ್ನೂ, "ಕಿಮನ್ಯತ್‌ಕಾಮಹೈತುಕಂ" ಪದದಿಂದ ಯಥೇಚ್ಛಾಚರಣೆಯುಳ್ಳ ಪಾಮರ ಪುರುಷನನ್ನೂ ಉದ್ದೇಶಿಸಿ ಅವರ ಮುಖ್ಯ ಲಕ್ಷಣ ಮತ್ತು ಸಿದ್ಧಾಂತಗಳನ್ನು ತಿಳಿಸಿದ್ದಾರೆ.

**ಏತಾಂ ದೃಷ್ಟಿಮವಷ್ಟಭ್ಯ, ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ, ಕ್ಷಯಾಯ ಜಗತೋಽಹಿತಾಃ ॥೯॥**

ಪೂರ್ವೋಕ್ತ ಮಿಥ್ಯಾ ಜ್ಞಾನವನ್ನು ಆಶ್ರಯಿಸಿದವರಾಗಿ ಪರಲೋಕ ಸಾಧನವಾದ ಪುರುಷಾರ್ಥದಿಂದ ಹೀನರಾಗಿಯೂ (ನಷ್ಟಾತ್ಮ), ಅಲ್ಪಬುದ್ಧಿಯುಳ್ಳವರಾಗಿಯೂ, ಉಗ್ರಕರ್ಮಗಳನ್ನು ಮಾಡುವವರಾಗಿಯೂ ಇರುವ ಈ ಆಸುರೀಸಂಪದ್ಯುಕ್ತರಾದ ಜನಗಳು ಜಗತ್ತಿಗೆ ಹಿಂಸೆ ಕೊಡುವುದಕ್ಕಾಗಿಯೇ ಜಗತ್ತಿನ ಶತ್ರುಗಳಾಗಿ ಹುಟ್ಟುತ್ತಿರುವರು.

ಪುರುಷಾರ್ಥಕ್ಕಾಗಿ ಯತ್ನಮಾಡದಿರುವವರು 'ನಷ್ಟಾತ್ಮರು' ಸ್ರಕ್ಚಂದನ ವನಿತಾದಿ ವಿಷಯಭೋಗಗಳು 'ಅಲ್ಪ'ವೆನಿಸುವುವು. ಇಂಥಾ ಅಲ್ಪದಲ್ಲಿ ಭೋಗ್ಯಬುದ್ಧಿ ಇರುವವರು 'ಅಲ್ಪಬುದ್ಧಿ'ಗಳು ಅಥವಾ ಮಲ ಮಾಂಸ ರುಧಿರಾದಿ ನಿಂದಿತವಸ್ತುಗಳಿಂದ ಕೂಡಿರುವ ಈ ದೇಹವು 'ಅಲ್ಪ'ವೆನ್ನಲ್ಪಡುವುದು. ಇಂತಹ ಅಪವಿತ್ರದೇಹದಲ್ಲಿ ಆತ್ಮಬುದ್ಧಿಯುಳ್ಳವರು 'ಅಲ್ಪಬುದ್ಧಿ'

ಗಳು. ಉಗ್ರಕರ್ಮಾ—ಕ್ರೂರವಾದ ಕರ್ಮಗಳನ್ನುಮಾಡುವವರು. ಇವರು ಲೋಕಕಂಟಕರಾಗಿ ಜಗತ್ತನ್ನು ಪೀಡಿಸುವುದಕ್ಕಾಗಿಯೇ ಪುಟ್ಟುವರು.

**ಕಾಮಮಾಶ್ರಿತ್ಯ ದುಷ್ಪೂರಂ, ದಂಭಮಾನ ಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಽಸದ್ಗ್ರಾಹಾನ್, ಪ್ರವರ್ತಂತೇಽಶುಚಿವ್ರತಾಃ ॥**

ಇವರು ದಂಭ ಮಾನ ಮದದಿಂದ ಕೂಡಿದವರಾಗಿ, ಅಶುಚಿವ್ರತವುಳ್ಳವರಾಗಿ, ಯಾವಾಗಲೂ ನೆರವೇರದಿರುವ ಅಶಕ್ಯವಾದ ಕಾಮನೆಗಳನ್ನು ಆಶ್ರಯಿಸಿದವರಾಗಿ, ಅಜ್ಞಾನದಿಂದ ಮಿಥ್ಯಾ ಸಿದ್ಧಾಂತಗಳನ್ನು ಸ್ವೀಕರಿಸಿದವರಾಗಿ ವೇದವಿರುದ್ಧಗಳಾದ ಘೋರ ಕರ್ಮಗಳನ್ನು ಮಾಡುವುದರಲ್ಲಿ ತೊಡಗುವರು.

**ಚಿಂತಾಮಪರಿಮೇಯಾಂ ಚ, ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ, ಏತಾವದಿತಿ ನಿಶ್ಚಿತಾಃ ॥೧೧॥**
**ಆಶಾಪಾಶಶತೈರ್ಬದ್ಧಾಃ, ಕಾಮಕ್ರೋಧ ಪರಾಯಣಾಃ ।**
**ಈಹಂತೇ ಕಾಮಭೋಗಾರ್ಥ, ಮನ್ಯಾಯೇನಾರ್ಥಸಂಚಯಾನ್ ॥**

ಮರಣಪರ್ಯಂತ ಕೊನೆಗಾಣದಿರುವ ಅಪರಿಮಿತವಾದ ಚಿಂತೆಗಳನ್ನು ಆಶ್ರಯಿಸಿದವರಾಗಿ ವಿಷಯಭೋಗವೇ ಪರಮಪುರುಷಾರ್ಥವೆಂಬುದಾಗಿಯೂ, ವಿಷಯಸುಖವೇ ಪರಮಸುಖ, ಇದಕ್ಕಿಂತ ಶ್ರೇಷ್ಠವಾದ ಸುಖ ಬೇರೆ ಯಾವುದೂ ಇಲ್ಲವೆಂದು ನಿಶ್ಚಯಿಸಿದವರಾಗಿಯೂ, ನೂರಾರು ಆಶೆ ಎಂಬ ಪಾಶಗಳಿಂದ ಬಿಗಿಯಲ್ಪಟ್ಟವರಾಗಿಯೂ, ಮತ್ತು ಕಾಮಕ್ರೋಧ ಪರಾಯಣರಾಗಿಯೂ ಇರುವ ಈ ಆಸುರೀ ಪುರುಷರು ವಿಷಯಭೋಗಕ್ಕೋಸ್ಕರವೇ ಧನಾದಿ ಪದಾರ್ಥಗಳನ್ನು ಅಪೇಕ್ಷಿಸುವರು ಮತ್ತು ಅವುಗಳನ್ನು ಅನ್ಯಾಯವಾದ ರೀತಿಯಲ್ಲಿ ಸಂಗ್ರಹಿಸುವರು.

**ಇದಮದ್ಯಮಯಾಲಬ್ಧ, ಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ, ಭವಿಷ್ಯತಿ ಪುನರ್ಧನಮ್ ॥೧೩॥**

ಅವರು ಮನಸ್ಸಿನಲ್ಲಿ ಹೀಗೆ ಯೋಚಿಸುತ್ತಿರುತ್ತಾರೆ—ಈ ಭೋಗ್ಯವಸ್ತುವು ಈಗ ನನ್ನಿಂದ ಹೊಂದಲ್ಪಟ್ಟಿತು. ಈಗ ಈ ನನ್ನ ಮನೋರಥವನ್ನು ಶೀಘ್ರವೇ ಪಡೆಯುವವನಾಗುತ್ತೇನೆ. ಈಗ ನನ್ನಲ್ಲಿ ಇಷ್ಟು ಧನವಿದೆ, ಮುಂದೆ ನನಗೆ ಪುನಃ ಇನ್ನಷ್ಟು ಧನವೂ ಪ್ರಾಪ್ತಿಯಾಗುವುದು.

**ಅಸೌ ಮಯಾ ಹತಃ ಶತ್ರು, ರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ, ಸಿದ್ಧೋಽಹಂ ಬಲವಾನ್ಸುಖೀ ॥**

ಈ ಶತ್ರುವು ನನ್ನಿಂದ ಸತ್ತನು; ಉಳಿದಶತ್ರುಗಳನ್ನೂ ಕೊಂದುಹಾಕುವೆನು. ನಾನು ಸರ್ವಸಮರ್ಥನು, ಸಮಸ್ತ ಭೋಗಗಳನ್ನೂ ಅನುಭವಿಸುವವನು, ನಾನು ಸಿದ್ಧನು, ಆಪ್ತಮಿತ್ರಾದಿಗಳಿಂದ ಕೂಡಿದವನಾದುದರಿಂದ ಬಲಶಾಲಿಯಾಗಿಯೂ ಸುಖಿಯಾಗಿಯೂ ಇರುವೆನು.

**ಆಢ್ಯೋಽಭಿಜನವಾನಸ್ಮಿ, ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ, ಇತ್ಯಜ್ಞಾನವಿಮೋಹಿತಾಃ ॥೧೫॥**

ಇದಲ್ಲದೆ ನಾನು ದೊಡ್ಡ ಶ್ರೀಮಂತನು, ದೊಡ್ಡ ಕುಟುಂಬಿಯು. ನನಗೆ ಸಮಾನನು ಲೋಕದಲ್ಲಿ ಇನ್ನಾವನಿರುವನು ? ನಾನು (ಕೀರ್ತಿಗಾಗಿ) ಯಜ್ಞವನ್ನು ಮಾಡುತ್ತೇನೆ, ದಾನ ಕೊಡುತ್ತೇನೆ, ಯಥೇಚ್ಛವಾಗಿ ಆನಂದ ಪಡುತ್ತೇನೆ. ಈ ಪ್ರಕಾರವಾದ ಅನೇಕ ಮನೋಸಂಕಲ್ಪಗಳನ್ನು ಮಾಡುವಂತಹ ಈ ಅಸುರ ಗುಣವುಳ್ಳವರು ಅಜ್ಞಾನದಿಂದ ಮೋಹಿತರಾಗಿರುವರು.

**ಅನೇಕಚಿತ್ತವಿಭ್ರಾಂತಾ, ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು, ಪತಂತಿ ನರಕೇಽಶುಚೌ ॥೧೬॥**

ಇಂತಹ ಅನೇಕ ದುಷ್ಟ ಸಂಕಲ್ಪಗಳಿಂದ ವಿಭ್ರಾಂತರಾಗಿ, ಮೋಹಜಾಲದಿಂದ ಆವರಿಸಲ್ಪಟ್ಟು, ವಿಷಯಭೋಗಗಳಲ್ಲಿ ಅತ್ಯಂತ ಆಸಕ್ತರಾದ ಆಸುರ ಪುರುಷರು ಅತ್ಯಂತ ಅಪವಿತ್ರವಾದ ನರಕದಲ್ಲಿ ಬೀಳುವರು.

**ಆತ್ಮಸಂಭಾವಿತಾಃ ಸ್ತಬ್ಧಾ, ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ, ದಂಭೇನಾವಿಧಿಪೂರ್ವಕಮ್ ॥೧೭॥**

ಇವರು ತಮ್ಮನ್ನು ತಾವೇ ಶ್ರೇಷ್ಠರು, ಪೂಜ್ಯರೆಂದು ಹೊಗಳಿಕೊಳ್ಳುವವರಾಗಿರುತ್ತಾರೆ. ಮದೋನ್ಮತ್ತರಾದ ಇವರು ಪೂಜನೀಯರಾದ ಮಹಾಪುರುಷರೊಡನೆಯೂ ನಮ್ರಭಾವವಿಲ್ಲದವರಾಗಿ ವ್ಯವಹರಿಸುವರು. ಇವರು ಸದಾ ಧನಮದದಿಂದ ಮತ್ತು ಮಾನಮದದಿಂದ ಕೂಡಿದವರಾಗಿರುತ್ತಾರೆ. ಇವರು ನಾಮಮಾತ್ರದ ಯಜ್ಞಗಳನ್ನು ವಿಧಿಯನ್ನು ಬಿಟ್ಟು ದಂಭದಿಂದ ಮಾಡುವರು.

**ಅಹಂಕಾರಂ ಬಲಂ ದರ್ಪಂ, ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು, ಪ್ರದ್ವಿಷಂತೋಽಭ್ಯಸೂಯಕಾಃ ॥೧೮॥**

ಸುಗುಣಗಳಿರುವವರಲ್ಲಿಯೂ ದೋಷಾರೋಪಣೆ ಮಾಡುವವರಾಗಿಯೂ, ಅಹಂಕಾರ ಬಲ ದರ್ಪ.ಕಾಮ ಕ್ರೋಧ ಇವುಗಳನ್ನು ಆಶ್ರಯಿಸಿದವರಾಗಿಯೂ ಇರುವ ಇಂತಹ ಆಸುರ ಗುಣಗಳುಳ್ಳವರು ತನ್ನ ದೇಹದಲ್ಲಿಯೂ ಮತ್ತು ಇತರರದೇಹಗಳಲ್ಲಿಯೂ ಅಂತರ್ಯಾಮಿಯಾಗಿರುವ ನನ್ನನ್ನು ದ್ವೇಷಿಸುವವರಾಗಿದ್ದಾರೆ.

**ತಾನಹಂ ದ್ವಿಷತಃ ಕ್ರೂರಾನ್, ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾ, ನಾಸುರೀಷ್ವೇವ ಯೋನಿಷು ॥೧೯॥**

ಈ ರೀತಿಯಾಗಿ ಅತಿ ದುಷ್ಟರಾಗಿಯೂ, ನನ್ನನ್ನು ದ್ವೇಷಿಸುವವರಾಗಿಯೂ, ಕ್ರೂರರಾಗಿಯೂ, ನರರಲ್ಲಿ.ಅಧಮರಾಗಿಯೂ ಇರುವ ಈ ಅಸುರ ಭಾವದವರನ್ನು ನಾನು ಅಶುಭವಾದ ಆಸುರೀ ಯೋನಿಗಳಲ್ಲಿಯೇ ಯಾವಾಗಲೂ ಹುಟ್ಟಿಸುವೆನು.

**ಆಸುರೀಂ ಯೋನಿಮಾಪನ್ನಾ, ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ,ತತೋ ಯಾಂತ್ಯಧಮಾಂ ಗತಿಮ್ ॥**

ಎಲೈ ಕೌಂತೇಯನೇ ! ಈ ರೀತಿಯಾಗಿ ಜನ್ಮಜನ್ಮದಲ್ಲಿಯೂ ಆಸುರೀ ಯೋನಿಯನ್ನೇ ಹೊಂದಿದ ಆ ಮೂಢರು ನನ್ನನ್ನು ಪಡೆಯದೆ ಅಧೋಗತಿಯನ್ನು ಹೊಂದುವರು.

**ತ್ರಿವಿಧಂ ನರಕಸ್ಯೇದಂ, ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭ, ಸ್ತಸ್ಮಾದೇತತ್ತ್ರಯಂ ತ್ಯಜೇತ್॥೨೧॥**

ಕಾಮ, ಕ್ರೋಧ ಮತ್ತು ಲೋಭ—ಇವು ಮೂರೂ ನರಕದ ದ್ವಾರಗಳು. ಇವು ತನ್ನ ಆತ್ಮವನ್ನು ಅಧೋಗತಿಗೆ ಇಳಿಸುತ್ತದೆ. ಆದಕಾರಣ ವಿವೇಕಿಯು ಈ ಮೂರನ್ನೂ ತ್ಯಜಿಸತಕ್ಕದ್ದು.

**ಏತೈರ್ವಿಮುಕ್ತಃ ಕೌಂತೇಯ, ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯ, ಸ್ತತೋ ಯಾತಿ ಪರಾಂ ಗತಿಮ್ ॥೨೨॥**

ಎಲೈ ಕುಂತೀಪುತ್ರನೇ ! ಈ ಮೂರು ನರಕದ ದ್ವಾರಗಳಿಂದ ಬಿಡುಗಡೆಯನ್ನು ಹೊಂದಿರುವ ಮನುಷ್ಯನು ತದನಂತರ ತನ್ನ ಕಲ್ಯಾಣಕ್ಕಾಗಿ

ಶುದ್ಧಾಚರಣೆಯನ್ನು ಮಾಡುವನಾಗುತ್ತಾನೆ. ಸದಾಚಾರದಿಂದ ಚಿತ್ತ ಶುದ್ಧಿಯನ್ನು ಪಡೆದವನಾಗಿ ಪರಮ ಗತಿಯನ್ನು ಹೊಂದುತ್ತಾನೆ.

**ಯಃ ಶಾಸ್ತ್ರವಿಧಿಮುತ್ಸೃಜ್ಯ, ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ, ನ ಸುಖಂ ನ ಪರಾಂ ಗತಿಮ್ ॥೨೩॥**

ಯಾವನು ಶಾಸ್ತ್ರವಿಧಿಯನ್ನು ಬಿಟ್ಟು ತನ್ನ ಇಚ್ಛಾನುಸಾರವಾಗಿ ನಡೆಯುವನೋ ಅವನು ಜ್ಞಾನ ಸಿದ್ಧಿಯನ್ನು ಪಡೆಯುವುದಿಲ್ಲ. ಅಲ್ಲದೆ, ಸುಖವನ್ನೂ ಹೊಂದುವುದಿಲ್ಲ ಮತ್ತು ಪರಮಗತಿಯಾದ ಮೋಕ್ಷವನ್ನು ಹೊಂದುವುದಿಲ್ಲ.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ, ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾಶಾಸ್ತ್ರವಿಧಾನೋಕ್ತಂ, ಕರ್ಮ ಕರ್ತುಮಿಹಾರ್ಹಸಿ ॥೨೪॥**

**ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ದೈವಾಸುರ ಸಂಪದ್ವಿಭಾಗಯೋಗೋನಾಮ**
**ಷೋಡಶೋಽಧ್ಯಾಯಃ**

ಆದ ಕಾರಣ ಕಾರ್ಯಾಕಾರ್ಯಗಳನ್ನು ನಿರ್ಣಯಿಸುವುದರಲ್ಲಿ ನಿನಗೆ ಶಾಸ್ತ್ರವೇ ಪ್ರಬಲ ಪ್ರಮಾಣವಾಗಿದೆ. ಆದಕಾರಣ ನೀನು ಶಾಸ್ತ್ರವಿಧಿಯನ್ನು ಚೆನ್ನಾಗಿ ತಿಳಿದವನಾಗಿ ಶಾಸ್ತ್ರೋಕ್ತವಾದ ಕರ್ಮಗಳನ್ನು ನಿಷ್ಕಾಮದಿಂದ ಮಾಡಲು ಯೋಗ್ಯನಾಗಿರುತ್ತೀಯೆ.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ದೈವಾಸುರ ಸಂಪದ್ವಿಭಾಗಯೋಗವೆಂಬ
ಹದಿನಾರನೆಯ ಅಧ್ಯಾಯವು ಸಂಪೂರ್ಣವು.



# ಅಥ ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ

### ಅರ್ಜುನ ಉವಾಚ

**ಯೇ ಶಾಸ್ತ್ರವಿಧಿಮುತ್ಸೃಜ್ಯ, ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ, ಸತ್ತ್ವಮಾಹೋರಜಸ್ತಮಃ ॥೧॥**

ಅರ್ಜುನನಿಂತೆಂದನು :– ಹೇ ಶ್ರೀ ಕೃಷ್ಣಪರಮಾತ್ಮನೇ ! ಕೆಲವರು ಶಾಸ್ತ್ರವಿಧಿಯನ್ನು ಅರಿಯದವರಾಗಿರುವರು. ಆದರೆ ಪೂರ್ವಜನ್ಮದ ಉತ್ತಮ ಸಂಸ್ಕಾರದ ಫಲವಾಗಿ ಶ್ರದ್ಧೆಯಿಂದ ಕೂಡಿದವರಾಗಿ ಇಂದ್ರಾದಿ ದೇವತೆಗಳನ್ನು ಆರಾಧಿಸುತ್ತಿರುವರು. ಅವರ ನಿಷ್ಠೆಯು ಸಾತ್ವಿಕವೋ, ರಾಜಸವೋ ಅಥವಾ ತಾಮಸವೋ ?

### ಶ್ರೀ ಭಗವಾನುವಾಚ

**ತ್ರಿವಿಧಾ ಭವತಿ ಶ್ರದ್ಧಾ, ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ, ತಾಮಸೀ ಚೇತಿ ತಾಂ ಶೃಣು ॥೨॥**

ಶ್ರೀ ಭಗವಂತನಿಂತೆಂದನು :– ದೇಹಾಭಿಮಾನಿಗಳಾದ ಪುರುಷರಿಗೆ ಅವರವರ ಪೂರ್ವ ಸಂಸ್ಕಾರದಿಂದ ಹುಟ್ಟಿದ ಶ್ರದ್ಧೆಯು ಸಾತ್ವಿಕ, ರಾಜಸ ಮತ್ತು ತಾಮಸವೆಂದು ಮೂರು ವಿಧವಾಗಿರುವುದು. ಅದನ್ನು ನೀನು ಕೇಳು.

**ಸತ್ತ್ವಾನುರೂಪಾ ಸರ್ವಸ್ಯ, ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ,ಯೋಯಚ್ಛ್ರದ್ಧಃ ಸ ಏವ ಸಃ॥**

ಎಲೈ ಭಾರತನೇ ! ಎಲ್ಲರಿಗೂ ಅವರವರ ಅಂತಃಕರಣಾನುಸಾರವೇ ಶ್ರದ್ಧೆಯು ಉಂಟಾಗುವುದು. ಈ ಪುರುಷನು ಶ್ರದ್ಧಾಮಯನು. ಆದ್ದರಿಂದ ಯಾವನು ಎಂತಹ ಶ್ರದ್ಧೆಯುಳ್ಳವನೋ ಅವನು ಅದಕ್ಕೆ ತಕ್ಕಂತೆಯೇ ಇರುವನು.

**ಯಜಂತೇ ಸಾತ್ತ್ವಿಕಾ ದೇವಾನ್, ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ, ಯಜಂತೇ ತಾಮಸಾ ಜನಾಃ ॥೪॥**

ಸಾತ್ವಿಕರಾದವರು ಇಂದ್ರಾದಿ ದೇವತೆಗಳನ್ನೂ, ರಾಜಸರಾದವರು ಯಕ್ಷರಾಕ್ಷಸರನ್ನೂ ಮತ್ತು ತಾಮಸರಾದವರು ಭೂತ ಪ್ರೇತ ಪಿಶಾಚಾದಿಗಳನ್ನೂ ಪೂಜಿಸುವರು.

**ಅಶಾಸ್ತ್ರವಿಹಿತಂ ಘೋರಂ, ತಪ್ಯಂತೇ ಯೇ ತಪೋಜನಾಃ ।**
**ದಂಭಾಹಂಕಾರ ಸಂಯುಕ್ತಾಃ, ಕಾಮರಾಗಬಲಾನ್ವಿತಾಃ ॥೫॥**
**ಕರ್ಷಯಂತಃ ಶರೀರಸ್ಥಂ, ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಶ್ಶರೀರಸ್ಥಂ, ತಾನ್‌ವಿದ್ಧ್ಯಸುರನಿಶ್ಚಯಾನ್ ॥೬॥**

ಯಾರು ಶಾಸ್ತ್ರವಿಹಿತವಲ್ಲದ ಘೋರತಪವನ್ನು ಮಾಡುವರೋ, ದಂಭ ಅಹಂಕಾರ ಕಾಮರಾಗಗಳಿಂದ ಕೂಡಿದವರಾಗಿ ಶರೀರದಲ್ಲಿರುವ ಭೂತಸಮುದಾಯವನ್ನು ಕೃಶಪಡಿಸುವರೋ,ಮತ್ತು ದೇಹದೊಳಗಿರುವ ಅಂತರ್ಯಾಮಿಯಾದ ನನ್ನನ್ನೂ ಕೃಶಪಡಿಸುವರೋ ಅಂತಹವರನ್ನು ಆಸುರಬುದ್ಧಿಯುಳ್ಳವರೆಂಬುದಾಗಿ ತಿಳಿ.

**ಆಹಾರಸ್ತ್ವಪಿ ಸರ್ವಸ್ಯ, ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ, ತೇಷಾಂ ಭೇದಮಿಮಂ ಶೃಣು ॥೭॥**

ಸರ್ವ ಪ್ರಾಣಿಗಳಿಗೆ ಪ್ರಿಯವಾದ ಆಹಾರವೂ ಕೂಡ ಮೂರು ಪ್ರಕಾರವಾಗಿ ಆಗಿರುವುದು. ಇದರಂತೆಯೇ ಯಜ್ಞ, ತಪ, ದಾನ—ಇವೂ ಮೂರು ಪ್ರಕಾರವೇ ಆಗಿರುವುವು. ಅವುಗಳ ಭೇದಗಳನ್ನು ಹೇಳುವೆನು, ಕೇಳು.

**ಆಯುಸ್ಸತ್ತ್ವಬಲಾರೋಗ್ಯ, ಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ, ಆಹಾರಾಃ ಸಾತ್ವಿಕ ಪ್ರಿಯಾಃ ॥೮॥**

ಆಯುಸ್ಸು, ಸತ್ವ, ಬಲ, ಆರೋಗ್ಯ, ಸುಖ, ಪ್ರೀತಿ—ಇವುಗಳನ್ನು ಹೆಚ್ಚಿಸುವಂಥಾದ್ದಾಗಿಯೂ, ರಸಯುಕ್ತವಾಗಿಯೂ, ಜಿಡ್ಡುಳ್ಳದ್ದಾಗಿಯೂ, ರಸಾದಿ ಅಂಶದಿಂದ ಶರೀರದಲ್ಲಿ ಬಹುಕಾಲ ನಿಲ್ಲತಕ್ಕದ್ದಾಗಿಯೂ, ಮನೋಹರವಾಗಿಯೂ ಇರುವ ಆಹಾರವು ಸಾತ್ವಿಕರಿಗೆ ಪ್ರಿಯವಾಗಿರುವುವು.

ರೋಗಾದಿಗಳನ್ನು ಉಂಟುಮಾಡದೆ ಸುಖಪೂರ್ವಕವಾಗಿ ಜೀವನದ ಅವಧಿ ಪರ್ಯಂತ ಬದುಕುವುದಕ್ಕೆ "ಆಯುಷ್ಯ"ವೆಂದು ಹೆಸರು. ತುಪ್ಪವು

ಆಯುರ್ವರ್ಧಕವಾದುದರಿಂದ ವೈದ್ಯಶಾಸ್ತ್ರವು ಅದನ್ನು ಆಯುಸ್ಸು ಎಂತಲೇ ಕರೆದಿದೆ.

ಸತ್ವವೆಂದರೆ ಬುದ್ಧಿ. ಬುದ್ಧಿಯು ನಿರ್ಮಲವಾಗುವಿಕೆ, ಯಥಾರ್ಥವನ್ನು ಗ್ರಹಿಸುವ ಶಕ್ತಿ, ಮತ್ತು ಬುದ್ಧಿಯ ತೀಕ್ಷ್ಣತೆ, ಸೂಕ್ಷ್ಮತೆ ಮತ್ತು ಸ್ಫೂರ್ತಿ—ಇವು ಸತ್ವವೃದ್ಧಿಯಲಕ್ಷಣಗಳು.

ದುರ್ಗಂಧವಿಲ್ಲದ, ಕೇವಲ ದರ್ಶನಮಾಡಿದ ಮಾತ್ರಕ್ಕೇ ಹೃದಯಕ್ಕೆ ಸಂತೋಷವನ್ನುಂಟುಮಾಡುವ, ಸುವಾಸನೆಯುಳ್ಳ ಮನೋಹರವಾದ ಆಹಾರವು "ಹೃದ್ಯ"ವೆನಿಸುವುದು.

ಆಹಾರಕ್ಕೂ ಸತ್ವಾದಿಗುಣಗಳಿಗೂ ನಿಕಟಸಂಬಂಧವಿರುವುದು. ಒಬ್ಬರ ಗುಣಗಳನ್ನು ನೋಡಿ ಅವರ ಆಹಾರವನ್ನೂ, ಆಹಾರವನ್ನು ನೋಡಿ ಅವರ ಗುಣಗಳನ್ನೂ ನಾವು ಊಹಿಸಬಹುದು. ಯಾರ ಆಹಾರವು ಎಂತಹುದೋ ಅವರೂ ಅಂತಹವರೇ ಆಗಿರುತ್ತಾರೆ. ಹುಲ್ಲು ತಿನ್ನುವ ಹಸುವಿಗೂ ಪ್ರಾಣಿಗಳನ್ನು ಕೊಂದು ಮಾಂಸವನ್ನು ತಿನ್ನುವ ಹುಲಿ, ಸಿಂಹ, ತೋಳ, ಚಿರತೆಗಳ ಕ್ರೂರಸ್ವಭಾವಕ್ಕೂ ಎಷ್ಟು ವ್ಯತ್ಯಾಸವಿದೆ ಎಂಬುದನ್ನು ನಾವು ಯೋಚಿಸಬಹುದು. ಇದರಿಂದ ವಿವೇಕಿಗಳು ರಾಜಸ ತಾಮಸಾಹಾರಗಳನ್ನು ಪರಿತ್ಯಜಿಸಿ ಕೇವಲ ಸಾತ್ವಿಕಾಹಾರವನ್ನೇ ಸೇವಿಸುವುದು ಯೋಗ್ಯವಾಗಿರುತ್ತದೆ.

ಸಾತ್ವಿಕಾಹಾರ ಸಾತ್ವಿಕಗುಣಗಳುಳ್ಳವರಿಗೆ ಮಾತ್ರ ಪ್ರಿಯವಾಗಿರುತ್ತದೆ; ರಜೋಗುಣ ತಮೋಗುಣದವರಿಗೆ ಅಪ್ರಿಯವಾಗಿರುತ್ತದೆ. ಹೀಗೆಯೇ ರಾಜಸಿಕ ಮತ್ತು ತಾಮಸಿಕ ಆಹಾರ ರಜ ತಮಗುಣಗಳಿಗೆ ಪ್ರಿಯವಾಗಿಯೂ ಸತ್ವಗುಣದವರಿಗೆ ಅಪ್ರಿಯವಾಗಿಯೂ ಇರುತ್ತದೆ. ಹೀಗೆ ಯಾರಿಗೆ ಯಾವ ಆಹಾರವು ಪ್ರಿಯವೋ ಅವರು ಆ ಬಗೆಯ ಗುಣದವರೆಂದು ಇದರಿಂದ ತಿಳಿಯಬಹುದು.

**ಕಟ್ವಮ್ಲಲವಣಾತ್ಯುಷ್ಣ, ತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ, ದುಃಖಶೋಕಾಮಯಪ್ರದಾಃ ॥೯॥**

ಅತಿ ಕಹಿ, ಅತಿ ಉಪ್ಪು, ಅತಿ ಹುಳಿ, ಅತಿ ಉಷ್ಣ, ಅತಿ ತೀಕ್ಷ್ಣವಾದ ಆಹಾರ ಪದಾರ್ಥಗಳೂ ಮತ್ತು ಶುಷ್ಕವಾದುದಾಗಿಯೂ (ಒಣಗಿದ, ನೀರಸ

ವಾದ), ದಾಹಕರವಾದುದಾಗಿಯೂ, ಪರಿಣಾಮದಲ್ಲಿ ದುಃಖ, ಶೋಕ ಮತ್ತು ರೋಗಗಳನ್ನೂ ಉಂಟುಮಾಡುವ ಆಹಾರಗಳು ರಜೋಗುಣ ಪ್ರಧಾನರಾದವರಿಗೆ ಪ್ರಿಯವಾಗಿರುತ್ತವೆ.

**ಯಾತಯಾಮಂ ಗತರಸಂ, ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ, ಭೋಜನಂ ತಾಮಸಪ್ರಿಯಮ್ ॥೧೦॥**

ಯಾವ ಆಹಾರವು ಅರ್ಧಪಕ್ವವಾಗಿಯೂ, ರಸವಿಲ್ಲದ್ದಾಗಿಯೂ, ದುರ್ಗಂಧಯುಕ್ತವಾಗಿಯೂ, ಮಾಡಿದ ಮೇಲೆ ಒಂದು ರಾತ್ರಿಕಳೆದ ತಂಗಳು ಪದಾರ್ಥವಾಗಿಯೂ, ಉಚ್ಛಿಷ್ಟ (ಎಂಜಲು)ವಾದುದೂ, ಅಪವಿತ್ರವಾಗಿಯೂ ಇರುವವೋ ಅವು ತಮೋಗುಣ ಪ್ರಧಾನರಾದವರಿಗೆ ಪ್ರಿಯವಾಗಿರುತ್ತವೆ.

**ಅಫಲಾಕಾಂಕ್ಷಿಭಿರ್ಯಜ್ಞೋ, ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ, ಸಮಾಧಾಯ ಸ ಸಾತ್ವಿಕಃ ॥೧೧॥**

ಯಾವ ಯಜ್ಞವು ಶಾಸ್ತ್ರೋಕ್ತ ವಿಧಿಯನ್ನು ಅನುಸರಿಸಿರುವುದಾಗಿಯೂ, ಫಲಾಪೇಕ್ಷೆಯಿಲ್ಲದೆ ವೇದಸಮ್ಮತವಾದ ಈ ಯಜ್ಞಾನುಷ್ಠಾನವು ತನ್ನ ಆತ್ಮ ಕಲ್ಯಾಣಕ್ಕಾಗಿ ಅವಶ್ಯಕವೆಂದೂ ಕರ್ತವ್ಯವೆಂದೂ ನಿಶ್ಚಯಿಸಿ, ಮನಸ್ಸಮಾಧಾನಪೂರ್ವಕವಾಗಿ, ಕರ್ತವ್ಯಬುದ್ಧಿಯಿಂದ ಮಾಡಲ್ಪಡುವುದೋ ಆ ಯಜ್ಞವು ಸಾತ್ವಿಕವೆನಿಸುವುದು.

**ಅಭಿಸಂಧಾಯ ತು ಫಲಂ, ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ, ತಂ ಯಜ್ಞಂ ವಿದ್ಧಿ ರಾಜಸಮ್ ॥೧೨॥**

ಎಲೈ ಭರತಶ್ರೇಷ್ಠನೇ ! ಫಲಾಪೇಕ್ಷೆಯಿಂದಲೂ ದಂಭಾಚಾರದಿಂದಲೂ ಮಾಡಲ್ಪಡುವ ಯಜ್ಞವನ್ನು ರಾಜಸಯಜ್ಞವೆಂದು ತಿಳಿಯುವನಾಗು.

**ವಿಧಿಹೀನಮಸೃಷ್ಟಾನ್ನಂ, ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ, ತಾಮಸಂ ಪರಿಚಕ್ಷತೇ ॥೧೩॥**

ಯಾವ ಯಜ್ಞವು ಶಾಸ್ತ್ರವಿಧಿಗನುಸಾರವಾಗಿ ಮಾಡಲ್ಪಡುವುದಿಲ್ಲವೋ ಮತ್ತು ಅನ್ನದಾನವಿಲ್ಲದೆ, ಮಂತ್ರೋಚ್ಚಾರಣೆಯಿಲ್ಲದೆ, ಯಥೋಕ್ತ ದಕ್ಷಿಣೆಯಿಲ್ಲದೆ ಮತ್ತು ಶ್ರದ್ಧೆಯೂ ಇಲ್ಲದೆ ಮಾಡಲ್ಪಡುವುದೋ, ಅದನ್ನು ತಾಮಸ ಯಜ್ಞವೆಂದು ತಿಳಿದವರು ಹೇಳುತ್ತಾರೆ.

**ದೇವದ್ವಿಜಗುರುಪ್ರಾಜ್ಞ, ಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ, ಶಾರೀರಂ ತಪ ಉಚ್ಯತೇ ॥೧೪॥**

ದೇವತೆಗಳ, ಬ್ರಾಹ್ಮಣರ, ಗುರುಗಳ ಮತ್ತು ಜ್ಞಾನಿಗಳ ಪೂಜೆಯೂ, ದೇಹಶುದ್ಧಿ ಮತ್ತು ಅಂತಃಕರಣ ಶುದ್ಧಿ ಎಂಬ ಎರಡು ಬಗೆಯ ಶೌಚವೂ, ಸರಳತೆಯೂ, ಬ್ರಹ್ಮಚರ್ಯೆಯೂ ಮತ್ತು ಅಹಿಂಸೆಯೂ—ಇವುಗಳೆಲ್ಲವೂ ಶರೀರದಿಂದ ಮಾಡಲ್ಪಡುವ ತಪಸ್ಸೆಂದು ಹೇಳಲಾಗಿದೆ.

**ಅನುದ್ವೇಗಕರಂ ವಾಕ್ಯಂ, ಸತ್ಯಂ ಪ್ರಿಯ ಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ, ವಾಙ್ಮಯಂ ತಪ ಉಚ್ಯತೇ ॥೧೫॥**

ಯಾರಮನಸ್ಸಿಗೂ ದುಃಖವುಂಟುಮಾಡದ ಮತ್ತು ಸತ್ಯವೂ ಪ್ರಿಯವೂ ಪರಿಣಾಮದಲ್ಲಿ ಹಿತವನ್ನುಂಟುಮಾಡುವುದಾಗಿಯೂ ಇರುವ ಭಾಷಣವೂ ಮತ್ತು ವೇದಶಾಸ್ತ್ರಾದಿಗಳ ಅಧ್ಯಯನವೂ ಸಹ ವಾಣಿಯ ತಪಸ್ಸೆಂದು ಹೇಳಲ್ಪಟ್ಟಿದೆ.

**ಮನಃಪ್ರಸಾದಃ ಸೌಮ್ಯತ್ವಂ, ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತ, ತ್ತಪೋ ಮಾನಸಮುಚ್ಯತೇ ॥೧೬॥**

ಮನಸ್ಸಿನ ಪ್ರಸನ್ನತೆಯು, ಸೌಮ್ಯತೆಯೂ, ಮೌನವೂ, ಮನೋನಿಗ್ರಹವೂ, ಭಾವಶುದ್ಧಿಯೂ—ಇವು ಮನೋವ್ಯಾಪಾರದಿಂದಾಗುವ ತಪಸ್ಸಾದುದರಿಂದ ಮಾನಸ ತಪವೆಂದು ಹೇಳಿರುವುದು.

ಮನಸ್ಸು ವಿಷಯಚಿಂತನೆಗಳಿಂದಾಗುವ ಶೋಕ ಮೋಹ ವಿಷಾದ ಸಂತಾಪ ಮುಂತಾದ ವ್ಯಾಕುಲಗಳಿಲ್ಲದೆ ವಿಶುದ್ಧವಾಗಿಯೂ, ಪ್ರಸನ್ನವಾಗಿಯೂ, ಪ್ರಫುಲ್ಲಿತವಾಗಿಯೂ, ಹರ್ಷಯುಕ್ತವಾಗಿಯೂ ಮತ್ತು ಬೋಧ ಶಕ್ತಿಯಿಂದ ಕೂಡಿದ ಮನಸ್ಸಿನ ಸ್ವಸ್ಥತೆಯಿಂದ ಕೂಡಿರುವ ಯಾವ ಮನಸ್ಸುಂಟೋ ಅದಕ್ಕೆ ಮನಃ ಪ್ರಸಾದವೆಂತಲೂ, ಪ್ರಸನ್ನ ಮನವೆಂತಲೂ ಹೆಸರು.

ಕಠೋರತನ, ಹಿಂಸಾದಿ ದೋಷಗಳಿಲ್ಲದ ಮತ್ತು ಎಲ್ಲರ ಹಿತವನ್ನು ಕೋರುವ ಕೋಮಲ ಸ್ವಭಾವದ ಮನಸ್ಸಿಗೆ ಸುಮನಸ್ಸು ಅಥವಾ 'ಸೌಮ್ಯ ಮನಸ್ಸು ಎಂದು ಹೆಸರು.

ವಾಗಿಂದ್ರಿಯದ ಸಂಯಮಪೂರ್ವಕ ಆತ್ಮಚಿಂತನೆಯಲ್ಲಿ ತತ್ಪರವಾಗಿರುವಿಕೆ—ಮೌನವೆನಿಸುವುದು.

ಅಂತಃಕರಣದಲ್ಲಿ ಕಾಮ—ಕ್ರೋಧ, ರಾಗ—ದ್ವೇಷಾದಿಗಳು ಸರ್ವಥಾ ನಷ್ಟವಾಗಿ ಇವುಗಳಿಗೆ ವಿರೋಧಿಯಾದ ದಯಾ ಕ್ಷಮೆ ಪ್ರೇಮ ವಿನಯಾದಿ ಸುಗುಣಗಳು ವಿಕಸಿತವಾಗಿರಲು ಅದಕ್ಕೆ "ಭಾವಸಂಶುದ್ಧಿ" ಎಂದು ಹೆಸರು.

**ಶ್ರದ್ಧಯಾ ಪರಯಾ ತಪ್ತಂ, ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ, ಸಾತ್ತ್ವಿಕಂ ಪರಿಚಕ್ಷತೇ ॥೧೭॥**

ಈ ಮೂರು ವಿಧವಾದ ತಪಸ್ಸುಗಳು ಅತ್ಯಂತ ಶ್ರದ್ಧೆಯಿಂದ ಫಲಾಪೇಕ್ಷೆ ಇಲ್ಲದೆ ಯಾವ ಯೋಗಿಗಳಿಂದ ಮಾಡಲ್ಪಡುವುದೋ ಅವು ಸಾತ್ವಿಕ ತಪವೆಂದು ಶಿಷ್ಟಪುರುಷರು ಹೇಳುವರು.

**ಸತ್ಕಾರಮಾನಪೂಜಾರ್ಥಂ, ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ, ರಾಜಸಂ ಚಲಮಧ್ರುವಮ್ ॥೧೮॥**

ಸತ್ಕಾರ ಮಾನ ಪೂಜ್ಯತೆ—ಇವುಗಳಿಗಾಗಿ ದಂಭದಿಂದ ಮಾಡುವ ತಪವು ಅನಿತ್ಯ ಫಲವನ್ನು ಕೊಡುವುದಾಗಿಯೂ ಮತ್ತು ಅನಿಶ್ಚಿತ ಫಲವುಳ್ಳದ್ದಾಗಿಯೂ ಇರುವುದರಿಂದ ರಾಜಸವೆಂಬುದಾಗಿ ಹೇಳಲ್ಪಟ್ಟಿರುವುದು.

**ಮೂಢಗ್ರಾಹೇಣಾತ್ಮನೋಯತ್, ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ, ತತ್ತಾಮಸಮುದಾಹೃತಮ್ ॥೧೯॥**

ಯಾವ ತಪವು ದುರಾಗ್ರಹದಿಂದಲೂ, ಶರೀರಪೀಡೆಯಿಂದಲೂ ಮಾಡಲ್ಪಡುವುದೋ ಅಥವಾ ಪರರ ನಾಶಕ್ಕೋಸ್ಕರವಾಗಿಯೇ ಮಾಡಲ್ಪಡುವುದೋ ಅದು ತಾಮಸವೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿರುವುದು.

**ದಾತವ್ಯಮಿತಿ ಯದ್ದಾನಂ, ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ, ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥೨೦॥**

ಕರ್ತವ್ಯಬುದ್ಧಿಯಿಂದ ಪ್ರತ್ಯುಪಕಾರಮಾಡದಿರುವವನಿಗೆ ಗಂಗಾದಿ ಪುಣ್ಯಕ್ಷೇತ್ರದಲ್ಲಿ ಸಂಕ್ರಮಣಾದಿ ಪರ್ವಕಾಲದಲ್ಲಿ ಸತ್ಪಾತ್ರನಿಗೆ ಕೊಡಲ್ಪಡುವ ದಾನವು ಸಾತ್ವಿಕವು.

**ಯತ್ತು ಪ್ರತ್ಯುಪಕಾರಾರ್ಥಂ, ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ, ತದ್ದಾನಂ ರಾಜಸಂ ಸ್ಮೃತಮ್ ॥೨೧॥**

ದಾನತೆಗೆದುಕೊಳ್ಳುವವರಿಂದ ಪ್ರತಿ ಉಪಕಾರ ಪಡೆಯುವ ಉದ್ದೇಶ ದಿಂದಲೂ, ಫಲಾಪೇಕ್ಷೆಯ ದೃಷ್ಟಿಯಿಂದಲೂ, ದುಃಖಪಟ್ಟುಕೊಂಡು ಕೊಡುವ ಅಥವಾ ಕೊಟ್ಟಮೇಲೆ ದುಃಖಪಡುವ—ಈ ರೀತಿಯಾಗಿ ಮಾಡಲ್ಪಡುವ ದಾನವು ರಾಜಸ ದಾನವೆನಿಸುವುದು.

**ಅದೇಶಕಾಲೇ ಯದ್ದಾನ, ಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ, ತತ್ತಾಮಸಮುದಾಹೃತಮ್ ॥೨೨॥**

ಅಶುಚಿದೇಶದಲ್ಲಿ, ಅಕಾಲದಲ್ಲಿ, ತಿರಸ್ಕಾರಪೂರ್ವಕವಾಗಿ ಸತ್ಕಾರವಿಲ್ಲದೆ ಕುಪಾತ್ರದಲ್ಲಿ ಮಾಡುವ ದಾನವು ತಾಮಸವು.

**ಓಂ ತತ್ಸದಿತಿ ನಿರ್ದೇಶೋ, ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ, ಯಜ್ಞಾಶ್ಚ ವಿಹಿತಾಃ ಪುರಾ ॥೨೩॥**

"ಓಂ ತತ್ಸತ್" ಎಂಬ ಮೂರು ಅಂಗಗಳುಳ್ಳ ಪರಬ್ರಹ್ಮದ ನಾಮವು ಋಷಿಗಳಿಂದ ಸ್ಮರಿಸಲ್ಪಟ್ಟಿರುವುದು. ಈ ನಾಮದಿಂದಲೇ ಸೃಷ್ಟಿಯ ಆದಿಯಲ್ಲಿ ಚತುರ್ಮುಖಬ್ರಹ್ಮನು ಬ್ರಾಹ್ಮಣರನ್ನೂ, ವೇದಗಳನ್ನೂ, ಯಜ್ಞಗಳನ್ನೂ ಸೃಷ್ಟಿಸಿರುವನು.

**ತಸ್ಮಾದೋಮಿತ್ಯುದಾಹೃತ್ಯ, ಯಜ್ಞದಾನ ತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ, ಸತತಂ ಬ್ರಹ್ಮವಾದಿನಾಮ್ ॥೨೪॥**

ಆದಕಾರಣ ವೇದಾಧ್ಯಯನ ಸಂಪನ್ನರಾದವರ ಯಜ್ಞ ದಾನ ತಪಸ್ಸು ಮುಂತಾದ ವೇದವಿಹಿತ ಕರ್ಮಗಳು ಸರ್ವದಾ ಓಂಕಾರ ಉಚ್ಚಾರಣ ಪೂರ್ವಕವಾಗಿಯೇ ಪ್ರಾರಂಭಿಸಲ್ಪಡುವುವು.

**ತದಿತ್ಯನಭಿಸಂಧಾಯ, ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ, ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥೨೫॥**

ಮೋಕ್ಷಾಪೇಕ್ಷೆಯುಳ್ಳವರಿಂದ "ತತ್" ಶಬ್ದದ ಉಚ್ಚಾರಣ ಪೂರ್ವಕವಾಗಿ ಫಲಾಪೇಕ್ಷೆಯಿಲ್ಲದಂತೆ ನಾನಾ ವಿಧವಾದ ಯಜ್ಞ ದಾನ ತಪಃಕ್ರಿಯಾದಿಗಳು ಆಚರಿಸಲ್ಪಡುವುವು.

**ಸದ್ಭಾವೇ ಸಾಧುಭಾವೇಚ, ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ, ಸಚ್ಛಬ್ದಃ ಪಾರ್ಥ ಯುಜ್ಯತೇ ॥೨೬॥**

ಎಲೈ ಪಾರ್ಥನೇ ! ಸದ್ಭಾವದಲ್ಲಿಯೂ, ಸಾಧುಭಾವದಲ್ಲಿಯೂ, ಹಾಗೆಯೇ ಪ್ರಶಸ್ತವಾದ ಕರ್ಮದಲ್ಲಿಯೂ "ಸತ್" ಶಬ್ದವನ್ನು ಉಚ್ಚರಿಸುವರು.

ಯಜ್ಞೇ ತಪಸಿ ದಾನೇ ಚ, ಸ್ಥಿತಿಃ ಸದಿತಿ ಚೋಚ್ಯತೇ ।
ಕರ್ಮ ಚೈವ ತದರ್ಥೀಯಂ, ಸದಿತ್ಯೇವಾಭಿಧೀಯತೇ ॥೨೭॥

ಯಜ್ಞದಲ್ಲಿಯೂ ತಪಸದಲ್ಲಿಯೂ ದಾನದಲ್ಲಿಯೂ ಇರುವ ಸ್ಥಿತಿಯೂ "ಸತ್" ಎಂದು ಹೇಳಲ್ಪಡುವುದು. ಮತ್ತು ತದರ್ಥೀಯ ಕರ್ಮವೂ ಕೂಡ "ಸತ್" ಎಂತಲೇ ಹೇಳಲ್ಪಡುವುದು.

ಯಜ್ಞ ತಪ ದಾನಾದಿ ಸತ್ಕರ್ಮಗಳಲ್ಲಿ ಸ್ಥಿತಿ ಎಂದರೆ ತತ್ಪರತೆ ಎಂಬ ನಿಷ್ಠೆಗೆ 'ಸತ್' ಎಂದು ಹೆಸರು.

ಭಗವದರ್ಪಣ ಬುದ್ಧಿಯಿಂದ ಮಾಡಲ್ಪಡುವ ಕರ್ಮಕ್ಕೆ ಅಥವಾ ಪರಮೇಶ್ವರನನ್ನು ಹೊಂದುವುದಕ್ಕಾಗಿ ಮಾಡಲ್ಪಡುವ ಕರ್ಮಕ್ಕೆ 'ತದರ್ಥೀಯಕರ್ಮ'ವೆಂದು ಹೆಸರು.

ಅಶ್ರದ್ಧಯಾ ಹುತಂ ದತ್ತಂ, ತಪಸ್ತಪ್ತಂ ಕೃತಂ ಚ ಯತ್।
ಅಸದಿತ್ಯುಚ್ಯತೇ ಪಾರ್ಥ, ನ ಚ ತತ್ಪ್ರೇತ್ಯ ನೋ ಇಹ ॥೨೮॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನಸಂವಾದೇ
ಶ್ರದ್ಧಾತ್ರಯ ವಿಭಾಗಯೋಗೋನಾಮ
ಸಪ್ತದಶೋಽಧ್ಯಾಯಃ

ಎಲೈ ಪಾರ್ಥನೇ ! ಅಶ್ರದ್ಧೆಯಿಂದ ಮಾಡಲ್ಪಡುವ ಹವನವೂ, ದಾನವೂ, ತಪಸ್ಸೂ ಇವುಗಳೆಲ್ಲವೂ "ಅಸತ್" ಎಂಬುದಾಗಿ ಹೇಳಲ್ಪಟ್ಟಿರುವುದು. ಅದು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸತ್ಫಲವನ್ನು ಕೊಡುವುದಿಲ್ಲ.

ಇಂತು ಶ್ರೀಮದ್ಭಗವದ್ಗೀತೆಯಲ್ಲಿ ಶ್ರದ್ಧಾತ್ರಯವಿಭಾಗಯೋಗವೆಂಬ
ಹದಿನೇಳನೆಯ ಅಧ್ಯಾಯ ಸಂಪೂರ್ಣವು.



# ಅಥ ಮೋಕ್ಷಸಂನ್ಯಾಸಯೋಗೋನಾಮ ಅಷ್ಟಾದಶೋಽಧ್ಯಾಯಃ

## ಅರ್ಜುನ ಉವಾಚ

ಸಂನ್ಯಾಸಸ್ಯ ಮಹಾಬಾಹೋ, ತತ್ತ್ವಮಿಚ್ಛಾಮಿ ವೇದಿತುಮ್ ।
ತ್ಯಾಗಸ್ಯ ಚ ಹೃಷೀಕೇಶ, ಪೃಥಕ್ಕೇಶಿನಿಷೂದನ ॥೧॥

ಅರ್ಜುನನಿಂತೆಂದನು—ಎಲೈ ಮಹಾಬಾಹುವೇ ! ಹೃಷೀಕೇಶನೇ ! ಕೇಶಿನಿಷೂದನನೇ ! ಸಂನ್ಯಾಸ ಮತ್ತು ತ್ಯಾಗದ ಸ್ವರೂಪವನ್ನು ನಾನು ಬೇರೆ ಬೇರೆಯಾಗಿ ತಿಳಿಯಲು ಇಚ್ಛಿಸುತ್ತೇನೆ. (ಅದನ್ನು ಕೃಪೆಮಾಡಿಹೇಳು)

## ಶ್ರೀ ಭಗವಾನುವಾಚ

ಕಾಮ್ಯಾನಾಂ ಕರ್ಮಣಾಂ ನ್ಯಾಸಂ, ಸಂನ್ಯಾಸಂ ಕವಯೋ ವಿದುಃ ।
ಸರ್ವಕರ್ಮಫಲತ್ಯಾಗಂ, ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥

ಶ್ರೀ ಭಗವಂತನಿಂತೆಂದನು :— ಕಾಮ್ಯ ಕರ್ಮಗಳ ತ್ಯಾಗವನ್ನು ಸಂನ್ಯಾಸವೆಂದು ವಿದ್ವಾಂಸರು ಹೇಳುವರು. ಸರ್ವ ಕರ್ಮಗಳ ಫಲತ್ಯಾಗವನ್ನು ತ್ಯಾಗವೆಂಬುದಾಗಿ ಮತ್ತೆ ಕೆಲವು ಪಂಡಿತರು ಹೇಳುವರು.

ತ್ಯಾಜ್ಯಂ ದೋಷವದಿತ್ಯೇಕೇ, ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃಕರ್ಮ, ನ ತ್ಯಾಜ್ಯಮಿತಿ ಚಾಪರೇ ॥೩॥

ಸರ್ವಕರ್ಮಗಳೂ ದೋಷಯುಕ್ತವಾದುದರಿಂದ ತ್ಯಜಿಸಲು ಯೋಗ್ಯವೆಂದು ಕೆಲವು ವಿದ್ವಾಂಸರು ಹೇಳುವರು. ಮತ್ತೆ ಕೆಲವರು ಯಜ್ಞ, ದಾನ, ತಪಸ್ಸು ಮುಂತಾದ ಸತ್ಕರ್ಮಗಳನ್ನು ಪರಿತ್ಯಜಿಸಬಾರದೆಂದು ಹೇಳುವರು.

ನಿಶ್ಚಯಂ ಶೃಣು ಮೇ ತತ್ರ, ತ್ಯಾಗೇ ಭರತಸತ್ತಮ ।
ತ್ಯಾಗೋ ಹಿ ಪುರುಷವ್ಯಾಘ್ರ, ತ್ರಿವಿಧಃ ಸಂಪ್ರಕೀರ್ತಿತಃ ॥೪॥

ಎಲೈ ಭರತವಂಶದಲ್ಲಿ ಶ್ರೇಷ್ಠನಾದ ಅರ್ಜುನನೇ ! ಪುರುಷಶ್ರೇಷ್ಠನೇ! ತ್ಯಾಗದ ವಿಷಯದಲ್ಲಿ ನಿಶ್ಚಯವಾದ ಸಂಗತಿಯನ್ನು ನನ್ನಿಂದ ಕೇಳುವನಾಗು.

ಈ ತ್ಯಾಗವು ಸಾತ್ವಿಕ, ರಾಜಸ ಮತ್ತು ತಾಮಸವೆಂದು ಮೂರು ಬಗೆಯಾಗಿರುವುದೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿರುವುದು.

**ಯಜ್ಞದಾನತಪಃಕರ್ಮ, ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ, ಪಾವನಾನಿ ಮನೀಷಿಣಾಮ್ ॥೫॥**

ಯಜ್ಞ, ದಾನ, ತಪಸ್ಸು ಮುಂತಾದ ಉತ್ತಮ ಕರ್ಮಗಳು ತ್ಯಾಜ್ಯವಲ್ಲವು. ಅವು ಪ್ರತಿಯೊಬ್ಬರಿಗೂ ಕರ್ತವ್ಯವೇ ಆಗಿರುವುವು. ಏಕೆಂದರೆ– ಯಜ್ಞ ದಾನ ತಪ ಮುಂತಾದುವು ಫಲವಂ ಬಯಸದವರಿಗೆ ಪಾವನಕರಗಳಾಗಿರುವುವು ಅಂದರೆ ಅಂತಃಕರಣ ಶುದ್ಧಿಯನ್ನು ಉಂಟು ಮಾಡುವುವು.

**ಏತಾನ್ಯಪಿ ತು ಕರ್ಮಾಣಿ, ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ, ನಿಶ್ಚಿತಂ ಮತಮುತ್ತಮಮ್ ॥೬॥**

ಎಲೈ ಪಾರ್ಥನೇ! ಈ ಯಜ್ಞ ದಾನ ತಪಾದಿ ಸತ್ಕರ್ಮಗಳನ್ನೂ ಕೂಡ ಫಲಾಪೇಕ್ಷೆಯೂ ಮತ್ತು ಕರ್ತೃತ್ವಾಭಿಮಾನವೂ ಇಲ್ಲದೆ ಇವು ಮಾಡತಕ್ಕದ್ದು ಕರ್ತವ್ಯವೆಂದು ತಿಳಿದು ಭಗವದಾರಾಧನ ಬುದ್ಧಿಯಿಂದ ಮಾಡಲು ಯೋಗ್ಯವಾಗಿರುವುವು ಎಂಬುದಾಗಿ ನನ್ನ ನಿಶ್ಚಯವು. ಇದು ಹಿಂದೆ ಹೇಳಿದ ಎಲ್ಲಾ ಮತಗಳಿಗಿಂತಲೂ ಉತ್ತಮವಾಗಿರುವುದು.

**ನಿಯತಸ್ಯ ತು ಸಂನ್ಯಾಸಃ, ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗ, ಸ್ತಾಮಸಃ ಪರಿಕೀರ್ತಿತಃ ॥೭॥**

ಅವಶ್ಯಕವಾಗಿಯೂ ಮಾಡಬೇಕಾಗಿರುವ ನಿತ್ಯ ನೈಮಿತ್ತಿಕಾದಿ ಕರ್ಮಗಳ ತ್ಯಾಗವು ಉಚಿತವಾದುದಲ್ಲ ಅಜ್ಞಾನದಿಂದ ಅವುಗಳನ್ನು ತ್ಯಾಗಮಾಡುವುದಾದರೆ ಆ ತ್ಯಾಗವು ತಾಮಸವೆಂಬುದಾಗಿ ಹೇಳಲ್ಪಡುವುದು.

**ದುಃಖಮಿತ್ಯೇವ ಯತ್ಕರ್ಮ, ಕಾಯಕ್ಲೇಶ ಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ, ನೈವ ತ್ಯಾಗಫಲಂ ಲಭೇತ್ ॥೮॥**

ಕರ್ಮಗಳನ್ನು ಮಾಡುವುದರಿಂದ ದೇಹಕ್ಕೆ ಪೀಡೆಯಾಗುವುದೆಂದು ತಿಳಿದು ಕಾಯಕ್ಲೇಶದ ಭಯದಿಂದ ಕರ್ಮಗಳನ್ನು ತ್ಯಾಗಮಾಡುವುದು ರಾಜಸತ್ಯಾಗವೆನಿಸುವುದು. ಇಂಥ ರಾಜಸತ್ಯಾಗಕ್ಕೆ ತ್ಯಾಗದ ಫಲವು ದೊರೆಯುವುದಿಲ್ಲ.

**ಕಾರ್ಯಮಿತ್ಯೇವ ಯತ್ಕರ್ಮ, ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ, ಸ ತ್ಯಾಗಃ ಸಾತ್ತ್ವಿಕೋಮತಃ ॥೯॥**

ಎಲೈ ಅರ್ಜುನಾ! ಕರ್ತವ್ಯಬುದ್ಧಿಯಿಂದ ಶಾಸ್ತ್ರವಿಹಿತ ಕರ್ಮಗಳನ್ನು ಮಾಡಿ, ಆ ಕರ್ಮಾಚರಣೆಯಲ್ಲಿ ಕರ್ತೃತ್ವಾಭಿಮಾನವನ್ನೂ ಮತ್ತು ಫಲದಾಸೆಯನ್ನೂ ಸಹ ಬಿಡುವುದಾದರೆ ಅದು ಸಾತ್ವಿಕತ್ಯಾಗವೆಂಬುದಾಗಿ ನನ್ನ ಅಭಿಪ್ರಾಯ.

**ನ ದ್ವೇಷ್ಟ್ಯಕುಶಲಂ ಕರ್ಮ, ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ, ಮೇಧಾವೀ ಛಿನ್ನಸಂಶಯಃ ॥೧೦॥**

ಬುದ್ಧಿಶಾಲಿಯಾಗಿಯೂ, ಸಂಶಯರಹಿತನಾಗಿಯೂ, ಸತ್ವಗುಣಪ್ರಧಾನವಾಗಿಯೂ ಇರುವ ಸಾತ್ವಿಕತ್ಯಾಗಿಯು ಅಶುಭಕರ್ಮವನ್ನು ದ್ವೇಷಿಸದವನಾಗಿಯೂ, ಶುಭಕರ್ಮಗಳಲ್ಲಿ ಆಸಕ್ತಿಯಿಲ್ಲದವನಾಗಿಯೂ ಇರುವನು. (ಸರ್ವಕರ್ಮಗಳಲ್ಲಿ ರಾಗದ್ವೇಷಗಳಿಲ್ಲದೆ ಇರುವನು)

**ನಹಿ ದೇಹಭೃತಾ ಶಕ್ಯಂ, ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ, ಸ ತ್ಯಾಗೀತ್ಯಭಿಧೀಯತೇ ॥೧೧॥**

ಯಾವ ದೇಹಧಾರಿಯೂ ಕರ್ಮಗಳನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಒಂದು ಕರ್ಮವಾದರೂ ಮಾಡದೇ ಇರಲು ಆಗುವುದೇ ಇಲ್ಲ. (ದೇಹ ಇಂದ್ರಿಯ ಮನಸ್ಸು ಬುದ್ಧಿ ಇವುಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಲೇ ಇರುತ್ತವೆ.) ಆದುದರಿಂದ ಉತ್ತಮಕರ್ಮಗಳನ್ನು ಮಾಡಿ ಅದರ ಫಲವನ್ನು ಯಾರು ತ್ಯಾಗಮಾಡುವನೋ ಅವನೇ ತ್ಯಾಗಿ ಎಂದು ಹೇಳಲ್ಪಡುವನು.

**ಅನಿಷ್ಟಮಿಷ್ಟಂ ಮಿಶ್ರಂ ಚ, ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯ ತ್ಯಾಗಿನಾಂ ಪ್ರೇತ್ಯ, ನ ತು ಸಂನ್ಯಾಸಿನಾಂ ಕ್ವಚಿತ್ ॥೧೨॥**

ಕರ್ಮಫಲ ತ್ಯಾಗಮಾಡದಿರುವ ಸಕಾಮಿಗಳಿಗೆ ಮರಣಾನಂತರ ಶುಭ ಅಶುಭ ಮತ್ತು ಶುಭಾಶುಭಗಳೆಂಬ ಮೂರುಬಗೆಯ ಕರ್ಮಫಲವು ದೊರೆಯುವುದು. ಆದರೆ ನಿಷ್ಕಾಮಿಗೆ ಈ ತ್ರಿವಿಧ ಫಲಗಳು ಎಂದಿಗೂ ಉಂಟಾಗುವುದಿಲ್ಲ.

**ಪಂಚೈತಾನಿ ಮಹಾಬಾಹೋ, ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ, ಸಿದ್ಧಯೇ ಸರ್ವಕರ್ಮಣಾಮ್ ॥**

ಎಲೈ ಮಹಾಬಾಹುವಾದ ಅರ್ಜುನನೇ ! ಸರ್ವಕರ್ಮಗಳ ಸಿದ್ಧಿಗಾಗಿ ಐದುವಿಧವಾದ ಕಾರಣಗಳು ವೇದಾಂತಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವುವು. ಅವುಗಳನ್ನು ನನ್ನಿಂದ ತಿಳಿಯುವನಾಗು.

**ಅಧಿಷ್ಠಾನಂ ತಥಾ ಕರ್ತಾ, ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ, ದೈವಂ ಚೈವಾತ್ರ ಪಂಚಮಮ್ ॥೧೪॥**

ಅವು ಯಾವುವೆಂದರೆ— 1. ಶರೀರ (ಅಧಿಷ್ಠಾನ) 2. ಪ್ರಕೃತಿಸ್ಥ ಪುರುಷ(ಜೀವಾತ್ಮ) 3. ದಶೇಂದ್ರಿಯಗಳೂ,ಮನಸ್ಸು ಬುದ್ಧ್ಯಾದಿಗಳು–ಇವು ಕರಣಗಳು. 4. ಪ್ರಾಣಾದಿ ಪಂಚವಾಯುಗಳ ಭಿನ್ನ ಭಿನ್ನ ಕ್ರಿಯೆಗಳು. 5. ದೈವವು ಅಂದರೆ ಆಯಾಯ ಇಂದ್ರಿಯಾಭಿಮಾನಿ ದೇವತೆಗಳು. ಈ ಐದು ಮುಖ್ಯಕಾರಣಗಳಿಂದಲೇ ಕರ್ಮಗಳು ಮಾಡಲ್ಪಡುತ್ತವೆ. ಇವುಗಳ ವಿನಹ ಕರ್ಮವು ಮಾಡಲಾಗುವುದಿಲ್ಲ.

**ಶರೀರವಾಙ್ಮನೋಭಿರ್ಯತ್, ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ, ಪಂಚೈತೇ ತಸ್ಯ ಹೇತವಃ ॥೧೫॥**

ಈ ಪುರುಷನು ಶರೀರ, ವಾಣಿ ಮತ್ತು ಮನಸ್ಸಿನಿಂದ ಧರ್ಮ ಅಥವಾ ಅಧರ್ಮರೂಪವಾದ ಯಾವ ಕರ್ಮಗಳನ್ನು ಮಾಡುವನೋ ಅವುಗಳಿಗೆಲ್ಲಾ ಈ ಅಧಿಷ್ಠಾನಾದಿ ಪಂಚಕವೇ ಕಾರಣವಾಗಿರುವುದು.

**ತತ್ರೈವಂ ಸತಿ ಕರ್ತಾರಂ, ಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾ, ನ್ನ ಸ ಪಶ್ಯತಿ ದುರ್ಮತಿಃ ॥೧೬॥**

ಶಾಸ್ತ್ರೀಯಜ್ಞಾನವೂ, ವಿವೇಕ ವಿಚಾರ ಶಮದಮಾದಿ ಆಧ್ಯಾತ್ಮಿಕ ಸಾಧನ ಸಂಪತ್ತುಗಳೂ ಮತ್ತು ಸದ್ಗುರುಗಳ ಅನುಗ್ರಹವೂ ಇಲ್ಲದಿರುವ ಮಲಿನ ಬುದ್ಧಿಯುಳ್ಳ ಮೂಢನು ಹೀಗೆ ಶರೀರಾದಿ ಕರಣತ್ರಯಗಳಿಂದ ಆಗುತ್ತಿರುವ ಕರ್ಮಗಳಿಗೆ ಕೇವಲ ಆತ್ಮನನ್ನೇ ಕರ್ತೃವಾಗಿ ತಿಳಿಯುವನು. ಮಲಿನಬುದ್ಧಿಯುಳ್ಳ ಅಜ್ಞಾನಿಯು ಅಕರ್ತೃವಾದ ಆತ್ಮನನ್ನು ತಿಳಿಯದೆ ಇರುವನು.

**ಯಸ್ಯ ನಾಹಂಕೃತೋ ಭಾವೋ, ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾನ್ಲೋಕಾನ್ನ ಹಂತಿ ನ ನಿಬಧ್ಯತೇ ॥೧೭॥**

ಯಾವ ಪುರುಷನ ಅಂತಃಕರಣದಲ್ಲಿ "ನಾನು ಕರ್ತನು" ಎಂಬ ಭಾವ ವಿಲ್ಲವೋ, ಮತ್ತು ಯಾವನ ಬುದ್ಧಿಯು ಸಾಂಸಾರಿಕ ಪದಾರ್ಥಗಳಲ್ಲಿ ಮತ್ತು ವಿವಿಧ ಕರ್ಮಗಳಲ್ಲಿ "ನಾನು ಭೋಕ್ತನು" ಎಂಬ ಮಿಥ್ಯಾಭಿಮಾನದಿಂದ ಲಿಪ್ತವಾಗದಿರುವುದೋ, ಅಂತಹವನು ಈ ಸರ್ವಲೋಕಗಳನ್ನು ಕೊಂದರೂ ಕೊಂದವನಾಗುವುದಿಲ್ಲ; ಪುಣ್ಯ ಪಾಪಕರ್ಮಗಳಿಂದ ಬಂಧಿಸಲ್ಪಡುವುದೂ ಇಲ್ಲ.

ತತ್ತ್ವವೇತ್ತನು–ಸಮಸ್ತಕರ್ಮಗಳಿಗೆ ಪೂರ್ವೋಕ್ತವಾದ ಕಾರ್ಯ ವಾದ ಅಧಿಷ್ಠಾನಾದಿಗಳೈದೂ ಕಾರಣಗಳೇ ಹೊರತು ಆತ್ಮನು ಕಾರಣನಲ್ಲ; ಆತ್ಮನು ಅಸಂಗನು, ಅಕರ್ತನು ಮತ್ತು ಅಭೋಕ್ತನು ; ಆದಕಾರಣ ಯಾವ ಕರ್ಮವೂ ಅವನನ್ನು ಬಂಧಿಸಲಾರದು ಹೀಗೆಂದು ತಿಳಿದಿರುತ್ತಾನೆ. ಅವ ನಲ್ಲಿ ಅಹಂಕಾರ–ಮಮಕಾರಗಳು ಸರ್ವಥಾ ನಷ್ಟವಾಗಿರುವುದರಿಂದ ಅವನ ಸರ್ವಕರ್ಮಗಳು ನೋಡುವುದಕ್ಕೆ ಮಾತ್ರ ಕರ್ಮಗಳಾಗಿ ಕಂಡುಬಂದರೂ ವಾಸ್ತವವಾಗಿ ಅವು ಕರ್ಮಗಳೇ ಆಗಿರುವುದಿಲ್ಲ. ಏಕೆಂದರೆ ಅವು ಶುಭಾ ಶುಭ ಮಿಶ್ರ ಫಲಗಳನ್ನು ಉಂಟುಮಾಡುವುದಿಲ್ಲ. ಹೀಗಿದ್ದರೂ ಜ್ಞಾನಿ ಯಿಂದ ನಿಷಿದ್ಧಕರ್ಮಗಳೆಂದಿಗೂ ಆಗಲಾರವು. ಏಕೆಂದರೆ—ಮುಮುಕ್ಷು ಅವಸ್ಥೆಯಲ್ಲಿಯೇ ಅವನು ತನ್ನ ಅಂತಃಕರಣವನ್ನು ರಾಗದ್ವೇಷರಹಿತನಾಗಿ ಮಾಡಿಕೊಂಡು ಜ್ಞಾನಸಾಧನೆ ಮಾಡಿರುವನು.

ಪರಮಾತ್ಮನು ಈ ಜಗತ್ತಿನ ಉತ್ಪತ್ತಿ, ಪಾಲನ ಮತ್ತು ಸಂಹಾರಾದಿ ಕಾರ್ಯಗಳನ್ನು ಮಾಡಿಯೂ ಅವುಗಳ ಕರ್ತನಾಗದಿರುವನು ಮತ್ತು ಆ ಕ್ರಿಯೆ ಗಳ ಸಂಬಂಧವೂ ಇಲ್ಲದಿರುವನು. ಗೀತೆ (೪–೧೩, ೧೪ ; ೯–೯)

**ಜ್ಞಾನಂ ಜ್ಞೇಯಂ ಪರಿಜ್ಞಾತಾ, ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ, ತ್ರಿವಿಧಃ ಕರ್ಮಸಂಗ್ರಹಃ ॥೧೮॥**

ತಿಳಿವಳಿಕೆ ( ಜ್ಞಾನ ), ತಿಳಿಯಲು ಯೋಗ್ಯವಾದ ವಸ್ತು (ಜ್ಞೇಯ), ಮತ್ತು ತಿಳಿಯುವವನು (ಜ್ಞಾತಾ) — ಈ ಮೂರು ಸಮಸ್ತ ಕರ್ಮಗಳಿಗೂ ಕಾರಣಗಳಾಗಿರುವುವು. ಶ್ರೋತ್ರಾದಿ ಇಂದ್ರಿಯಗಳು

(ಕರಣ), ಶಬ್ದಾದಿ ವಿಷಯಗಳು (ಕರ್ಮ), ಅವುಗಳನ್ನು ಗ್ರಹಿಸುವ ಜೀವಾತ್ಮನು (ಕರ್ತೃ)—ಈ ಮೂರೂ (ತ್ರಿಪುಟಿಯು) ಕರ್ಮನಿರ್ವಾಹಕ ಸಾಮಗ್ರಿಗಳು.

**ಜ್ಞಾನಂ ಕರ್ಮ ಚ ಕರ್ತಾ ಚ, ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ, ಯಥಾವಚ್ಛೃಣು ತಾನ್ಯಪಿ ॥೧೯॥**

ಜ್ಞಾನ, ಕರ್ಮ, ಕರ್ತೃವೆಂಬ ಈ ಮೂರೂ ಸತ್ವಾದಿ ಗುಣಭೇದಗಳಿಂದ ಮೂರು ಮೂರು ವಿಧವಾಗಿರುವುದಾಗಿ ಸಾಂಖ್ಯಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುದು ಅದನ್ನೂ ಕೇಳು.

**ಸರ್ವಭೂತೇಷು ಯೇನೈಕಂ, ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು, ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥೨೦॥**

ಪರಸ್ಪರ ವಿಲಕ್ಷಣವಾಗಿ ಮತ್ತು ವಿವಿಧವಾಗಿರುವ ಸಕಲ ಭೂತಜಾತಗಳಲ್ಲಿಯೂ ಅವಿನಾಶಿಯೂ ಮತ್ತು ಸರ್ವವ್ಯಾಪಕನಾಗಿಯೂ ಮತ್ತು ಏಕರೂಪನಾಗಿಯೂ ಒಬ್ಬನೇ ಪರಮಾತ್ಮನಿರುವನೆಂದು ಯಾವ ಜ್ಞಾನದಿಂದ ತಿಳಿದುಕೊಳ್ಳುವನೋ ಅದು ಸಾತ್ವಿಕಜ್ಞಾನ ವೆನಿಸುವುದು.

**ಪೃಥಕ್ತ್ವೇನ ತು ಯಜ್ಜ್ಞಾನಂ, ನಾನಾ ಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು, ತಜ್ಜ್ಞಾನಂ ವಿದ್ಧಿ ರಾಜಸಮ್ ॥೨೧॥**

ಬೇರೆ ಬೇರೆಯಾಗಿ ಕಂಡುಬರುವ ಪ್ರತಿಯೊಂದು ಶರೀರದಲ್ಲಿಯೂ ಆತ್ಮನು ಬೇರೆ ಬೇರೆಯಾಗಿಯೇ ಇರುವನೆಂದು ಯಾವನಿಗೆ ಜ್ಞಾನವಾಗಿರುವುದೋ ಅದು ರಾಜಸಜ್ಞಾನವೆನಿಸುವುದು.

**ಯತ್ತು ಕೃತ್ಸ್ನವದೇಕಸ್ಮಿನ್, ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ, ತತ್ತಾಮಸಮುದಾಹೃತಮ್ ॥೨೨॥**

ಯಾವ ಜ್ಞಾನವು ಪ್ರಕೃತಿಕಾರ್ಯವಾದ ಶರೀರವನ್ನೇ ಆತ್ಮವೆಂಬುದಾಗಿ ತಿಳಿದು ಅದರಲ್ಲೇ ಅತ್ಯಂತ ಆಸಕ್ತವಾಗಿರುವುದೋ, ಪುನಃ ಯುಕ್ತಿರಹಿತವಾಗಿಯೂ, ಯಥಾರ್ಥವಲ್ಲದುದಾಗಿಯೂ, ಅಲ್ಪ (ತುಚ್ಛ) ವಾಗಿಯೂ ಇರುವುದೋ, ಆ ಜ್ಞಾನವು ತಾಮಸವೆನಿಸುವುದು.

**ನಿಯತಂ ಸಂಗರಹಿತ, ಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ, ಯತ್ತತ್ಸಾತ್ವಿಕ ಮುಚ್ಯತೇ ॥೨೩॥**

ಯಾವ ಕರ್ಮಗಳು ಶಾಸ್ತ್ರಗಳಿಂದ ವಿಧಿಸಲ್ಪಟ್ಟವೆಯೋ, ಸಂಗರಹಿತನಾಗಿ ರಾಗದ್ವೇಷಗಳಿಲ್ಲದೆ ಫಲಾಪೇಕ್ಷೆಯನ್ನು ಬಯಸದವನಿಂದ ಮಾಡಲ್ಪಡುವ ಕರ್ಮಗಳು ಸಾತ್ವಿಕವೆನಿಸುವುವು.

**ಯತ್ತು ಕಾಮೇಪ್ಸುನಾ ಕರ್ಮ, ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ, ತದ್ರಾಜ ಸಮುದಾಹೃತಮ್ ॥೨೪॥**

ಅಹಂಕಾರಪೂರ್ವಕವಾಗಿ ಫಲಾಪೇಕ್ಷೆಯಿಂದ ಕೂಡಿ ಅತಿ ಆಯಾಸದಿಂದ ಮಾಡಲ್ಪಡುವ ಕರ್ಮವು ರಾಜಸವೆನಿಸುವುದು.

**ಅನುಬಂಧಂ ಕ್ಷಯಂ ಹಿಂಸಾ, ಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ, ತತ್ತಾಮಸಮುದಾಹೃತಮ್ ॥೨೫॥**

ಮುಂದಾಗುವ ಪರಿಣಾಮವನ್ನೂ, ಹಾನಿಯನ್ನೂ, ಹಿಂಸೆಯನ್ನೂ ಮತ್ತು ತನ್ನ ಶಕ್ತಿ ಸಾಮರ್ಥ್ಯಗಳನ್ನೂ ವಿಚಾರಮಾಡದೆ ಕೇವ ಅವಿವೇಕತನದಿಂದ ಯಾವ ಕರ್ಮವು ಮಾಡಲ್ಪಡುವುದೋ ಅದು ತಾಮಸ ಕರ್ಮವೆನಿಸುವುದು.

**ಮುಕ್ತಸಂಗೋಽನಹಂವಾದೀ, ಧೃತ್ಯುತ್ಸಾಹ ಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ, ಕರ್ತಾ ಸಾತ್ವಿಕ ಉಚ್ಯತೇ ॥೨೬॥**

ಆಸಕ್ತಿಯನ್ನು ತೊರೆದು, ಅಹಂಕಾರವಿಲ್ಲದೆ ಧೈರ್ಯೋತ್ಸಾಹಗಳಿಂದ ಕೂಡಿದವನಾಗಿ, ಸಿದ್ಧಿ ಅಸಿದ್ಧಿಗಳಲ್ಲಿ ಹರ್ಷ ಶೋಕಾದಿ ವಿಕಾರಗಳನ್ನು ಹೊಂದದೆ, ಸ್ವಧರ್ಮಾನುಷ್ಠಾನ ಮಾಡುವ ಕರ್ಮಕರ್ತನು ಸಾತ್ವಿಕನೆಂದು ಹೇಳಲ್ಪಡುವನು.

**ರಾಗೀ ಕರ್ಮಫಲಪ್ರೇಪ್ಸು, ರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃಕರ್ತಾ, ರಾಜಸಃ ಪರಿಕೀರ್ತಿತಃ ॥೨೭॥**

ಪುತ್ರ ಧನಾದಿಗಳಲ್ಲಿ ಆಸಕ್ತಿಯುಳ್ಳವನಾಗಿಯೂ, ಕರ್ಮ ಫಲವನ್ನು ಅಪೇಕ್ಷಿಸುವವನಾಗಿಯೂ, 'ಪರಧನಾಪೇಕ್ಷೆಯುಳ್ಳವನಾಗಿಯೂ, ಹಿಂಸಾ

ಸ್ವಭಾವವುಳ್ಳವನಾಗಿಯೂ, ಬಾಹ್ಯಾಭ್ಯಂತರ (ಒಳ ಹೊರಗಿನ) ಶುಚಿಯಿಲ್ಲ ದವನಾಗಿಯೂ, ಸಂತೋಷ ದುಃಖಗಳಿಂದ ಕೂಡಿದವನಾಗಿಯೂ ಇರುವ ಕರ್ತನು ರಾಜಸ ಕರ್ತನೆನಿಸುವನು.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ, ಶಠೋ ನೈಷ್ಕೃತಿಕೋऽಲಸಃ ।**
**ವಿಷಾದೀ ದೀರ್ಘಸೂತ್ರೀ ಚ, ಕರ್ತಾ ತಾಮಸ ಉಚ್ಯತೇ ॥೨೮॥**

ಯಾವ ಕರ್ತನು ಅಯುಕ್ತನೂ, ಅಶಿಕ್ಷಿತನೂ, ಗುರುಹಿರಿಯರಲ್ಲಿ ನಮ್ರಭಾವವಿಲ್ಲದವನೂ (ಸ್ತಬ್ಧಃ), ಕಪಟವುಳ್ಳವನೂ (ಶಠಃ), ಪರರಿಗೆ ಅಪಕಾರ ಮಾಡುವವನು—(ನೈಷ್ಕೃತಿಕನು), ಆಲಸಿಯೂ, ಚಿಂತಾಪರಾ ಯಣನೂ, ದೀರ್ಘಸೂತ್ರಿಯೂ ಆದ ಕರ್ತನು ತಾಮಸನೆನಿಸುವನು.

ಅಯುಕ್ತಃ—ಮನಸ್ಸು, ಬುದ್ಧಿ, ಇಂದ್ರಿಯಾದಿಗಳು ತನ್ನ ವಶದಲ್ಲಿಲ್ಲದೆ ತಾನು ಅವುಗಳ ವಶನಾಗಿರತಕ್ಕವನು ಮತ್ತು ಶ್ರದ್ಧಾ, ಆಸ್ತಿಕ ಭಾವವಿಲ್ಲದ ಪುರುಷನು.

ಪ್ರಾಕೃತಃ—ಉತ್ತಮವಾದ ವಿವೇಕವಿದ್ಯಾದಿ ಸುಶಿಕ್ಷಣವಿಲ್ಲದ, ಕರ್ತವ್ಯ ಜ್ಞಾನವಿಲ್ಲದವನು.

ಸ್ತಬ್ಧಃ—ಗುರುಹಿರಿಯರು ಸತ್ಪುರುಷರು ಮತ್ತು ದೇವತಾದಿ ವಿಗ್ರಹಗಳಿಗೆ ನಮಸ್ಕರಿಸದವನೂ ಮತ್ತು ಅವರ ಸಮ್ಮುಖದಲ್ಲಿ ನಮ್ರಭಾವ ದಿಂದ ವರ್ತಿಸದವನು.

ಶಠಃ—ಪರವಂಚಕನು. ನೈಷ್ಕೃತಿಕಃ—ಇತರರ ವೃತ್ತಿ (ಜೀವನೋದ್ಯೋ ಗವನ್ನು) ಹಾಳುಮಾಡುವವನು.

ಅಲಸಃ—ಸದಾ ಸೋಮಾರಿತನದಿಂದ ಕರ್ಮಗಳಲ್ಲಿ ಪ್ರವರ್ತಿಸದಿರುವವನು; ಪ್ರಾಪಂಚಿಕ ಅಥವಾ ಶಾಸ್ತ್ರೀಯವಾದ ಕರ್ತವ್ಯಕರ್ಮಗಳಲ್ಲೂ ಪ್ರವೃತ್ತಿ ಮತ್ತು ಉತ್ಸಾಹವಿಲ್ಲದಿರುವಿಕೆ; ಆಲಸ್ಯತನ.

ವಿಷಾದೀ—ಸದಾ ಚಿಂತಾಪರಾಯಣನಾಗಿರುವವನು.

ದೀರ್ಘಸೂತ್ರೀ—ಅಲ್ಪಕಾಲದಲ್ಲಿ ಮತ್ತು ತತ್ಕಾಲದಲ್ಲಿ ಮಾಡತಕ್ಕ ಕಾರ್ಯ ವನ್ನು ಬಹುಕಾಲದಮೇಲೆ ಮಾಡತಕ್ಕವನು.

ಇವರೆಲ್ಲರೂ ತಾಮಸಕರ್ತರು. ರಾಜಸ ಮತ್ತು ತಾಮಸ ಕರ್ತರ

ಸ್ವಭಾವಗಳನ್ನು ಪರಿತ್ಯಜಿಸಿ ಸಾತ್ವಿಕ ಕರ್ತರ ಸ್ವಭಾವವನ್ನು ಹೊಂದುವುದು ಎಲ್ಲರಿಗೂ ಯೋಗ್ಯವಾಗಿರುತ್ತದೆ.

**ಬುದ್ಧೇರ್ಭೇದಂ ಧೃತೇಶ್ಚೈವ, ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ, ಪೃಥಕ್ತ್ವೇನ ಧನಂಜಯ ॥೨೯॥**

ಎಲೈ ಧನಂಜಯನೇ! ಗುಣಭೇದದಿಂದ ಬುದ್ಧಿಯೂ ಮತ್ತು ಧೃತಿಯೂ (ಧಾರಣೆ ಮಾಡತಕ್ಕ ಶಕ್ತಿಯೂ) ಮೂರು ವಿಧವಾಗಿವೆ. ಅವುಗಳನ್ನು ಸಂಪೂರ್ಣವಾಗಿ ವಿಭಾಗಪೂರ್ವಕ ಹೇಳುತ್ತೇನೆ, ಕೇಳುವನಾಗು.

**ಪ್ರವೃತ್ತಿಂ ಚ ನಿವೃತ್ತಿಂ ಚ, ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ, ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ॥**

ಎಲೈ ಪಾರ್ಥನೇ! ಪ್ರವೃತ್ತಿಮಾರ್ಗವಾದ ಶಾಸ್ತ್ರವಿಹಿತ ಕರ್ಮವನ್ನೂ, ನಿವೃತ್ತಿರೂಪವಾದ ಮೋಕ್ಷಮಾರ್ಗವನ್ನೂ, ವಿಹಿತ ಮತ್ತು ನಿಷಿದ್ಧ ಕರ್ಮಗಳ ಸ್ವರೂಪವನ್ನೂ, ಭಯ ಅಭಯಗಳ ಕಾರಣಗಳನ್ನೂ, ಬಂಧ ಮತ್ತು ಮೋಕ್ಷದ ಸ್ವರೂಪವನ್ನೂ ಯಥಾರ್ಥವಾಗಿ ಯಾವ ಬುದ್ಧಿಯು ಗ್ರಹಿಸುವುದೋ ಅದು ಸಾತ್ವಿಕ ಬುದ್ಧಿಯೆನಿಸುವುದು.

**ಯಯಾ ಧರ್ಮಮಧರ್ಮಂ ಚ, ಕಾರ್ಯಂ ಚಾಕಾರ್ಯಮೇವ ಚ।**
**ಅಯಥಾವತ್ಪ್ರಜಾನಾತಿ, ಬುದ್ಧಿಃ ಸಾ ಪಾರ್ಥ ರಾಜಸೀ ॥೩೧॥**

ಎಲೈ ಪಾರ್ಥನೇ! ಯಾವ ಬುದ್ಧಿಯಿಂದ ಧರ್ಮ–ಅಧರ್ಮಗಳ ಮತ್ತು ಕಾರ್ಯ–ಅಕಾರ್ಯಗಳ ಸ್ವರೂಪವನ್ನು ಯಥಾರ್ಥವಾಗಿ ಗ್ರಹಿಸಲ್ಪಡುವುದಿಲ್ಲವೋ ಆ ಬುದ್ಧಿಯು ರಾಜಸಬುದ್ಧಿಯೆನಿಸುವುದು.

**ಅಧರ್ಮಂ ಧರ್ಮಮಿತಿ ಯಾ, ಮನ್ಯತೇ ತಮಸಾವೃತಾ ॥**
**ಸರ್ವಾರ್ಥಾನ್ವಿಪರೀತಾಂಶ್ಚ, ಬುದ್ಧಿಃ ಸಾ ಪಾರ್ಥ ತಾಮಸೀ ॥**

ಎಲೈ ಪಾರ್ಥನೇ! ಯಾವ ಬುದ್ಧಿಯು ತಮೋಗುಣದಿಂದ ಆವೃತವಾಗಿರುವ ಕಾರಣ ಅಧರ್ಮವನ್ನು ಧರ್ಮವೆಂತಲೂ, (ಧರ್ಮವನ್ನು ಅಧರ್ಮವೆಂತಲೂ), ಹೀಗೆಯೇ ಎಲ್ಲಾ ವಿಷಯಗಳನ್ನು ವಿಪರೀತವಾಗಿಯೂ ಗ್ರಹಿಸುವುದೋ ಅದು ತಾಮಸಬುದ್ಧಿಯೆನಿಸುವುದು.

**ಧೃತ್ಯಾ ಯಯಾ ಧಾರಯತೇ, ಮನಃ ಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾಽವ್ಯಭಿಚಾರಿಣ್ಯಾ, ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥೩೩॥**

ಎಲೈ ಪಾರ್ಥನೇ ! ಅಖಂಡವಾದ ಚಿತ್ತವೃತ್ತಿ ನಿರೋಧರೂಪವಾದ ಯೋಗಬಲದಿಂದ ಮನಸ್ಸು, ಪ್ರಾಣ, ಇಂದ್ರಿಯ ಇವುಗಳ ಕ್ರಿಯೆಗಳಲ್ಲಿ ವಿಷಯಚಿಂತನೆಯಾಗದಂತೆಯೂ, ಸದಾ ಏಕರೂಪವಾಗಿ ತೈಲಧಾರೆಯಂತೆ ಪರಬ್ರಹ್ಮದ ಸ್ವರೂಪವನ್ನು ಧಾರಣೆ ಮಾಡುವದಾಗಿಯೂ ಇರುವ ಯಾವ ಧೃತಿಯುಂಟೋ ಅದು ಸಾತ್ತ್ವಿಕವಾದ ಧೃತಿಯೆನಿಸುವುದು.

**ಯಯಾ ತು ಧರ್ಮಕಾಮಾರ್ಥಾನ್, ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ, ಧೃತಿಃ ಸಾ ಪಾರ್ಥ ರಾಜಸೀ ॥೩೪॥**

ಎಲೈ ಅರ್ಜುನನೇ ! ಧರ್ಮಕಾಮಾರ್ಥಗಳನ್ನು ಅತ್ಯಾಸಕ್ತಿಯಿಂದಲೂ, ಫಲಾಪೇಕ್ಷೆಯಿಂದಲೂ ಧರಿಸುವ ಧೃತಿಯು ರಾಜಸವೆನಿಸುವುದು.

**ಯಯಾ ಸ್ವಪ್ನಂ ಭಯಂ ಶೋಕಂ, ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ, ಧೃತಿಃ ಸಾ ಪಾರ್ಥ ತಾಮಸೀ ॥೩೫॥**

ಎಲೈ ಪಾರ್ಥನೇ ! ನಿದ್ರೆ, ಭಯ, ವ್ಯಸನ, ವಿಷಾದ ಮತ್ತು ಮದವನ್ನು ಬಿಡದಿರುವ ದುರ್ಬುದ್ಧಿಯುಳ್ಳವನ ಧೃತಿಯು ತಾಮಸವೆನಿಸುವುದು.

**ಸುಖಂ ತ್ವಿದಾನೀಂ ತ್ರಿವಿಧಂ, ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ, ದುಃಖಾಂತಂ ಚ ನಿಗಚ್ಛತಿ ॥೩೬॥**
**ಯತ್ತದಗ್ರೇ ವಿಷಮಿವ, ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತ, ಮಾತ್ಮಬುದ್ಧಿ ಪ್ರಸಾದಜಮ್ ॥೩೭॥**

ಎಲೈ ಭರತಶ್ರೇಷ್ಠನೇ ! ಮೂರು ವಿಧವಾದ ಸುಖಗಳನ್ನು ಹೇಳುವೆನು ಕೇಳು. ಸಮಾಧಿಯ ಅಭ್ಯಾಸಬಲದಿಂದ ಯಾವ ಪರಮ ಸುಖದಲ್ಲಿಯೇ ಗಮಿಸುವನೋ ಮತ್ತು ಸರ್ವ ದುಃಖಗಳ ನಿವೃತ್ತಿಯನ್ನು ಹೊಂದುವನೋ, ಮತ್ತು ಯಾವ ಸುಖವು ಪ್ರಥಮದಲ್ಲಿ ಅಂದರೆ ಯೋಗಾನುಷ್ಠಾನ ಮಾಡುವ ಸಾಧನ ಕಾಲದಲ್ಲಿ ವಿಷದಂತೆ ಕಂಡುಬಂದರೂ ಪರಿಣಾಮದಲ್ಲಿ ಅಮೃತಕ್ಕೆ ಸಮಾನವಾಗಿಯೂ ಇರುವುದೋ—ಈ ಬಗೆಯ ಆತ್ಮಾನುಭವದಿಂದ ಹುಟ್ಟಿದ ಸುಖವು ಸಾತ್ವಿಕ ಸುಖವೆನಿಸುವುದು.

**ವಿಷಯೇಂದ್ರಿಯ ಸಂಯೋಗಾ, ದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ, ತತ್ಸುಖಂ ರಾಜಸಂ ಸ್ಮೃತಮ್ ॥೩೮॥**

ವಿಷಯ ಮತ್ತು ಇಂದ್ರಿಯಗಳ ಸಂಬಂಧದಿಂದ ಉಂಟಾಗುವ ಸುಖವು (ಇಂದ್ರಿಯ ಜನ್ಯ ಸುಖವು) ಪ್ರಥಮದಲ್ಲಿ (ಭೋಗ ಕಾಲದಲ್ಲಿ) ಅಮೃತದಂತೆ ಪ್ರಿಯವಾಗಿ ಕಂಡುಬಂದರೂ ಪರಿಣಾಮದಲ್ಲಿ ರೋಗ, ದುಃಖ, ದೀನತೆ ಮುಂತಾದ ಅನರ್ಥಗಳನ್ನು ಉಂಟುಮಾಡುವುದರಿಂದ ವಿಷದಂತೆ ಅಪ್ರಿಯವಾಗುವುದು. ಇಂತಹ ಸುಖವು ರಾಜಸ ಸುಖವೆನಿಸುವುದು.

**ಯದಗ್ರೇ ಚಾನುಬಂಧೇ ಚ, ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ, ತತ್ತಾಮಸಮುದಾಹೃತಮ್ ॥೩೯॥**

ನಿದ್ರಾ, ಆಲಸ್ಯ, ಪ್ರಮಾದಗಳಿಂದ ಹುಟ್ಟಿದ ಯಾವ ಸುಖವು ಪ್ರಾರಂಭದಲ್ಲಿಯೂ ಮತ್ತು ಪರಿಣಾಮದಲ್ಲಿಯೂ ಬುದ್ಧಿಗೆ ಮೋಹವನ್ನು ಉಂಟುಮಾಡುವುದೋ ಅದು ತಾಮಸ ಸುಖದ ಲಕ್ಷಣವಾಗಿರುವುದು.

**ನ ತದಸ್ತಿ ಪೃಥಿವ್ಯಾಂ ವಾ, ದಿವಿ ದೇವೇಷು ವಾ ಪುನಃ ।**
**ಸತ್ವಂ ಪ್ರಕೃತಿಜೈರ್ಮುಕ್ತಂ, ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥೪೦॥**

ಪ್ರಕೃತಿಯಿಂದ ಉತ್ಪನ್ನವಾದ ಸತ್ವಾದಿ ಮೂರು ಗುಣಗಳಿಂದ ಬಿಡಲ್ಪಟ್ಟ ಪ್ರಾಣಿಯು ಭೂಮಿಯಲ್ಲಿಯೂ ಮತ್ತು ಸ್ವರ್ಗದಲ್ಲಿಯೂ ದೇವತಾ ಸಮುದಾಯಗಳಲ್ಲಿಯೂ ಇರುವುದಿಲ್ಲ.

**ಬ್ರಾಹ್ಮಣಕ್ಷತ್ರಿಯವಿಶಾಂ, ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ, ಸ್ವಭಾವಪ್ರಭವೈರ್ಗುಣೈಃ ॥೪೧॥**

ಎಲೈಪರಂತಪನೇ! ಪೂರ್ವಸಂಸ್ಕಾರಾನುಸಾರ ಹುಟ್ಟಿದ ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಮತ್ತು ಶೂದ್ರರ ವರ್ಣಗಳಿಗೆ ಆಯಾವರ್ಣಗಳಿಗೆ ಯೋಗ್ಯವಾದಂತಹ ಸ್ವಧರ್ಮರೂಪವಾದ ಕರ್ಮಗಳು ನನ್ನಿಂದ ವಿಭಾಗಿಸಲ್ಪಟ್ಟಿವೆ.

ಈ ವಿಷಯವನ್ನು (ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ [4—13)] "ಗುಣಕರ್ಮ ವಿಭಾಗದಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟವು" ಎಂದು ಹಿಂದೆಯೇ ಹೇಳಿತ್ತು. ಆದರೆ ಅಲ್ಲಿ ಆಯಾ ವರ್ಣಗಳ ಧರ್ಮಕರ್ಮಗಳನ್ನು ನಿರೂಪಿಸಲಿಲ್ಲ. ಅದನ್ನು ಇಲ್ಲಿ ನಿರೂಪಿಸಿದ್ದಾರೆ.

**ಶಮೋ ದಮಸ್ತಪಃ ಶೌಚಂ, ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ, ಬ್ರಾಹ್ಮಂ ಕರ್ಮ ಸ್ವಭಾವಜಮ್ ॥೪೨॥**

ಮನೋನಿಗ್ರಹವೂ, ಇಂದ್ರಿಯನಿಗ್ರಹವೂ, ಬಾಹ್ಯಾಭ್ಯಂತರ ಶೌಚವೂ, ಕ್ಷಮಾಗುಣವೂ, ಸರಳಸ್ವಭಾವವೂ, ವೇದ ಶಾಸ್ತ್ರಗಳ ಜ್ಞಾನವೂ, ಅನುಭವ ಜ್ಞಾನವೂ (ಆತ್ಮಜ್ಞಾನವೂ), ಆಸ್ತಿಕ್ಯ ಬುದ್ಧಿಯೂ(a) ಇವುಗಳು ಬ್ರಾಹ್ಮಣನಿಗೆ ಸ್ವಭಾವಸಿದ್ಧವಾದ ಕರ್ಮಗಳು.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ, ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ, ಕ್ಷಾತ್ರಂ ಕರ್ಮ ಸ್ವಭಾವಜಮ್ ॥೪೩॥**

ಶೌರ್ಯ, ಪರಾಕ್ರಮ, ಧೈರ್ಯ, ಕಾರ್ಯದಕ್ಷತೆ, (b) ಯುದ್ಧದಲ್ಲಿ ಬೆನ್ನು ತೋರಿಸದಿರುವಿಕೆ, ದಾನಮಾಡುವಿಕೆ, ಪ್ರಜಾಸಂರಕ್ಷಣೆ—ಇವುಗಳು ಕ್ಷತ್ರಿಯನ ಸ್ವಭಾವಸಿದ್ಧವಾದ ಕರ್ಮಗಳು.

**ಕೃಷಿಗೋರಕ್ಷವಾಣಿಜ್ಯಂ, ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ, ಶೂದ್ರಸ್ಯಾಪಿ ಸ್ವಭಾವಜಮ್ ॥೪೪॥**

ವ್ಯವಸಾಯವೂ, ಪಶುಪಾಲನೆಯೂ, ವ್ಯಾಪಾರವೂ ವೈಶ್ಯನ ಸ್ವಭಾವ ಜನ್ಯವಾದ ಕರ್ಮಗಳು. ಬ್ರಾಹ್ಮಣಾದಿ ಮೂರುವರ್ಣದವರ ಸೇವೆಯು ಶೂದ್ರನ ಸ್ವಭಾವಜನ್ಯವಾದ ಕರ್ಮವು.

**ಸ್ವೇ ಸ್ವೇ ಕರ್ಮಣ್ಯಭಿರತಃ, ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ, ಯಥಾ ವಿಂದತಿ ತಚ್ಛೃಣು ॥೪೫॥**

ತಮ್ಮ ತಮ್ಮ ಸ್ವಾಭಾವಿಕ ಕರ್ಮಗಳಲ್ಲಿ ತತ್ಪರರಾಗಿರುವ ಮನುಷ್ಯರು ಭಗವಂತನ ಸಾಕ್ಷಾತ್ಕಾರರೂಪವಾದ ಪರಮಸಿದ್ಧಿಯನ್ನು ಹೊಂದುವರು. ಸ್ವಕರ್ಮದಲ್ಲಿ ನಿಷ್ಠೆಯುಳ್ಳವನು ಹೇಗೆ ಸಿದ್ಧಿಯನ್ನು ಪಡೆಯುವನೋ ಅದನ್ನು ಹೇಳುವೆನು, ಕೇಳು.

---

(a) ಈಶ್ವರ ಮತ್ತು ಪರಲೋಕಗಳಲ್ಲಿ ನಂಬಿಕೆ ಇರುವಂತಹುದು.

(b) ಕಾರ್ಯಗಳನ್ನು ಯುಕ್ತಿ ಮತ್ತು ಸ್ವಸಾಮರ್ಥ್ಯಗಳಿಂದಲೂ ನಿಪುಣತೆಯಿಂದಲೂ ಮಾಡುವ ಶಕ್ತಿ.

**ಯತಃ ಪ್ರವೃತ್ತಿರ್ಭೂತಾನಾಂ, ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ, ಸಿದ್ಧಿಂ ವಿಂದತಿ ಮಾನವಃ ॥೪೬॥**

ಯಾವ ಪರಮಾತ್ಮನಿಂದ ಈ ಸಮಸ್ತ ಪ್ರಾಣಿಗಳೂ ಉತ್ಪನ್ನವಾಗಿವೆಯೋ, ಮತ್ತು ಯಾವ ಪರಮಾತ್ಮನಿಂದ ಈ ಸರ್ವ ಪ್ರಪಂಚವೂ ವ್ಯಾಪ್ತವಾಗಿರುವುದೋ, ಆ ಪರಮಾತ್ಮನನ್ನು ಸ್ವಕರ್ಮ ಅನುಷ್ಠಾನಪೂರ್ವಕ ಪೂಜಿಸಿ ಪರಮಸಿದ್ಧಿ (ಬ್ರಹ್ಮಸಿದ್ಧಿ)ಯನ್ನು ಹೊಂದುತ್ತಾನೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ, ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ, ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೪೭॥**

ಚೆನ್ನಾಗಿ ಆಚರಿಸಲ್ಪಡುವ ಪರಧರ್ಮಕ್ಕಿಂತಲೂ, ಕೆಲವು ನ್ಯೂನತೆಗಳಿಂದ ಕೂಡಿದ್ದಾದರೂ ಆ ಸ್ವಧರ್ಮವೇ ಶ್ರೇಯಸ್ಕರವಾದುದು. ಏಕೆಂದರೆ ಅವರವರ ವರ್ಣಾಶ್ರಮಗಳಿಗೆ ನಿಯತವಾಗಿರುವ ಕರ್ಮಗಳನ್ನು ಆಚರಿಸುವುದರಿಂದ ಮಾನವನು ಪಾಪವನ್ನು ಹೊಂದುವುದಿಲ್ಲ.

**ಸಹಜಂ ಕರ್ಮ ಕೌಂತೇಯ, ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ, ಧೂಮೇನಾಗ್ನಿರಿವಾವೃತಾಃ ॥೪೮॥**

ಹಿಂಸಾದಿ ದೋಷಯುಕ್ತವಾದುದಾದರೂ ಸ್ವಭಾವಸಿದ್ಧವಾದ(ಸ್ವಧರ್ಮರೂಪವಾದ) ಕರ್ಮವನ್ನು ಬಿಡಕೂಡದು. ಏಕೆಂದರೆ—ಹೊಗೆಯಿಂದ ಕೂಡಿದ ಅಗ್ನಿಯಂತೆ ಎಲ್ಲರಕರ್ಮಗಳೂ ಅಲ್ಪ ಸ್ವಲ್ಪ ದೋಷಗಳಿಂದ ಕೂಡಿದುದಾಗಿಯೇ ಇರುತ್ತದೆ.

**ಅಸಕ್ತಬುದ್ಧಿಃ ಸರ್ವತ್ರ, ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ, ಸಂನ್ಯಾಸೇನಾಧಿಗಚ್ಛತಿ ॥೪೯॥**

ಎಲ್ಲಾ ವಿಷಯಗಳಲ್ಲಿಯೂ ಆಸಕ್ತಿ ಇಲ್ಲದ ಬುದ್ಧಿಯುಳ್ಳವನಾಗಿಯೂ, ಸ್ವಾಧೀನಮಾಡಲ್ಪಟ್ಟ ಅಂತಃಕರಣವುಳ್ಳವನಾಗಿಯೂ, ಸರ್ವ ಕಾಮನೆ ಮತ್ತು ಇಚ್ಛೆಗಳನ್ನು ಪರಿತ್ಯಜಿಸಿರುವವನಾಗಿಯೂ ಇರುವ ಪುರುಷನು ಸರ್ವೋತ್ಕೃಷ್ಟವಾದ ಮೋಕ್ಷವನ್ನು ಸರ್ವಕರ್ಮ ಫಲತ್ಯಾಗರೂಪವಾದ ಸಂನ್ಯಾಸದಿಂದ (ಅಥವಾ ಸಾಂಖ್ಯಯೋಗದಿಂದ) ಹೊಂದುತ್ತಾನೆ.

**ಸಿದ್ಧಿಂ ಪ್ರಾಪ್ತೋಯಥಾ ಬ್ರಹ್ಮ, ತಥಾಽಽಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ, ನಿಷ್ಠಾ ಜ್ಞಾನಸ್ಯ ಯಾ ಪರಾ ॥೫೦॥**

ಎಲೈ ಕೌಂತೇಯನೇ ! ಈಶ್ವರಾರ್ಪಣ ಬುದ್ಧಿಯಿಂದ ಮಾಡಿದ ನಿಷ್ಕಾಮಕರ್ಮ ಮುಂತಾದುವುಗಳಿಂದ ಅಂತಃಕರಣಪ್ರಸಾದ ( ಈಶ್ವರಪ್ರಸಾದ ) ರೂಪ ಸಿದ್ಧಿಯನ್ನು ಪಡೆದಿರುವವನು ಬ್ರಹ್ಮಭಾವವನ್ನು ಹೇಗೆ ಹೊಂದುವನೋ ಅದನ್ನು ಸಂಕ್ಷೇಪವಾಗಿ ತಿಳಿಸುವೆನು. ಇದು ಜ್ಞಾನಯೋಗದ ಅಂತಿಮಸ್ಥಿತಿ.

**ಬುದ್ಧ್ಯಾ ವಿಶುದ್ಧಯಾ ಯುಕ್ತೋ, ಧೃತ್ಯಾಽಽತ್ಮಾನಂ ನಿಯಮ್ಯ ಚ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ, ರಾಗದ್ವೇಷೌ ವ್ಯುದಸ್ಯ ಚ ॥೫೧॥**
**ವಿವಿಕ್ತಸೇವೀ ಲಘ್ವಾಶೀ, ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋನಿತ್ಯಂ, ವೈರಾಗ್ಯಂ ಸಮುಪಾಶ್ರಿತಃ ॥೫೨॥**
**ಅಹಂಕಾರಂ ಬಲಂ ದರ್ಪಂ, ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ, ಬ್ರಹ್ಮಭೂಯಾಯ ಕಲ್ಪತೇ॥೫೩॥**

ಯಾವನು ನಿರ್ಮಲವಾದ ಬುದ್ಧಿಯಿಂದ ಯುಕ್ತನಾಗಿಯೂ, ಸಾತ್ವಿಕವಾದ ಧೈರ್ಯದಿಂದ ಶರೀರ ಇಂದ್ರಿಯಗಳನ್ನು ನಿಯಮಮಾಡಿಕೊಂಡಿರುವವನಾಗಿಯೂ, ಶಬ್ದಾದಿ ವಿಷಯಗಳನ್ನೂ, ರಾಗದ್ವೇಷಗಳನ್ನೂ ಪರಿತ್ಯಜಿಸಿದವನಾಗಿಯೂ, ಏಕಾಂತವಾಸದಲ್ಲಿರುವವನಾಗಿಯೂ, ಅಲ್ಪಾಹಾರವುಳ್ಳವನಾಗಿಯೂ, ಮನೋವಾಕ್ಕಾಯಗಳನ್ನು ನಿರೋಧಿಸಿದವನಾಗಿಯೂ, ಸದಾ ಧ್ಯಾನಯೋಗದಲ್ಲಿ ತತ್ಪರನಾಗಿಯೂ, ಅಹಂಕಾರ ಬಲ ದರ್ಪ ಕಾಮ ಕ್ರೋಧ ಪರಿಗ್ರಹ—ಇವನ್ನು ಬಿಟ್ಟವನಾಗಿಯೂ, ಮಮತೆಯಿಲ್ಲದವನಾಗಿಯೂ, ಶಾಂತಚಿತ್ತನಾಗಿಯೂ ಇರುವನೋ ಅವನು ಬ್ರಹ್ಮಭಾವವನ್ನು ಹೊಂದಲು ಯೋಗ್ಯನಾಗಿರುವನು.

**ಬ್ರಹ್ಮಭೂತಃ ಪ್ರಸನ್ನಾತ್ಮಾ, ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು, ಮದ್ಭಕ್ತಿಂ ಲಭತೇ ಪರಾಮ್ ॥೫೪॥**

ಹೀಗೆ ಜ್ಞಾನನಿಷ್ಠೆಯಿಂದ ಬ್ರಹ್ಮಭಾವವನ್ನು ಪಡೆದ ಮಹಾಪುರುಷನು ಬ್ರಹ್ಮನಮೊದಲುಗೊಂಡು ಸ್ತಂಭ ಪರ್ಯಂತವಿರುವ ಸಮಸ್ತ ಚರಾಚರಾತ್ಮಕ

ಪ್ರಾಣಿಗಳಲ್ಲಿಯೂ ಏಕರೂಪವಾಗಿ ವ್ಯಾಪಿಸಿರುವ ಬ್ರಹ್ಮವನ್ನೇ ನೋಡುವವನು ಮತ್ತು ತಾನೂ ಸಹ ಬ್ರಹ್ಮವೇ ಆಗಿ ಪರಮ ಸಂತುಷ್ಟನಾಗಿರುವನು. ಆದ ಕಾರಣ ಈ ಬ್ರಹ್ಮೀಭೂತ ಪುರುಷನು ಯಾವುದನ್ನೂ ಅಪೇಕ್ಷಿಸದಿರುವವನು ಮತ್ತು ಯಾವುದನ್ನು ಕುರಿತೂ ಶೋಕಿಸದಿರುವವನು; ಇವನು ನನ್ನ ಪರಾಭಕ್ತಿಯನ್ನು ಹೊಂದುವವನು.

**ಭಕ್ತ್ಯಾ ಮಾಮಭಿಜಾನಾತಿ, ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ, ವಿಶತೇ ತದನಂತರಮ್ ॥೫೫॥**

ಪರಾಭಕ್ತಿಯಿಂದ ಆ ಮಹಾ ಪುರುಷನು ಸಗುಣ ಮತ್ತು ನಿರ್ಗುಣ ಸ್ವರೂಪದಿಂದಿರುವ ನನ್ನ ಸ್ವರೂಪವನ್ನು ಯಥಾವತ್ತಾಗಿ ತನ್ನ ಸ್ವರೂಪದಿಂದಲೇ ತಿಳಿದವನಾಗಿ, ತತ್ಕಾಲದಲ್ಲಿಯೇ ಆ ಬ್ರಹ್ಮವೇತ್ತನು ಪರಬ್ರಹ್ಮದಲ್ಲಿ ಅಭೇದ ಭಾವದಿಂದ ಪ್ರವೇಶಿಸುವನು.

**ಸರ್ವಕರ್ಮಾಣ್ಯಪಿ ಸದಾ, ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ, ಶಾಶ್ವತಂ ಪದಮವ್ಯಯಮ್ ॥೫೬॥**

ನನ್ನನ್ನು ಶರಣುಹೊಂದಿದ ಭಕ್ತನು ಸರ್ವದಾ ಸಮಸ್ತ ಕರ್ಮಗಳನ್ನು ಮಾಡುತ್ತಿದ್ದಾಗ್ಯೂ, ನನ್ನ ಅನುಗ್ರಹದಿಂದ ಶಾಶ್ವತವಾಗಿಯೂ ಅವ್ಯಯವಾಗಿಯೂ ಇರುವ ಪರಮ ಪದವನ್ನು ಹೊಂದುವನು.

**ಚೇತಸಾ ಸರ್ವಕರ್ಮಾಣಿ, ಮಯಿಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ, ಮಚ್ಚಿತ್ತಃ ಸತತಂ ಭವ ॥೫೭॥**

ನನ್ನ ಪರಾಯಣನಾಗಿ, ನಾನೇ ಸರ್ವಸ್ವವೆಂಬ ಭಾವನೆಯಿಂದ ಮತ್ತು ಈಶ್ವರಾರ್ಪಣ ಬುದ್ಧಿಯಿಂದ ಸಮಸ್ತ ಕರ್ಮಗಳನ್ನೂ ನನಗೆ ಸಮರ್ಪಿಸಿ, ಸಮತ್ವ ಬುದ್ಧಿರೂಪ ಯೋಗವನ್ನು ಅವಲಂಬಿಸಿದವನಾಗಿ ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನು ಇಡು.

**ಮಚ್ಚಿತ್ತಃ ಸರ್ವದುರ್ಗಾಣಿ, ಮತ್ಪ್ರಸಾದಾತ್ತರಿಷ್ಯಸಿ, ।**
**ಅಥ ಚೇತ್ತ್ವಮಹಂಕಾರಾ, ನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥೫೮॥**

ಈ ಪರಿಯಾಗಿ ನನ್ನಲ್ಲೇ ಚಿತ್ತವುಳ್ಳ ನೀನು ನನ್ನ ಅನುಗ್ರಹದಿಂಧ ಸಮಸ್ತ ದುಃಖಗಳನ್ನೂ ಅನಾಯಾಸವಾಗಿಯೇ ದಾಟುವೆ. ಒಂದು ವೇಳೆ

ಅಹಂಕಾರದಿಂದ ನನ್ನ ಮಾತನ್ನು ಕೇಳದೇ ಹೋದರೆ ನಷ್ಟವಾಗುವೆ (ಅಂದರೆ, ಪುರುಷಾರ್ಥನನ್ನು ಪಡೆಯದೆ ವರ್ತಮಾನ ಸ್ಥಿತಿಯಿಂದ ಕೆಳಗೆ ಬಿದ್ದು ಹೋಗುವೆ).

ನನ್ನ ಮಾತಿನಂತೆ ನಡೆದರೆ ನಿನಗೆ ಪರಮ ಶ್ರೇಯಸ್ಸಾಗುವುದು; ಇಲ್ಲ ದಿದ್ದರೆ ದೊಡ್ಡ ಹಾನಿಯಾಗುವುದು. ತನ್ನನ್ನು ಬುದ್ಧಿವಂತನೆಂದು ಭಾವಿಸಿ ಅಹಂಕಾರದಿಂದ ನನ್ನ ಮಾತನ್ನು ಮೀರಿ ಯುದ್ಧಾದಿ ನಿನ್ನ ಸ್ವಧರ್ಮವನ್ನು ಬಿಟ್ಟು ಸಂನ್ಯಾಸ, ಭಿಕ್ಷಾಟನ ಇತ್ಯಾದಿ ಪರಧರ್ಮವನ್ನು ಕೈಕೊಳ್ಳುವು ದಾದರೆ "ಇತಃ ಭ್ರಷ್ಟಸ್ತತೋ ಭ್ರಷ್ಟಃ" ಎಂಬಂತೆ, ಮನೋನೈರ್ಮಲ್ಯ ವಾಗಲೀ ಅಥವಾ ಪರಮಾರ್ಥಸಿದ್ಧಿಯಾಗಲೀ ಎರಡೂ ಉಂಟಾಗುವುದಿಲ್ಲ. ಇದಕ್ಕೆ ಬದಲಾಗಿ ಅಧೋಗತಿಯಾಗುವುದು. ಇದು "ನಷ್ಟವಾಗುವೆ" ಎಂಬ ಶಬ್ದದ ಭಾವಾರ್ಥ.

ಇದರಿಂದ ತಿಳಿದುಬರುವುದೇನೆಂದರೆ—ಭಗವದಾಜ್ಞೆಗೆ ವಿರೋಧವಾಗಿ ಯಾರೂ ನಡೆಯಬಾರದು. ಹಾಗೆ ವಿರೋಧವಾಗಿ ನಡೆದಲ್ಲಿ ಅವರಿಗೆ ಶ್ರೇಯ ಸ್ಸಾಗುವುದಿಲ್ಲ. ಅಲ್ಲದೆ ಸ್ವಧರ್ಮವನ್ನು ಎಂದೂ ಮೀರಬಾರದು. "ಧರ್ಮೋ ರಕ್ಷತಿ ರಕ್ಷಿತಃ"

**ಯದಹಂಕಾರಮಾಶ್ರಿತ್ಯ, ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ, ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥೫೯॥**

ನೀನು ಅಹಂಕಾರದಿಂದ ನಿನ್ನ ಸ್ವಧರ್ಮವಾದ ಯುದ್ಧವನ್ನು ಮಾಡು ವುದಿಲ್ಲವೆಂದು ಒಂದು ವೇಳೆ ಹಠ ಹಿಡಿಯುವುದಾದರೆ (ದುರಾಗ್ರಹ ಮಾಡು ವುದಾದರೆ) ಅದು ವ್ಯರ್ಥವಾದೀತು ! ಏಕೆಂದರೆ ಬಲಿಷ್ಠವಾದ ನಿನ್ನ ಕ್ಷಾತ್ರಸ್ವಭಾವವು ನಿನಗೆ ತಿಳಿಯದ ಹಾಗೆಯೇ (ಪರವಶ ಮಾಡಿ) ನಿನ್ನನ್ನು ನಿನ್ನ ಸ್ವಧರ್ಮವಾದ ಯುದ್ಧ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡಿಯೇ ಮಾಡೀತು. (ಆದುದರಿಂದ ನಿನ್ನ ದುರಹಂಕಾರಯುಕ್ತವಾದ ಪೌರುಷ ವನ್ನು ಬಿಟ್ಟು ಯುದ್ಧಕ್ಕಾಗಿ ಏಳು)

ಯಾರೊಬ್ಬರೂ ತಮ್ಮ ಪ್ರಕೃತಿ ಗುಣಗಳಿಗೆ ವಿರುದ್ಧವಾಗಿ ನಡೆಯ ಲಾರರು. ಆದುದರಿಂದಲೇ ಅವರವರ ಪೂರ್ವದ ಪ್ರಕೃತಿ, ಸ್ವಭಾವ, ಗುಣ

ಕರ್ಮಗಳಿಗೆ ಸರಿಹೋಗುವಂತೆ ವರ್ಣಾಶ್ರಮಗಳ ವಿಭಜನೆ ಮಾಡಿ ಪ್ರತ್ಯೇಕ ಪ್ರತ್ಯೇಕ ಧರ್ಮ ಮತ್ತು ಕರ್ಮಗಳನ್ನು ನಿಯಮಿಸಿದ್ದಾರೆ. ಆದಕಾರಣ ಪ್ರತಿಯೊಬ್ಬರೂ ತಮ್ಮ ತಮ್ಮ ವರ್ಣಾಶ್ರಮಗಳಿಗೆ ಸಂಬಂಧಿಸಿದ ಸ್ವಧರ್ಮಾನುಷ್ಠಾನದಿಂದಲೇ ತಮ್ಮ ಪ್ರಕೃತಿಯಲ್ಲಿ ಸುಧಾರಣೆ ಮಾಡಿಕೊಂಡು, ಪರಿಶುದ್ಧಾತ್ಮರಾಗಿ ಪರಮಾತ್ಮನನ್ನು ಸೇರಬೇಕು.

**ಸ್ವಭಾವಜೇನ ಕೌಂತೇಯ, ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್, ಕರಿಷ್ಯಸ್ಯವಶೋಽಪಿ ತತ್ ॥೬೦॥**

ಎಲೈ ಕುಂತೀಪುತ್ರನೇ ! ಪೂರ್ವಜನ್ಮ ಸಂಸ್ಕಾರದಿಂದ ಹುಟ್ಟಿರುವ ಕರ್ಮದಿಂದ ಬದ್ಧನಾಗಿರುವ ನೀನು ಅವಿವೇಕದಿಂದ ಸ್ವಧರ್ಮಾನುಷ್ಠಾನ ಮಾಡಲು ಇಚ್ಛೆಯಿಲ್ಲದವನಾದಾಗ್ಯೂ ಪ್ರಕೃತಿಗೆ ಪರವಶನಾಗಿ ನೀನು ನಿನ್ನ ಕ್ಷಾತ್ರಧರ್ಮವಾದ ಯುದ್ಧವನ್ನು ಮಾಡುವೆ.

**ಈಶ್ವರಃ ಸರ್ವಭೂತಾನಾಂ, ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ, ಯಂತ್ರಾರೂಢಾನಿ ಮಾಯಯಾ ॥**

ಎಲೈ ಅರ್ಜುನಾ ! ಸಮಸ್ತ ಪ್ರಾಣಿಗಳ ಹೃದಯದಲ್ಲಿ ಈಶ್ವರನು ಅಂತರ್ಯಾಮಿರೂಪದಿಂದ ಇದ್ದಾನೆ. ಅವನು ಶರೀರರೂಪವಾದ ಯಂತ್ರದಲ್ಲಿ ಆರೂಢವಾಗಿರುವ ಪ್ರಾಣಿಗಳನ್ನು ಅವರವರ ಕರ್ಮಾನುಸಾರವಾಗಿ ಮಾಯೆಯಿಂದ ಆಯಾಯ ಕರ್ಮಗಳಲ್ಲಿ ಪ್ರೇರಣೆಮಾಡುತ್ತಿರುವನು.

**ತಮೇವ ಶರಣಂ ಗಚ್ಛ, ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ, ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥೬೨॥**

ಎಲೈ ಭರತ ವಂಶೋತ್ಪನ್ನನಾದ ಅರ್ಜುನನೇ! ನೀನು ಸರ್ವ ಪ್ರಕಾರದಿಂದಲೂ ಆ ಪರಮೇಶ್ವರನನ್ನೇ ಶರಣುಹೊಂದುವವನಾಗು. ಆ ಪರಮೇಶ್ವರನ ಪ್ರಸಾದದಿಂದ ನೀನು ಸರ್ವೋತ್ತಮವಾದ ಶಾಂತಿಯನ್ನು ಮತ್ತು ಶಾಶ್ವತಸ್ಥಾನವನ್ನೂ ಹೊಂದುವೆ.

**ಇತಿ ತೇ ಜ್ಞಾನಮಾಖ್ಯಾತಂ, ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ, ಯಥೇಚ್ಛಸಿ ತಥಾ ಕುರು ॥೬೩॥**

ಈ ರೀತಿಯಾಗಿ ಅತಿ ಗೋಪ್ಯವಾದ ಜ್ಞಾನದ ಸ್ವರೂಪವು ನನ್ನಿಂದ ಹೇಳಲ್ಪಟ್ಟಿತು. ನೀನು ನನ್ನ ಉಪದೇಶವಚನಗಳನ್ನು ಚೆನ್ನಾಗಿ ವಿಮರ್ಶೆ ಮಾಡು. ಆ ಬಳಿಕ ಹೇಗೆ ತೋರುವುದೋ ಹಾಗೆ ಮಾಡು.

**ಸರ್ವಗುಹ್ಯತಮಂ ಭೂಯಃ, ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ, ತತೋ ವಕ್ಷ್ಯಾಮಿ ತೇ ಹಿತಮ್॥೬೪॥**

ಪುನಃ ಎಲ್ಲಕ್ಕಿಂತಲೂ ಅತ್ಯಂತ ಗೋಪ್ಯವಾದ ಸರ್ವೋತ್ತಮವಾದ ನನ್ನ ವಚನವನ್ನು ಕೇಳು. ನೀನು ನನಗೆ ತುಂಬ ಪ್ರಿಯನಾದವನೆಂದು ನಂಬಿಕೆ ಇರುವುದರಿಂದ ನಿನ್ನ ಹಿತವನ್ನು ಉದ್ದೇಶಿಸಿ ಹೇಳುವೆನು.

**ಮನ್ಮನಾ ಭವ ಮದ್ಭಕ್ತೋ, ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ, ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥**

ನೀನು ನನ್ನಲ್ಲೇ ಚಿತ್ತವುಳ್ಳವನಾಗು. ನನ್ನ ಭಕ್ತನಾಗು. ನನ್ನನ್ನೇ ಪೂಜಿಸು. ಪರಮೇಶ್ವರನಾದ ನನ್ನನ್ನು ನಮಸ್ಕರಿಸು. ಹೀಗೆ ಸರ್ವದಾ ನನ್ನಲ್ಲಿ ಮನವುಳ್ಳ ನೀನು ನಿಜವಾಗಿಯೂ ನನ್ನನ್ನೇ ಹೊಂದುವೆ. ನೀನು ನನಗೆ ಅತ್ಯಂತ ಪ್ರಿಯನು. ಆದಕಾರಣ ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಿರುವೆನು.

**ಸರ್ವಧರ್ಮಾನ್ ಪರಿತ್ಯಜ್ಯ, ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ, ಮೋಕ್ಷಯಿಷ್ಯಾಮಿ ಮಾ ಶುಚಃ ॥**

ನೀನು ಸಮಸ್ತ ಧರ್ಮಗಳನ್ನೂ ಬಿಟ್ಟು ನನ್ನೊಬ್ಬನನ್ನೇ ಶರಣು ಹೊಂದುವವನಾಗು. ಆಗ ಕರ್ಮತ್ಯಾಗದಿಂದ ಆಗಬಹುದಾದ ಪಾಪದಿಂದ ನಿನ್ನನ್ನು ನಾನು ಉದ್ಧರಿಸುವೆನು. ನೀನು ಶೋಕಮಾಡಬೇಡ.

**ಇದಂ ತೇ ನಾತಪಸ್ಕಾಯ, ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ, ನ ಚ ಮಾಂ ಯೋಽಭ್ಯಸೂಯತಿ ॥**

ನಾನು ನಿನಗೆ ಉಪದೇಶಮಾಡಿರುವ ಈ ಗೀತಾಶಾಸ್ತ್ರವನ್ನು ಇಂದ್ರಿಯ ನಿಗ್ರಹವಿಲ್ಲದವನಿಗೂ, ಪರಮೇಶ್ವರನಲ್ಲಿ ಭಕ್ತಿಯಿಲ್ಲದವನಿಗೂ, ಗುರುಶುಶ್ರೂಷೆ ಮಾಡದವನಿಗೂ, ಪರಮೇಶ್ವರನಾದ ನನ್ನಲ್ಲಿ ದೋಷದೃಷ್ಟಿಯುಳ್ಳವನಿಗೂ ಯಾವಾಗಲೂ ಹೇಳಕೂಡದು.

**ಯ ಇಮಂ ಪರಮಂ ಗುಹ್ಯಂ, ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ, ಮಾಮೇವೈಷ್ಯತ್ಯ ಸಂಶಯಃ ॥೬೮॥**

ಅತ್ಯಂತ ಗೋಪ್ಯವಾದ ಈ ಗೀತಾಶಾಸ್ತ್ರವನ್ನು ನನ್ನಲ್ಲಿ ಪರಮ ಭಕ್ತಿಯುಳ್ಳವನಾಗಿ ನನ್ನ ಭಕ್ತರಾದವರಿಗೆ ಯಾವನು ಉಪದೇಶಿಸುವನೋ ಅವನು ನಿಸ್ಸಂಶಯವಾಗಿಯೂ ನನ್ನನ್ನೇ ಸೇರುವನು.

**ನ ಚ ತಸ್ಮಾನ್ಮನುಷ್ಯೇಷು, ಕಶ್ಚಿನ್ಮೇ ಪ್ರಿಯ ಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾ, ದನ್ಯಃ ಪ್ರಿಯತರೋ ಭುವಿ ॥೬೯॥**

ಹೀಗೆ ಈ ಗೀತಾಶಾಸ್ತ್ರವನ್ನು ನನ್ನ ಸದ್ಭಕ್ತರಿಗೆ ಉಪದೇಶಮಾಡುವವನಿಗಿಂತ ನನಗೆ ಅತ್ಯಂತ ಪ್ರಿಯನು ಮನುಷ್ಯರಲ್ಲಿ ಯಾವನೂ ಇಲ್ಲ. ಪ್ರಪಂಚದಲ್ಲಿ ಇಂತಹ ಪ್ರಿಯತಮನು ಮತ್ತೊಬ್ಬನು ಪುಟ್ಟುವುದೂ ಇಲ್ಲ.

**ಅಧ್ಯೇಷ್ಯತೇ ಚ ಯ ಇಮಂ, ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹ, ಮಿಷ್ಟಃ ಸ್ಯಾಮಿತಿ ಮೇ ಮತಿಃ ॥೭೦॥**

ಧರ್ಮಯುಕ್ತವಾಗಿರುವ ನಮ್ಮಿಬ್ಬರ ಸಂವಾದರೂಪವಾದ ಈ ಗೀತಾಶಾಸ್ತ್ರವನ್ನು ಯಾವನು ಅಧ್ಯಯನಮಾಡುವನೋ, ಜ್ಞಾನಯಜ್ಞದಿಂದ ಅವನಿಂದ ನಾನು ಪೂಜಿತನಾಗಿರುವೆನು. ಹೀಗೆಂಬುದೇ ನನ್ನ ಅಭಿಪ್ರಾಯವು.

**ಶ್ರದ್ಧಾವಾನನಸೂಯಶ್ಚ, ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾನ್ ಲೋಕಾ, ನ್ಪ್ರಾಪ್ನುಯಾತ್ಪುಣ್ಯ-**
**ಕರ್ಮಣಾಮ್ ॥೭೧॥**

ಯಾವ ಪುರುಷನು ಶ್ರದ್ಧಾಯುಕ್ತನಾಗಿ ಮತ್ತು ಅಸೂಯಾರಹಿತನಾಗಿ ಇದ್ದು ಈ ಗೀತಾಶಾಸ್ತ್ರವನ್ನು ಶ್ರವಣಮಾಡುವನೋ, ಅವನೂ ಸಹ ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದಿದವನಾಗಿ, ಪುಣ್ಯಕರ್ಮಗಳನ್ನು ಮಾಡಿದವರಿಗೆ ಲಭಿಸುವ ಉತ್ತಮ ಲೋಕಗಳನ್ನು ಹೊಂದುವನು.

**ಕಚ್ಚಿದೇತಚ್ಛ್ರುತಂ ಪಾರ್ಥ, ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ, ಪ್ರಣಷ್ಟಸ್ತೇ ಧನಂಜಯ ॥೭೨॥**

ಎಲೈ ಪಾರ್ಥನೆ ! ನೀನು ಈ ಗೀತಾಶಾಸ್ತ್ರವನ್ನು ಏಕಾಗ್ರಚಿತ್ತದಿಂದ ಕೇಳಿದೆಯಾ ? ಎಲೈ ಧನಂಜಯನೇ ! ಅಜ್ಞಾನದಿಂದ ಹುಟ್ಟಿರುವ ನಿನ್ನ ಮೋಹವೇನಾದರೂ ನಷ್ಟವಾಯಿತೇ ? ( ಹೇಳುವವನಾಗು )

ಅರ್ಜುನ ಉವಾಚ

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ, ತ್ವತ್ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸಂದೇಹಃ, ಕರಿಷ್ಯೇ ವಚನಂ ತವ ॥೭೩॥

ಅರ್ಜುನನಿಂತೆಂದನು :- ಎಲೈ ಅಚ್ಯುತನೇ ! ನಿನ್ನ ಅನುಗ್ರಹ ದಿಂದ ನನ್ನ ಮೋಹವು ನಷ್ಟವಾಯಿತು ಮತ್ತು ನಷ್ಟವಾಗಿದ್ದ ಸ್ಮೃತಿಯೂ ನನಗೆ ಪುನಃ ಪ್ರಾಪ್ತಿಯಾಗಿದೆ. ಈಗ ನಾನು ಸಂದೇಹವಿಲ್ಲದವನಾಗಿರು ವೆನು. ನಿನ್ನ ಆಜ್ಞಾನುಸಾರ ನಡೆಯುವೆನು.

ಸಂಜಯ ಉವಾಚ

ಇತ್ಯಹಂ ವಾಸುದೇವಸ್ಯ, ಪಾರ್ಥಸ್ಯ ಚ ಮಹಾತ್ಮನಃ ।
ಸಂವಾದಮಿಮಮಶ್ರೌಷ, ಮದ್ಭುತಂ ರೋಮಹರ್ಷಣಮ್ ॥೭೪॥

ಸಂಜಯನು ಧೃತರಾಷ್ಟ್ರನನ್ನು ಕುರಿತು ಇಂತೆಂದನು—

ಹೀಗೆ ರೋಮಾಂಚಕಾರಿಯಾದ ಮತ್ತು ಅದ್ಭುತವಾದ ಮಹಾನು ಭಾವನಾದ ವಾಸುದೇವನ ಮತ್ತು ಅರ್ಜುನನ ಸಂವಾದವನ್ನು ಕೇಳಿದೆನು.

ವ್ಯಾಸಪ್ರಸಾದಾಚ್ಛ್ರುತವಾ, ನೇತದ್ಗುಹ್ಯಮಹಂ ಪರಮ್ ।
ಯೋಗಂ ಯೋಗೇಶ್ವರಾತ್ ಕೃಷ್ಣಾ, ತ್ಸಾಕ್ಷಾತ್ಕಥಯತಃ ಸ್ವಯಮ್॥

ಯೋಗೇಶ್ವರನಾದ ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನ ಮುಖಾರವಿಂದ ದಿಂದ ಹೇಳಲ್ಪಟ್ಟಿರುವುದಾಗಿಯೂ, ಅತ್ಯಂತ ಗೋಪ್ಯವಾಗಿಯೂ ಇರುವ ಯೋಗಶಾಸ್ತ್ರವನ್ನು ವ್ಯಾಸಮಹರ್ಷಿಗಳಿಂದ ನಾನು ಕೇಳಿದೆನು.

ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ, ಸಂವಾದಮಿಮಮದ್ಭುತಮ್ ।
ಕೇಶವಾರ್ಜುನಯೋಃ ಪುಣ್ಯಂ, ಹೃಷ್ಯಾಮಿ ಚ ಮುಹುರ್ಮುಹುಃ ॥

ಹೇ ಧೃತರಾಷ್ಟ್ರನೇ! ಶ್ರೀ ಕೃಷ್ಣಾರ್ಜುನರ ಪುಣ್ಯಕರವಾದ ಈ ಅದ್ಭುತವಾದ ಸಂವಾದವನ್ನು ಬಾರಿಬಾರಿಗೂ ಸ್ಮರಿಸುತ್ತಾ ಪುನಃ ಪುನಃ ಹರ್ಷವನ್ನು ಹೊಂದುತ್ತಿರುವೆನು.

ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ, ರೂಪಮತ್ಯದ್ಭುತಂ ಹರೇಃ ।
ವಿಸ್ಮಯೋ ಮೇ ಮಹಾನ್‌ರಾಜನ್, ಹೃಷ್ಯಾಮಿ ಚ ಪುನಃ ಪುನಃ ॥

ಎಲೈ ರಾಜನೇ ! ಅತಿ ಅದ್ಭುತವಾಗಿರುವ ಶ್ರೀ ಕೃಷ್ಣಪರಮಾತ್ಮನ ಆ ವಿಶ್ವರೂಪವನ್ನು ಅಡಿಗಡಿಗೆ ಸ್ಮರಿಸುತ್ತಾ, ನನಗೆ ಮಹಾ ವಿಸ್ಮಯವಾಗುತ್ತಿರುವುದಲ್ಲದೆ ಪುನಃ ಪುನಃ ಹರ್ಷವೂ ಆಗುತ್ತಿರುವುದು.

ಯತ್ರ ಯೋಗೇಶ್ವರಃ ಕೃಷ್ಣೋ, ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿ, ರ್ಧ್ರುವಾ ನೀತಿರ್ಮತಿರ್ಮಮ ॥೭೮॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಮೋಕ್ಷಸನ್ಯಾಸಯೋಗೋನಾಮ
ಅಷ್ಟಾದಶೋಽಧ್ಯಾಯಃ

ಎಲ್ಲಿ ಯೋಗೇಶ್ವರನಾದ ಶ್ರೀಕೃಷ್ಣಪರಮಾತ್ಮನು ಇರುವನೋ ಮತ್ತು ಎಲ್ಲಿ ಧನುರ್ಧಾರಿಯಾದ ಅರ್ಜುನನೂ ಸಹ ಇರುವನೋ, ಅಲ್ಲಿ ಲಕ್ಷ್ಮಿಯೂ, ವಿಜಯವೂ, ಶೋಭೆಯೂ ಮತ್ತು ಅಚಲವಾದ ನೀತಿಯೂ ಇರುವುದೆಂಬುದಾಗಿ ನನ್ನ ಅಭಿಪ್ರಾಯವು.

ಇಂತು ಶ್ರೀ ಮದ್ಭಗವದ್ಗೀತೆಯಲ್ಲಿ ಮೋಕ್ಷಸನ್ಯಾಸಯೋಗವೆಂಬ
ಹದಿನೆಂಟನೆಯ ಅಧ್ಯಾಯವು ಸಂಪೂರ್ಣವು.

॥ ಸಮಾಪ್ತೋಽಯಂ ಗ್ರಂಥಃ ॥
ಶ್ರೀ ಕೃಷ್ಣಾರ್ಪಣಮಸ್ತು.



# ಅಥ ಚಂದ್ರಶೇಖರಾಷ್ಟಕಃ ಪ್ರಾರಂಭಃ



ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ಪಾಹಿಮಾಮ್ ।
ಚಂದ್ರಶೇಖರ ಚಂದ್ರಶೇಖರ ಚಂದ್ರಶೇಖರ ರಕ್ಷಮಾಮ್ ॥೧॥

ರತ್ನಸಾನುಶರಾಸನಂ ರಜತಾದ್ರಿಶೃಂಗನಿಕೇತನಂ ।
ಶಿಂಜಿನೀಕೃತ ಪನ್ನಗೇಶ್ವರಮಚ್ಯುತಾನನಸಾಯಕಮ್ ॥
ಕ್ಷಿಪ್ರದಗ್ಧಪುರತ್ರಯಂ ತ್ರಿದಶಾಲಯೈರಭಿವಂದಿತಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ ॥೨॥

ಪಂಚಪಾದಪ ಪುಷ್ಪಗಂಧಪದಾಂಬುಜದ್ವಯಶೋಭಿತಂ ।
ಫಾಲಲೋಚನಜಾತ ಪಾವಕದಗ್ಧ ಮನ್ಮಥವಿಗ್ರಹಮ್ ॥
ಭಸ್ಮದಿಗ್ಧಕಳೇಬರಂ ಭವನಾಶನಂ ಭವಮವ್ಯಯಂ ।
ಚಂದ್ರಶೇಖರ— ॥೩॥

ಮತ್ತವಾರಣಮುಖ್ಯಚರ್ಮ ಕೃತೋತ್ತರೀಯ ಮನೆ .
ಪಂಕಜಾಸನ ಪದ್ಮಲೋಚನಪೂಜಿತಾಂಘ್ರಿಸರೋರುಹಮ್ ॥
ದೇವಸಿಂಧುತರಂಗಸೀಕರಸಿಕ್ತಶೀತ ಜಟಾಧರಂ ।
ಚಂದ್ರಶೇಖರ— ॥೪॥

ಯಕ್ಷರಾಜಸಖಂ ಭಗಾಕ್ಷಹರಂ ಭುಜಂಗವಿಭೂಷಣಂ ।
ಶೈಲರಾಜಸುತಾಪರಿಷ್ಕೃತ ಚಾರುವಾಮಕಳೇಬರಮ್ ॥
ಕ್ಷ್ವೇಡನೀಲಗಳಂ ಪರಶ್ವಥಧಾರಿಣಂ ಮೃಗಧಾರಿಣಂ ।
ಚಂದ್ರಶೇಖರ— ॥೫॥

ಕುಂಡಲೀಕೃತ ಕುಂಡಲೇಶ್ವರಕುಂಡಲಮ್ ವೃಷವಾಹನಂ ।
ನಾರದಾದಿಮುನೀಶ್ವರಸ್ತುತವೈಭವಂ ಭುವನೇಶ್ವರಮ್ ॥
ಅಂಧಕಾಂತಕಮಾಶ್ರಿತಾಮರಪಾದಪಂ ಶಮನಾಂತಕಂ ।
ಚಂದ್ರಶೇಖರ— ॥೬॥

ಭೇಷಜಂ ಭವರೋಗಿಣಾಮಖಿಲಾಪದಾಮಪಹಾರಿಣಂ ।
ದಕ್ಷಯಜ್ಞವಿನಾಶನಂ ತ್ರಿಗುಣಾತ್ಮಕಂ ತ್ರಿವಿಲೋಚನಮ್ ॥
ಭುಕ್ತಿಮುಕ್ತಿಫಲಪ್ರದಂ ಸಕಲಾಘಸಂಘನಿಬರ್ಹಣಂ ।
ಚಂದ್ರಶೇಖರ— ॥೭॥

ಭಕ್ತವತ್ಸಲಮರ್ಚಿತಂ ನಿಧಿಮಕ್ಷಯಂ ಹರಿದಂಬರಂ ।
ಸರ್ವಭೂತಪತಿಂ ಪರಾತ್ಪರಮಪ್ರಮೇಯಮನುತ್ತಮಮ್ ॥
ಸೋಮವಾರಿಣ ಭೂಹುತಾಶನ ಸೋಮಪಾನಿಲಖಾಕೃತಿಂ ।
ಚಂದ್ರಶೇಖರ— ॥೮॥

ವಿಶ್ವಸೃಷ್ಟಿವಿಧಾಯಿನಂ ಪುನರೇವಪಾಲನ ತತ್ಪರಂ ।
ಸಂಹರಂತಮಪಿ ಪ್ರಪಂಚಮಶೇಷಲೋಕನಿವಾಸಿನಮ್ ॥
ಕ್ರೀಡಯಂತಮಹರ್ನಿಶಂ ಗಣನಾಥಯೂಥಸಮನ್ವಿತಂ ।
ಚಂದ್ರಶೇಖರ— ॥೯॥

ಮೃತ್ಯುಭೀತಮೃಕಂಡಸೂನುಕೃತಸ್ತವಂ ಶಿವಸನ್ನಿಧೌ ।
ಯತ್ರಕುತ್ರಚ ಯಃ ಪಠೇನ್ನಹಿತಸ್ಯ ಮೃತ್ಯುಭಯಂಭವೇತ್ ॥
ಪೂರ್ಣಮಾಯುರರೋಗತಾಮಖಿಲಾರ್ಥಸಂಪದಮಾದರಂ ।
ಚಂದ್ರಶೇಖರ ಏವ ತಸ್ಯ ದದಾತಿ ಮುಕ್ತಿಮಯತ್ನತಃ ॥೧೦॥

ಇತಿ ಶ್ರೀ ಮಾರ್ಕಂಡೇಯ ವಿರಚಿತಂ ಚಂದ್ರಶೇಖರಾಷ್ಟಕಂ

ಸಂಪೂರ್ಣಮ್.



# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 10 | 20 | ಸಮೂರಹ್ಯ | ಸಮಾರುಹ್ಯ |
| 18 | 27 | ಯುಕ್ತೈೀ | ಯುಕ್ತೇ |
| 23 | 7 | ಶಾಲಾಃ | ಶ್ಯಾಲಾಃ |
| 59 | 12 | ಸಿನೇ | ಸೀನೇ |
| 60 | 19 | ರಹಿತನಾಗಿ | ರಹಿತರಾಗಿ |
| 65 | 19 | ಆಪಾನೇ | ಅಪಾನೇ |
| 67 | 9 | ವುನಃ | ಪುನಃ |
| 67 | 13 | ಆಪಿ | ಅಪಿ |
| 75 | 15 | ವೃಷಯಃ | ವ್ಯೃಷಯಃ |
| 77 | 16 | ಮನಿನಶೀಲ | ಮನನಶೀಲ |
| 95 | 14 | ಆವಿಚಾರವೇ | ಅವಿಚಾರವೇ |
| 108 | 10 | ಭಕ್ತಾ | ಭಕ್ತ್ಯಾ |
| 109 | 6 | ಪಿತಾಮಮಹ | ಪಿತಾಮಹ |
| 111 | 6 | ದೇತಾ | ದೇವತಾ |
| 112 | 18 | ಭಗದನುಗ್ರಹಕ್ಕೆ | ಭಗವದನುಗ್ರಹಕ್ಕೆ |
| 116 | 5 | ಹಿತಾಪೇಕ್ಷಿ | ಹಿತಾಪೇಕ್ಷೆ |
| 117 | 18 | ಮಹರ್ಷರ್ಯಃ | ಮಹರ್ಷಯಃ |
| 117 | 21 | ಸಾಯಂಭು | ಸ್ವಾಯಂಭು |
| 119 | 24 | ಮಿದುರ್ದೇವಾ | ವಿದುರ್ದೇವಾ |
| 122 | 23 | ಅದಿಯ | ಅದಿತಿಯ |
| 124 | 7 | ವಾಯವೂ | ವಾಯುವೂ |
| 125 | 3 | ಇಲ್ಲವೂ | ಇವೆಲ್ಲವೂ |
| 126 | 25 | ವಿಭೂತಗಳ | ವಿಭೂತಿಗಳ |
| 129 | 15 | ದಿವಚಕ್ಷು | ದಿವ್ಯಚಕ್ಷು |
| 130 | 16 | ದ್ಯಾವಸ್ತ್ರಸ್ಯ | ದ್ಯಾಸಸ್ತ್ರಸ್ಯ |
| 132 | 2 | ಸರ್ವಸ್ರ | ಸರ್ವತ್ರ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 136 | 22 | ಹತಾಂಸ್ತ್ರ್ವ | ಹತಾಂ ಸ್ತ್ವಂ |
| 138 | 20 | ಶಶಾಂಕಂ | ಶಶಾಂಕಃ |
| 138 | 28 | ಸರ್ವಸರ್ವ | ಸರ್ವ |
| 140 | 12 | ವ್ರವ್ಯಥಿತಂ | ಪ್ರವ್ಯಥಿತಂ |
| 141 | 3 | ತದನ್ಯೇನ | ತ್ವದನ್ಯೇನ |
| 144 | 10 | ಸ್ತ್ರೀಮೇ | ಸ್ತ್ರೀವೇ |
| 145 | 9 | ಬ್ರಹ್ಮಾವ್ಯೇತಿ | ಬ್ರಹ್ಮಾಪ್ಯೇತಿ |
| 145 | 14 | ಜ್ಞಾತೀ | ಜ್ಞಾನೀ |
| 147 | 11 | ಮೇ ಭಕ್ತಃ | ಮದ್ಭಕ್ತಃ |
| 155 | 10 | ಕಾರ್ಯ ಕಾರಣ | ಕಾರ್ಯಕರಣ |
| 157 | 15 | ಪಾರಾಯಣರಾದ | ಪರಾಯಣರಾದ |
| 172 | 24 | ನನ್ನದಾರುವುದು | ನನ್ನದಾಗಿರುವುದು |
| 174 | 12 | ಜಗದ್ಬಾಸಯತೇ | ಜಗದ್ಭಾಸಯತೇ |
| 179 | 12 | ವೇದಾಧ್ಯಾಯನ | ವೇದಾಧ್ಯಯನ |
| 182 | 4 | ಸದ್ಗ್ರಾಹಾನಾ | ಸದ್ಗ್ರಾಹಾನ್ |
| 190 | 1 | ಮಾರ್ಜನಮ್ | ಮಾರ್ಜವಮ್ |
| 191 | 24 | ಪುಣ್ಯಕ್ಷೇತ್ಯ | ಪುಣ್ಯಕ್ಷೇತ್ರ |
| 194 | 19 | ಸಂಪ್ರಕೀರ್ತಿತ | ಸಂಪ್ರಕೀರ್ತಿತಃ |
| 198 | 20 | ಜತ್ತ್ರಿನ | ಜಗತ್ತ್ರಿನ |
| 199 | 12 | ಭೂತಜಾತಕ | ಭೂತಜಾತ |
| 199 | 9 | ಮೀ | ಮಿಾ |
| 199 | 20 | ಯಶ್ತು | ಯತ್ತು |



# ಅಥ ನಾರಾಯಣಸ್ತೋತ್ರ ಪ್ರಾರಂಭಃ

ನಾರಾಯಣ ನಾರಾಯಣ ಜಯ ಗೋವಿಂದ ಹರೇ ।
ನಾರಾಯಣ ನಾರಾಯಣ ಜಯ ಗೋಪಾಲ ಹರೇ ॥

(ಧೃವಪದಂ)

ಕರುಣಾಪಾರಾವಾರ ವರುಣಾಲಯ ಗಂಭೀರ । ನಾರಾಯಣ ॥೧॥
ನವನೀರದಸಂಕಾಶ ಕೃತಕಲಿಕಲ್ಮಷನಾಶ । ನಾರಾಯಣ ॥೨॥
ಯಮುನಾತೀರವಿಹಾರ ಧೃತಕೌಸ್ತುಭಮಣಿಹಾರ । ನಾರಾಯಣ ॥೩॥
ಪೀತಾಂಬರಪರಿಧಾನ ಸುರಕಲ್ಯಾಣನಿಧಾನ । ನಾರಾಯಣ ॥೪॥
ಮಂಜುಳಗುಂಜಾಭೂಷ ಮಾಯಾಮಾನುಷವೇಷ । ನಾರಾಯಣ ॥೫॥
ರಾಧಾಽಧರಮಧುರಸಿಕ ರಜನೀಕರಕುಲತಿಲಕ । ನಾರಾಯಣ ॥೬॥
ಮುರಳೀಗಾನವಿನೋದ ವೇದಸ್ತುತಭೂಪಾದ । ನಾರಾಯಣ ॥೭॥
ಬರ್ಹಿನಿಬರ್ಹಾಪೀಡ ನಟನಾಟಕ ಫಣಿಕ್ರೀಡ । ನಾರಾಯಣ ॥೮॥
ವಾರಿಜಭೂಷಾಭರಣ ರಾಜೀವ ರುಕ್ಮಿಣೀರಮಣ । ನಾರಾಯಣ ॥೯॥
ಜಲರುಹದಳನಿಭನೇತ್ರ, ಜಗದಾರಂಭಕಸೂತ್ರ । ನಾರಾಯಣ ॥೧೦॥
ಪಾತಕರಜನೀಸಂಹರ ಕರುಣಾಲಯ ಮಾಮುದ್ಧರ । ನಾರಾಯಣ ॥೧೧॥
ಅಘಬಕಕ್ಷಯ ಕಂಸಾರೇ ಕೇಶವ ಕೃಷ್ಣಮುರಾರೇ । ನಾರಾಯಣ ॥೧೨॥
ಹಾಟಕನಿಭಪೀತಾಂಬರ ಅಭಯಂ ಕುರು ಮೇ ಮಾವರ । ನಾರಾಯಣ॥೧೩॥
ದಶರಥರಾಜಕುಮಾರ ದಾನವಮದಸಂಹಾರ । ನಾರಾಯಣ ॥೧೪॥
ಗೋವರ್ಧನಗಿರಿರಮಣ ಗೋಪೀಮಾನಸಹರಣ । ನಾರಾಯಣ ॥೧೫॥
ಸರಯೂತೀರವಿಹಾರ ಸಜ್ಜನಋಷಿಮಂದಾರ । ನಾರಾಯಣ ॥೧೬॥
ವಿಶ್ವಾಮಿತ್ರಮಖತ್ರ ವಿವಿಧಪರಾ ಸುಚರಿತ್ರ । ನಾರಾಯಣ ॥೧೭॥
ಧ್ವಜವಜ್ರಾಂಕುಶಪಾದ ಧರಣೀಸುತಸಹಮೋದ । ನಾರಾಯಣ ॥೧೮॥
ಜನಕಸುತಾಪ್ರತಿಪಾಲ ಜಯಜಯಸಂಸ್ಮೃತಿಲೀಲ । ನಾರಾಯಣ ॥೧೯॥
ದಶರಥವಾಗ್ಧೃತಿಭಾರ ದಂಡಕವನಸಂಚಾರ । ನಾರಾಯಣ ॥೨೦॥
ಮುಷ್ಟಿಕಚಾಣೂರಸಂಹಾರ ಮುನಿಮಾನಸವಿಹಾರ । ನಾರಾಯಣ ॥೨೧॥

ವಾಲೀನಿಗ್ರಹಶೌರ್ಯ ವರಸುಗ್ರೀವ ಹಿತಾರ್ಯ । ನಾರಾಯಣ ॥೨೨॥
ಮಾಂ ಮುರಳೀಕರ ಧೀವರ ಪಾಲಯ ಪಾಲಯ ಶ್ರೀಧರ । ನಾರಾ ॥೨೩॥
ಜಲನಿಧಿಬಂಧನಧೀರ ರಾವಣಕಂಠವಿದಾರ । ನಾರಾಯಣ ॥೨೪॥
ತಾಟೀಮದದಳನಾಢ್ಯನಟಗುಣ ವಿವಿಧಧನಾಢ್ಯ । ನಾರಾಯಣ ॥೨೫॥
ಗೌತಮಪತ್ನೀಪೂಜನ ಕರುಣಾಘನಾವಲೋಕನ । ನಾರಾಯಣ ॥೨೬॥
ಸಂಭ್ರಮಸೀತಾಹಾರ ಸಾಕೇತಪುರವಿಹಾರ । ನಾರಾಯಣ ॥೨೭॥
ಅಚಲೋದ್ಧೃತಿ ಚಂಚತ್ಕರ ಭಕ್ತಾನುಗ್ರಹತತ್ಪರ । ನಾರಾಯಣ ॥೨೮॥
ನೈಗಮಗಾನವಿನೋದ ರಕ್ಷಸುತಪ್ರಹ್ಲಾದ । ನಾರಾಯಣ ॥೨೯॥
ಭಾರತಿಯತಿವರ ಶಂಕರನಾಮಾಮೃತಮಖಿಲಾಂತರ ।
ನಾರಾಯಣ ನಾರಾಯಣ ಜಯ ಗೋಪಾಲ ಹರೇ ॥
ನಾರಾಯಣ ನಾರಾಯಣ ಜಯ ಗೋವಿಂದ ಹರೇ ॥೩೦॥

ಇತಿ ಶ್ರೀಮಚ್ಛಂಕರಾಚಾರ್ಯ ವಿರಚಿತಂ ನಾರಾಯಣಸ್ತೋತ್ರಂ

ಸಂಪೂರ್ಣಮ್

